ಸುದರ್ಶನ ಪ್ರಕಾಶನ-೪

# ಬಾಳ ಬಂಧನ

ಕಾದಂಬರಿ

ದಾಶರಥಿ ದೀಕ್ಷಿತ್

ಸುದರ್ಶನ ಪ್ರಕಾಶನ
ತಿಪಟೂರು

# ಮೊದಲ ಓಲೆ

ಶ್ರೀ ಕಾ. ರಾ. ನಾಗರಾಜ
[illegible]ಸ- ಪ್ರಕಾಶನ
ತಿಪಟೂರು, ಇವರ ಸ|| ಕ್ಕೆ.

ಪ್ರಿಯ ಪ್ರಕಾಶಕರೆ,

ಓದುಗರ ಬರಹಗಾರರ ನಡುವೆ ಸಂಪರ್ಕ ಬೆಳೆಯಲು ಕಾರಣರಾದ ನಿಮಗೆ, ಈ ಕಾಗದದ ಮೂಲಕ ನನ್ನ ಕಾದಂಬರಿಯ ಬಗ್ಗೆ ಹೇಳಬೇಕಾದ ಎರಡು ಮಾತು ತಿಳಿಸಿದರೆ ಅದನ್ನು ಓದುಗರಿಗೆ ತಿಳಿಸುವಿರೆಂಬ ನಂಬಿಕೆ ಯಿಂದ ಈ ಪತ್ರ ಬರೆಯುತ್ತಿದ್ದೇನೆ. ಮೊಟ್ಟಮೊದಲನೆಯದಾಗಿ ನನ್ನ ಈ ಮೊದಲ ಕಾದಂಬರಿ ಪ್ರಕಟಿಸಿದ್ದಕ್ಕಾಗಿ ನಿಮಗೆ ವಂದನೆಗಳು.

ಬರಿಯ ನಗೆನಾಟಕ, ಹಾಸ್ಯಕಥೆಗಳಲ್ಲಿ ಕೈ ಆಡಿಸುತ್ತಿದ್ದ ನಾನು 'ಬಾಳ ಬಂಧನ'ದಿಂದ ಕಾದಂಬರಿಕಾರನಾಗಿದ್ದೇನೆ. ಇದು ಕಾದಂಬರಿಯ ಯುಗವಷ್ಟೆ, ಕಾಲಕ್ಕೆ ತಕ್ಕ ಕುಣಿತ ಇದ್ದರೇ ಚೆನ್ನ. ಮುಂಜಾವಿಂದ ಸಂಜೆಯತನಕ ಬಿಡುವಿಲ್ಲದ ಕಾರ್ಖಾನೆಯ ಕೆಲಸದ ನಡುವೆ ಈ ಕಾದಂಬರಿ ಬರೆದದ್ದು ನನ್ನ ಮಿತ್ರರನೇಕರಿಗೆ ಆಶ್ಚರ್ಯವಾಗಿದೆ. ಅವರಿಗಷ್ಟೇ ಏಕೆ ನನಗೂ ಆಶ್ಚರ್ಯವೇ ಆಗಿದೆ. ಈ ಕಾದಂಬರಿ ರಚನೆಗೆ ನನಗೆ ತೋರಿದ ತೋರ ಬೆಳಕೆಂದರೆ, ಓದುಗರು ನನ್ನ ಹಾಸ್ಯ ಕಥೆಗಳಿಗಿತ್ತ ಪ್ರೋತ್ಸಾಹ–ಸ್ನೇಹಿತರ ಒತ್ತಾಯ, ಮತ್ತೆ ಕಥೆ ಹೇಳಬೇಕೆಂಬ ನನ್ನ ಹಂಬಲ, ಬರೆಯಬೇಕೆಂಬ ಕೆಚ್ಚು (ಹುಚ್ಚೆ ?).

ಹಿಂದೆ ನಾವು (ಚಿತ್ರಾ ಕಲಾವಿದರು ಬೆಂಗಳೂರು–೪,) ಆಂಧ್ರದೇಶದ ಪ್ರಗತಿ ಶೀಲ ಲೇಖಕ ಶ್ರೀ ಆತ್ರೇಯರ ಎನ್.ಜಿ. ಓ ಅಥವ ಗುಮಾಸ್ತೆ ನಾಟಕ ಆಡಿದೆವು. (ಕನ್ನಡ ಅನುವಾದ ಶ್ರೀ ವಾಸುದೇವ, ಮುಂಬಯಿ) ಅದನ್ನು ಅಭ್ಯಾಸಿಸುವಾಗೆಲ್ಲಾ ಈ ಗುಮಾಸ್ತೆಗಳ ಜೀವನದ ಬಗ್ಗೆ ಒಂದು ಕಾದಂಬರಿ

ಬರೆಯಬೇಕೆನಿಸುತ್ತಿತ್ತು. ಆ ಯೋಚನೆಯ ಫಲವೇ "ಬಾಳ ಬಂಧ" ಆ ನಾಟಕದ ಯಾವ ಅಂಶವಾಗಲಿ ಯಾವ ಸನ್ನಿವೇಶವಾಗಲಿ ಇಲ್ಲ. ಅದು ಕೇವಲ ಪ್ರಚೋದಕ ಸಾಧನಮಾತ್ರವಾಗಿತ್ತು.

ಈ ಕಾದಂಬರಿಯಲ್ಲಿ ನಾನು ಯಾವ ತತ್ವ ಅಥವ ಸಮಸ್ಯೆ ಪರಿಹಾರ ಮಾಡುವ ಗೋಜಿಗೆ ಹೋಗಿಲ್ಲ. ನಾ ಕಂಡ ಗುಮಾಸ್ತೆಗಳ ಜೀವನ ಯಥಾವತ್ತಾಗಿ ಚಿತ್ರಿಸಲು ಯತ್ನಿಸಿದ್ದೇನೆ. ಸುಬ್ಬರಾಯ, ರಾಜೀವಿ, ಸುಶೀಲೆ, ತಿಪ್ಪಯ್ಯ ಮತ್ತಿತರ ಈ ಪಾತ್ರಗಳು ಜೀವಂತವಾಗಿ ಓದುಗರನ್ನು ಸೆರೆ ಹಿಡಿವಂತೆ ಮಾಡಿದರೆ ನನ್ನ ಶ್ರಮ ಸಾರ್ಥಕ. ಇಲ್ಲಿ ಬರುವ ವ್ಯಕ್ತಿಗಳೂ ಸನ್ನಿವೇಶಗಳೂ ಕೇವಲ ಕಾಲ್ಪನಿಕ. ಈ ಕಾದಂಬರಿ ಬರೆಯುವಾಗ ಹಂತ ಹಂತವಾಗಿ ಕೊಂಚ ಓದಿ ಕಥೆ ಕೇಳಿ 'ಪರವಾಗಿಲ್ಲ' ಎಂದು ಬೆನ್ನುತಟ್ಟಿದ ನನ್ನ ಈರ್ವರು ಗೆಳೆಯರು ಶ್ರೀ ಟಿ.ಜಿ. ರಾಮಚಂದ್ರರಾವ್ ಮತ್ತು ಶ್ರೀ ಆರ್. ವಿ. ವೆಂಕಟರಾಮಯ್ಯ, ಇವರುಗಳಿಗೆ ನನ್ನ ವಂದನೆಗಳು. ಮುದ್ರಣ ದೋಷಗಳನ್ನು ತಿದ್ದುವುದರ ಜೊತೆಗೆ, ಅವಸರದ ಬರವಣಿಗೆಯ ಹಸ್ತಪ್ರತಿಯನ್ನು ತಿದ್ದಿದ ಚಿತ್ರಪ್ರಿಂಟರಿಯ ವ್ಯವಸ್ಥಾಪಕರು ಶ್ರೀ ಹೆಚ್. ವಿ. ನಾರಾಯಣ್‌ರವರಿಗೆ ನಾನು ಕೃತಜ್ಞನಾಗಿದ್ದೇನೆ. ಈ ಕಾದಂಬರಿ ಹೊರಬರಲು ಮುಖ್ಯ ಕಾರಣರೂ-ನಿಮ್ಮನ್ನು ಪರಿಚಯ ಮಾಡಿಕೊಟ್ಟ ನನ್ನ ಆಪ್ತಮಿತ್ರರೂ ಚಿತ್ರ ಪ್ರಿಂಟರಿಯ ಮಾಲೀಕರೂ ಆದ ಶ್ರೀ ಹೆಚ್. ವೆಂಕೋಬರಾಯರಿಗೆ ನನ್ನ ವಂದನೆಗಳು. ಮತ್ತೆ ಈ ಕಾದಂಬರಿ ರಚನೆಯಲ್ಲಿ ನೆರವಾದ ಎಲ್ಲ ಮಿತ್ರರಿಗೂ ನಾನು ಕೃತಜ್ಞನಾಗಿದ್ದೆನೆ.

ನನ್ನ ನಗೆಬರಹ, ನಗೆನಾಟಕಗಳಿಗಿತ್ತ ಪ್ರೋತ್ಸಾಹವನ್ನೇ ಈ ಕಾದಂಬರಿಗೂ ಓದುಗರು ಕೊಡುವರೆಂದು ನನ್ನ ನಂಬಿಕೆ. ಮತ್ತೇನು ಬರೆಯಲಿ- ಇನ್ನೇನೂ ವಿಶೇಷವಿಲ್ಲ. ಮುಂದಿನ ಕಥೆ ಓದುಗರೇ ಓದಿ ಕಾದಂಬರಿಯ ಯೋಗ್ಯತೆ ಅಳೆಯಲಿ ಅಲ್ಲವೆ?—ವಿಶ್ವಾಸವಿರಲಿ,

ಇತಿ ನಿಮ್ಮವನೇ
ದಾಶರಥಿ ದೀಕ್ಷಿತ್

ಬಸವನಗುಡಿ
೫-೧೦-೫೪

ಒಂಟಿ ಜೀವಕ್ಕೆ
ನೆಂಟು ಇರಲೆಂದು
ಗಂಟು ಬಿದ್ದು ಮಕ್ಕಳನ್ನೂ
ಅಂಟುಹಾಕಿದ ಅರ್ಧಾಂಗಿ
ಸೌ|| ದಮಯಂತಿ

—ಗೆ

# ಓದುಗರೊಡನೆ

ಪ್ರೀತಿಯ ಓದುಗ,

ನಿಮಗೆ ಉತ್ತಮದರ್ಜೆಯ ಸಾಹಿತ್ಯವನ್ನು ಒದಗಿಸುತ್ತೇವೆಂದು ಸಂಕಲ್ಪಿಸಿದ ಈ ಬಾರಿಯ ಫಲ, ಕೊರವಂಜಿಯ ಹಾಸ್ಯಲೇಖಕರೆನಿಸಿದ ಶ್ರೀಯುತ ದಾಶರಥಿ ದೀಕ್ಷಿತ್‌ರ ಸಾಮಾಜಿಕ ಕಾದಂಬರಿ ಬಾಳಬಂಧನ–ಇದೋ ನಿಮ್ಮ ಕೈಲಿ. ಈ ನಮ್ಮ ಸಂಕಲ್ಪಕ್ಕೆ ಚ್ಯುತಿಬಾರದಂತೆ ಸಾಧ್ಯವಾದಮಟ್ಟಿಗೆ ಯತ್ನಿಸುತ್ತೇವೆಂದು ಭರವಸೆ ಕೊಡುತ್ತೇವೆ.

ಈ ಕೃತಿಯನ್ನು ನಮ್ಮ ಮಾಲೆಗೆ ಕೊಟ್ಟ ಶ್ರೀ ದೀಕ್ಷಿತರಿಗೆ, ಮುಖಚಿತ್ರ ಬರೆದುಕೊಟ್ಟ ಯಸ್. ಆರ್. ಐಯ್ಯಂಗಾರ್‌ರಿಗೆ, ಮುದ್ರಣದ ಜವಾಬ್ದಾರಿ ಹೊತ್ತ ಚಿತ್ರಪ್ರಿಂಟರಿಯ ಮಾಲಿಕ ಮತ್ತು ಕೆಲಸಗಾರರ ಬಳಗಕ್ಕೆ ತುಂಬಾ ನೆನಕೆಗಳು.

ಹೊಸ ಹೊಸ ಲೇಖಕರು ತಮ್ಮ ಕೃತಿಗಳನ್ನು ಪ್ರಕಾಶನಪಡಿಸುತ್ತೀರ ಎಂದು ಕೇಳಿ, ಕಾಗದ ಬರೆಯುತ್ತಿದ್ದಾರೆ. ನಮ್ಮ ಮರೋಲೆ ಪಡೆದು ಹಸ್ತ ಪ್ರತಿ ಕಳುಹಲು ಯೋಚಿಸುತ್ತಾರೆ. ಹೆಸರಾಂತ ಸಾಹಿತಿ ಆಗಿರಲಿ, ಹೊಸ ಲೇಖಕರಾಗಲಿ, ಕೃತಿ ಉತ್ತಮವಾಗಿದ್ದರೆ ಆದಕ್ಕೆ ಸ್ವಾಗತವಿದೆ ಎಂದಮೇಲೆ– "ಪ್ರಕಟಿಸುತ್ತೀರಾ" ಎಂದು ಕೇಳುವ ಯತ್ನ ಮಾಡದೆ, ನೇರವಾಗಿ ಹಸ್ತಪ್ರತಿ ಕಳುಹಿದರೆ, ಉತ್ತಮವಾಗಿದ್ದರೆ ಪ್ರಕಾಶನಪಡಿಸುತ್ತೇವೆ. ಒಮ್ಮೆಗೆ ಹಲವಾರು ಹಸ್ತಪ್ರತಿಗಳು ಕೈ ಸೇರುವುದರಿಂದ ಅಭಿಪ್ರಾಯ ತಿಳಿಸಲು ಸಾಕಷ್ಟು ಕಾಲಾವಕಾಶವಾಗುತ್ತದೆ. ಹಸ್ತಪ್ರತಿ ಕಳ್ಸುವವರು ಇದನ್ನು ಗಮನಿಸಿ, ಹಸ್ತಪ್ರತಿ ಕಳುಹಿದ ತಕ್ಷಣ, ಅಭಿಪ್ರಾಯ ತಿಳಿಯಲು ವ್ಯರ್ಥವಾಗಿ ವ್ಯವಹರಿಸದೆ, ಸಾಕಷ್ಟು ಕಾಲಾವಕಾಶ ಕೊಡಬೇಕೆಂದು ತಿಳಿಸಬಯಸುತ್ತೇವೆ.

ಕೃತಿಗಳ ಪುಟ ೩೦೦ ಇರಲೇಬೇಕೆಂದು ವಾದ ಕೆಲವರದಿದೆ. ಆದರೆ, ೩೦೦ ಪುಟವಿರಲೆಂದು ಕತೆಲಂಬಿಸಿ ಬರೆಯಲು ಬರಹಗಾರರಿಗೆ ಹೇಳಲಾದೀತೆ. ಕತೆ ದೊಡ್ಡದಿದ್ದರೆ ಪುಟಗಳು ತಾನಾಗಿ ಬೆಳೆಯುತ್ತವೆ. ಕಡಿಮೆ ಪುಟಗಳೆಂದು ಆಕ್ಷೇಪಿಸದೆ, ಹೆಚ್ಚೆಂದು ಹಿಗ್ಗದೆ ಸಹಕರಿಸಬೇಕೆಂದು ಬಯಸುತ್ತೇವೆ. ಆ ಕಡಿಮೆಯ ಪುಟದ ಕೃತಿಗೆ, ಅನುಸಾರವಾಗಿ ಬೆಲೆಯನ್ನು ಇಡುತ್ತೇವೆ.

ತಾರಾನಿವಾಸ, ತಿಪಟೂರು
೫–೧೧೦ ೫೪

ತಾ. ರಾ. ನಾಗರಾಜ
ಸುದರ್ಶನ ಪ್ರ

# ಬಾಳ ಬಂಧನ

## ೧

ಕೋಳಿ ಕೂಗಿ ಮೌನವನ್ನು ಮುರಿಯಿತು. ರಾಜಮ್ಮ ಎದ್ದು ಮುಂಬಾಗಿಲು ಸಾರಿಸಿ ಗುಡಿಸಿ ರಂಗವಲ್ಲಿ ಚಿತ್ರಿಸಿದಳು. ಎದುರುಗಿನ ದೊಡ್ಡ ಹುಣುಸೇ ಮರದ ಹೂಗಳು ಆ ರಂಗವಲ್ಲಿಯ ಮೇಲೆ ಉದುರಿದುವು. ಮಂಗಳಾರತಿ ಬೆಳಗುವಂತೆ ಭಾನುದೇವ ತನ್ನ ಕೆಂಕಿರಣಗಳನ್ನು ಚೆಲ್ಲಿದ್ದ.

ಕೋಳಿ ತನ್ನ ಪರಿವಾರವಾದ ಪಿಳ್ಳೆಗಳನ್ನು ಬೆನ್ನಟ್ಟಿಸಿಕೊಂಡು ಸಾಗಿತ್ತು. ನಾಯಿಯೊಂದು ಹಳೆಯ ಮೂಳೆಯನ್ನ ಕಚ್ಚಿ ಕಚ್ಚಿ ಆಟವಾಡುತ್ತಿತ್ತು.

ಹಾಲಿನವಳು "ಹಾಲ್ರಮ್ಮ" ಎಂದು ಕೂಗಿದಳು. ರಾಜಮ್ಮ ಹಾಲು ಹಾಕಿಸಿಕೊಂಡು ಒಳಕ್ಕೆ ಹೋಗಿ ಕಾಯಿಸಲಿಟ್ಟಳು. ಸುಬ್ಬರಾಯ ಇನ್ನೂ ಮಲಗೇ ಇದ್ದ. ಶಾಮಸುಂದರನನ್ನು, ಸರಸ್ವತಿಯನ್ನು ಎಬ್ಬಿಸಿ ಮುಖ ತೊಳೆಸಿ ಕಾಫಿ ಕೊಟ್ಟು ಶಾಲೆಗೆ ಕಳಿಸಲು ಸಿಂಗರಿಸಿದ್ದಳು ರಾಜಮ್ಮ.

ಹಿಂಡು ಹಿಂಡು ದನವನ್ನು ದನಕಾಯುವ ಹುಡುಗರು ಮೇಯಿಸಲು ಗುಡ್ಡಕ್ಕೆ ಹೊಡೆದುಕೊಂಡು ಹೊರಟಿದ್ದರು.

ಹಿಂದೆಲ್ಲ ಹೋದ ನಿನ್ನೆಯಂತೆ, ಮುಂದೆಲ್ಲ ಬರುವ ನಾಳೆಯ ಯೋಚನೆ ಜೊತೆಗೆ ಇಂದಿನ ದಿನಚರಿಯ ಪ್ರಥಮಪಾದ, ಪ್ರಾತಃಕಾಲದ ಮೊದಲ ಕೆಲಸ ಹುಡುಗರನ್ನು ಶಾಲೆಗಟ್ಟುವುದು–ಅದರಲ್ಲೂ ಶಾಮಸುಂದರನನ್ನು ಸಮಾಧಾನ ಪಡಿಸಿ ಕಳಿಸಬೇಕಾದರೆ ಸಾಕುಸಾಕಾಗಿ ಹೋಗುತ್ತಿತ್ತು.

ಸುಂದರ ಪ್ರಕೃತಿಯಿರಲಿ—ಭೋರ್ಗರೆವ ಮಳೆಗಾಲವಿರಲಿ–ತಲೆ ಸುಡುವ ಬಿಸಿಲು ಕಾಲವಿರಲಿ ನಿನ್ನೆ–ಇಂದು–ನಾಳೆಗಳ ಜೀತದ ಎತ್ತಿನ ದುಡಿತದಂತೆ

ಜೀವನ ನಡೆಸಿದ್ದ ಗುಮಾಸ್ತೆ ಸುಬ್ಬರಾಯ, ಹೆಂಡತಿ ರಾಜಮ್ಮ–ಮಗ ಶಾಮ ಸುಂದರ–ಮಗಳು ಸರಸ್ವತಿ ಸಾಗಿತ್ತು ಅವರ ಜೀವನ.

ಶಾಮಣ್ಣನೂ ಶಾಲೆಗೆ ಹೊರಟಿದ್ದ–ಎಲ್ಲ ಬಾಲಕರ ಜೊತೆಗೆ ಹೋಗಲೇ ಬೇಕಿತ್ತು. ಶಾಲೆ ಎಂದರೆ ಅವನಿಗೆ ತಲೆಶೂಲೆ. ಮನೆಯಲ್ಲಿ ಹಾಯಾಗಿ ಅಮ್ಮನನ್ನು ಹೆದರಿಸಿಕೊಂಡು ತಿಂಡಿ ತಿನ್ನುವುದು ಬಿಟ್ಟು ಈ ಶಾಲೆ ಏತಕ್ಕೆ? ಎಂಬುದು ಅವನ ಪ್ರಶ್ನೆ. ಒಮ್ಮೊಮ್ಮೆ ಕುಣಿಯುತ್ತ ಹೋಗುತ್ತಿದ್ದ. ಬಹು ದಿನಗಳು ಅವನಿಗೆ ಕತ್ತಿನ ಸೆರೆ ಉಬ್ಬಿ ಕಣ್ಣೀರು ಹರಿಸಿ ಹೋಗುವುದೇ ಅವನ ಚಾಳಿ............ಶಾಲೆ ಎಂದರೆ ಶೂಲಕ್ಕೆ ಏರಿಸಿದಂತೇ ಆಗುತ್ತಿತ್ತು. ಆ ಪೊಡ್ಡಿಗೆ ಅಟ್ಟಲೇಬೇಕಾದ್ದು ರಾಜಮ್ಮನ ಧರ್ಮವಾಗಿತ್ತು. ಹೋಗಲೇ ಬೇಕಾದ್ದು ಶಾಮಣ್ಣನ ಕರ್ಮವಾಗಿತ್ತು. ಅಷ್ಟುಹೊತ್ತಿಗೇ ಮಗನಿಗೆ ತಲೆ ಬಾಚಿ ಹೆರಳು ಹಾಕಿ, ಸಂಪಿಗೆ ಹೂವು ಮುಡಿಸಿ, ಭಸ್ಮ ಹಚ್ಚಿ, ಕೋಟು ಹಾಕಿ, ಜೇಬಿಗೆ ಪುರಿ ಉಂಡೆ ತುರುಕಿ ಕೈಗೆ ಸ್ಲೇಟು ಕೊಟ್ಟು ಹುಣಸೆಮರದ ತನಕ ಬಿಟ್ಟು ಬರುವುದು ದಿನದ ಪದ್ಧತಿ. ಆ ಮಹರಾಯ "ಊಂ ಊಂ" ಎಂದು ರಾಗ ಹಿಡಿದನೆಂದರೆ ನಿಲ್ಲಸಲಿಕ್ಕೇ ಬರುತ್ತಿರಲಿಲ್ಲ. ಒಂದುದಿನವಾದರೆ ಸರಿ ಸಮಾಧಾನ ಮಾಡಿಯಾಳು ರಾಜಮ್ಮ. ನಿತ್ಯ ಇದೇ ರಾಗ ಇದೇ ರಗಳೆ. ಶಾಮಣ್ಣ ಎರಡು ದಿನ ಹಾಲುಗಡಗ ಹಾಕಿದ ಕಾಲು ಹೊಸೆಯುತ್ತಾ ನಡು ಮನೆಯಲ್ಲೇ ರಂಪಮಾಡಿದ. ರೇಗಿದ ಸುಬ್ಬರಾಯ ನಿದ್ರೆಗೆ ಭಂಗತಂದ ಈ ಸುಪುತ್ರನನ್ನು ಸದೆಬಡಿದು ಮತ್ತೆ ಹೊದ್ದು ಮಲಗಿದ್ದ. ಅವತ್ತಿನಿಂದ ರಾಜಮ್ಮ ಮನೆಯಿಂದ ಹೊರಗೆ ಕರೆತರುವವರೆಗೆ ಮುಖ ದಪ್ಪಮಾಡಿಕೊಂಡು ಒಳಗೇ ಮುಸು ಮುಸು ಅಳುತ್ತಿದ್ದು ಹುಣುಸೆಮರದ ಬುಡಕ್ಕೆ ಬಂದನೆಂದರೆ ಸರಿ–ಸ್ವರ ಮಧ್ಯಮ ಶೃತಿ ಬಿಳಿ ಎರಡರ ಮನೆಗೆ ಕೂಡಿಸಿ ಒಂದೇಸಮ ಶೃತಿ ಪೆಟ್ಟಿಗೆಯಂತೆ 'ಊಂ–ಊಂ ಊಂ' ಎಂದು ಅಳುತ್ತಲೇ ಜೇಬಿಗೆ ಕೈಹಾಕಿ ಪುರಿ ಉಂಡೆಯನ್ನು ತಿನ್ನತೊಡಗುವನು.

ಹೀಗೆ ಅವನು ಅಳುತ್ತಾ ನಿಂತಾಗಲೇ ದನದ ಹಿಂಡು ಹೊಡೆದುಕೊಂಡು ಇವನ ಮುಂದೆಯೇ ಹಾದು ಆ ಗೋಪಾಲಬಾಲ ಹೋಗುತ್ತಿದ್ದ. "ಇಸ್ಕೂಲ್ಗೋಕೆ ಮನ್ಸು ಬ್ಯಾಡಾಂತೈತಾ!! ಹಿಹಿಹಿ....ಬಾರ್ಲಾ ಮಗ ನಂಜೊತೆ ದನ ಕಾಯಾಕೇ" ಎಂದು ಶಾಮಣ್ಣನನ್ನು ಅಣಗಿಸಿ "ಹೇ ಗಿಡ್ಡಿ–ನಡಿ ನಡಿ"

ಎಂದು ತನ್ನ ಕರ್ತವ್ಯದಲ್ಲಿ ತೊಡಗುವ ಅವನನ್ನು ನೋಡಿದರೆ ಶಾಮಣ್ಣನಿಗೆ ರೇಗು—ಅಳುವ ಅದೇ ಧ್ವನಿಯಲ್ಲಿ "ಊಂ ಹೋಗಲೇ" ಎಂದು ಪುರಿ ಉಂಡೆ ಹಿಡಿದೇ ಹೊಡೆಯುವಂತೆ ಕೈ ಆಡಿಸುವ ಮರುಕ್ಷಣವೇ ಮತ್ತೆ ಮೊದಲಿನ ಸ್ಥಾಯಕ್ಕೆ ಶೃತಿ ಇಳಿಸಿ "ಊಂ ಊಂ" ಎಂದು ರಾಗ ಹಿಡಿಯುವ.

ಈ ವೇಳೆಗೇ ಮುಂದಿನ ರೂಮಿನಲ್ಲಿ ಮಲಗಿದ್ದ ಸುಬ್ಬರಾಯನಿಗೆ ಎಚ್ಚರ ವಾಗುತ್ತಿದ್ದುದು. ಕಿಟಕಿಯಲ್ಲಿ ಕಾಣಿಸಿಕೊಂಡು "ಏ ಶಾಮು—ಹೋಗ್ತಿಯೋ ಬಂದು ಬಿಗೀಲೋ" ಎಂದು ಕೆಟ್ಟ ಸಿಟ್ಟಿನ ಮುಖಮಾಡಿ ಗದರಿದಾಗಲೇ ಶಾಮಣ್ಣ ಜೋಲುಮುಖ ಹಾಕಿಕೊಂಡು ವಿಧಿಯಿಲ್ಲದೆ ನಿಧಾನವಾಗಿ ಶಾಲೆಯ ಕಡೆ ಕಾಲೆಳೆದುಕೊಂಡು ಹೋಗುತ್ತಿದ್ದ.

ಈ ಸಮಯಕ್ಕೇ ಶಾಲೆಗೆ ಹೊರಟ ಇತರ ಹುಡುಗರು ಹುಡುಗಿಯರು ಗುಂಪು ಗುಂಪಾಗಿ ನೆಡೆದಿರುತ್ತಿದ್ದರು. ದಾರಿ ಸವೆದಂತೆ ಶಾಮಣ್ಣನ ದುಃಖ ಇಳಿಮುಖವಾಗಿ ಸುರಿಯುತ್ತಿದ್ದ ಸಿಂಬಳವನ್ನು ಎಡಗೈ ಮುಂಗೈ ತೋಳಿನಿಂದ ಸರಕ್ಕೆಂದು ಒರಸಿಕೊಂಡು ಕಣ್ಣೀರು ಒರಸಿಕೊಂಡು ನಡೆಯುವನು. ಹೆಗಲ ಮೇಲೆ ಕೈಹಾಕಿಕೊಂಡ ಸ್ನೇಹಿತರು ಜೊತೆ ಜೊತೆಯಾಗಿ ಮಾತಾಡುತ್ತಾ ಹೋಗುತ್ತಿದ್ದ ಗುಂಪಲ್ಲಿ ಶಾಮಣ್ಣನೂ ಸೇರಿ ಶಾಲೆ ಸೇರಿದ.

ವಿಕ್ಟೋರಿಯಾ ರಾಣಿಯ ಕಾಲದಲ್ಲಿ ಅಂಗ್ರೇಜಿ ಇಂಜಿನಿಯರು ಲಂಡನ್ನಿನಿಂದ ನಕಾಸೆ ಮಾಡಿ ಕಳಿಸಿದ್ದರ ಆಧಾರದ ಮೇಲೆ ಕಟ್ಟಿದ ಕೆಂಪು ನಾಡ ಹಂಚಿನ ಕಟ್ಟಡವೇ ಮೊಳಕಾಲ್ಮೂರಿನ ಸರ್ಕಾರಿ ಪ್ರಾಥಮಿಕ ಶಾಲೆಯ ಕಟ್ಟಡ. ನರಸಿಂಗರಾಯರೇ ಮೇಸ್ಟ್ರು. ಶಾಮಣ್ಣ ಕನ್ನಡ ಎರಡನೆ ತರ ಗತಿಯಲ್ಲಿ ಕೂಡುತ್ತಿದ್ದ ನರಸಿಂಗರಾಯರು ಸಾಕ್ಷಾತ್ ಸಿಂಹ ಸ್ವರೂಪರೇ ಆಗಿದ್ದರು. ಹಳೇಕಾಲದ ಮಾಸ್ತರ ಗಿರಿ ಮಹರಾಯಂದು. ಕೋದಂಡಕ್ಕೆತ್ತುವುದೆಂದರೆ ಆತನಿಗೆ ಬಹು ಸುಲಭದ ಕೆಲಸ. ಹುಡುಗರ ಮೂಳೆ ಮುರಿಯುವುದಕ್ಕೇ ತಮಗೆ ಸರ್ಕಾರ ಸಂಬಳ ಕೊಡುತ್ತಿರುವುದೆಂದು ಅವರ

ಹೊತ್ತಾಗಿ ಹೋದರೆ—ಪದ್ಯ ಬಾಯಿಪಾಠ ಮಾಡ

ತ್ತರ ತನಕ ಮಗ್ಗಿ ತಡಬಡಿಸದೆ

ತಪ್ಪು ಮಾಡಿದರೆ, ರಾಯರ

ಮೂಡಿಸಿತೆಂದೇ ತಿಳಿಯಬೇಕು.

ಬಣ್ಣ–ಚೂರು ಮೊಂಡುಮೂಗು ಉಬ್ಬುಹಲ್ಲು ಪೊದರ ಹುಬ್ಬು ಆಜಾನುಬಾಹು ಎತ್ತರದ ನಿಲುವು; ಆಗಲೆ ಸುಮಾರು ಸರ್ವಿಸೂ ಆಗಿತ್ತು. ಹೇರಳ ಮನೆ ಪಾಠಗಳೂ ಇದ್ದವು. ಅಂದಮೇಲೆ ನರಸಿಂಗರಾಯರು ಯಾವ ಮೇಲಧಿಕಾರಿಗೂ ಬೆದರದೆ ತಮ್ಮ ಆಡಳಿತ ನಡೆಸುತ್ತಿದ್ದರು.

ಮೊದಲಬಾರಿ ಗಂಡನಮನೆಗೆ ಹೋಗುವ ಎಳೀ ಹೆಂಡತಿಯಂತೆ ಅಳುತ್ತಿದ್ದುದು ಶಾಮಣ್ಣ ಈ ನರಸಿಂಗರಾಯರ ಬೆತ್ತಕ್ಕೆ ಬೆದರಿಯೇ. ಮನೆಯಲ್ಲಿ ಅಪ್ಪನ ಕೆಂಗಣ್ಣು ಶಾಲೆಯಲ್ಲಿ ನರಸಿಂಗರಾಯರ ಬೆತ್ತದ ಭಯ; ಹೀಗಿರುವಾಗ ನಗುನಗುತ್ತಾ ಸೊಗಸಾದ ಮುಂಜಾನೆಯಲ್ಲಿ ಶಾಲೆಗೆ ಹೋಗೆಂದರೆ ಹೇಗೆ ಹೋದಾನು ?

ಶಾಲೆಯ ಜವಾನ ಘಂಟೆ ಹೊಡೆದ. ಮಾಸ್ತರುಗಳೆಲ್ಲಾ ಕಟ್ಟೆಯ ಮೇಲೆ ನಿಂತರು. ಹುಡುಗರೆಲ್ಲಾ ಸಾಲಾಗಿ ನಿಂತು ತಮ್ಮ ಕೈಯ್ಯಲ್ಲಿನ ಪುಸ್ತಕಗಳನ್ನು ಎದುರಿಗೆ ನೆಲದಮೇಲಿಟ್ಟು ಕೈಮುಗಿದುಕೊಂಡು ನಿಂತರು. ನರಸಿಂಗರಾಯರು ಕೈಯ್ಯಲ್ಲಿನ ಬೆತ್ತ ತಮ್ಮ ಕಾಲಿಗೆ ನವಿರಾಗಿ ಬಡಿದುಕೊಳ್ಳುತ್ತಾ ಕಂಚು ಕಂಠದಲ್ಲಿ "ಸ್ವಾಮಿದೇವನೆ ಲೋಕಪಾಲನೆ ತೇನವೋಸ್ತು ನಮೋಸ್ತುತೇ" ಎಂಬ ಪ್ರಾರ್ಥನೆಯನ್ನು ಹೇಳಿಕೊಡುವುದಕ್ಕೆ ತೊಡಗಿದರು. ನೂರಾರು ಎಳೆಯ ಕಂಠಗಳು ಒಂದೇಬಾರಿ ಹೇಳುವಾಗ ದೇವರಿಗೆ ಈ ಕರೆ ಖಂಡಿತ ಮುಟ್ಟಿರುತ್ತದೆ ಎನ್ನುವ ಭಾಸವಾಗುತ್ತಿತ್ತು. ಒಬ್ಬರೂ ನಗಕೂಡದು ಕೆನೆಯಕೂಡದು; ಭಕ್ತಿಯಿಂದ ಕೈಮುಗಿದುಕೊಂಡು ಎತ್ತರದ ಸ್ವರದಲ್ಲಿ ನಿಧಾನವಾಗಿ ಹಾಡಬೇಕು. ಆ ದಾರಿಯಲ್ಲೆ ನೊಗ ಹೇರಿಕೊಂಡೋ ಇಲ್ಲವೇ ಕುಡುಗೋಲು ಹಿಡಿದೋ ಹೊಲಕ್ಕೆ ಹೊಗುತ್ತಿದ್ದವರು ಈ ಬಾಲಕರ ಪ್ರಾರ್ಥನೆಗೆ ಪರವಶರಾಗಿ ಮೇಲೆದ್ದಿದ್ದ ಸೂರ್ಯನಿಗೆ ಕೈಮುಗಿದು ಹೊರಡುತ್ತಿದ್ದರು. "ಚಿತ್ತವೆಂಬುದು ಗಾಳಿಯಲ್ಲಿಹ ದೀಪದಂದದಿ ಚಂಚಲಾ" ಎಂದು ನರಸಿಂಗರಾಯರು ಹೇಳಿದ್ದನ್ನು ಹುಡುಗರೂ ಹೇಳಿದಾಗ ನರಸಿಂಗರಾಯರ ಚಿತ್ತ ...ೀ ಇರುತ್ತಿತ್ತು. "ಕಾಯೌ ಶ್ರೀ ಗೌರಿ" ಹೇಳಿ ...ಮ್ಮ ತರಗತಿಗಳಿಗೆ ತೆರಳುತ್ತಿದ್ದರು.

...ೀ ಕಾಯುತ್ತಿದ್ದ ನಮ್ಮ ಶಾಮಣ್ಣ. ...ತ್ತಾ ಹುಡುಗರು ನಾಗಾಲೋಟದಲ್ಲಿ

ಹೊರಕ್ಕೆ ಬರುತ್ತಿದ್ದರು. ಶಾಲೆಗೆ ಕೊಂಚ ದೂರದಲ್ಲಿದ್ದ ಮನೆಗೆ ಒಂದೇ ಉಸುರಿಗೆ ಓಡಿಬರುತ್ತಿದ್ದ. ರಾಜಮ್ಮ ಆ ಹೊತ್ತಿಗೆ ಸರಿಯಾಗಿ ಬಿಸಿ ಅಕ್ಕಿ ತಾಲಿ ಪೆಟ್ಟನ್ನೋ ಕೋಡು ಬಳೆಯನ್ನೋ ಕೊಟ್ಟರೇ ಸರಿ ಇಲ್ಲವಾದರೆ ಮತ್ತೆ ತನ್ನ ರಾಗ ತೆಗೆದು ಜಪ್ಪಯ್ಯ ಅಂದರೂ ಶಾಲೆಗೆ ಹೋಗುತ್ತಿರಲಿಲ್ಲ. ಶಾಮಣ್ಣ ಕೈಯ್ಯಲ್ಲಿ ಕೋಡುಬಳೆ ಹಿಡಿದು ಮುಂಬಾಗಿಲಿಗೆ ಬರುವುದಕ್ಕೆ ಸರಿಯಾಗಿ–ಮೂಳೆ ಕಡಿಯುತ್ತಿದ್ದ ನಾಯಿ ಕಿವಿ ನಿಮಿರಿಸಿ ಬಾಲಾ ಆಡಿಸುತ್ತಾ ಇವನ ಮುಂದೆ ನಿಲ್ಲುವುದು. ಒಂದು ತುಂಡನ್ನು ಮೇಲಕ್ಕೆ ಎಸೆದಾಗ ಅಂತರಿಕ್ಷದಲ್ಲಿ ಹಾರಿ ಆ ತುಂಡನ್ನು ಬಾಯಲ್ಲಿ ಹಿಡಿದು ಕರುಂ ಕುರುಂ ಎಂದು ತಿಂದುಹಾಕುವಾಗ ಶಾಮಣ್ಣನಿಗೆ ಪರಮಾನಂದವಾಗುತ್ತಿತ್ತು. ಕೋಟಿನ ಹಿಂದಿನ ಭಾಗ ಗಾಳಿಗೆ ತೂರುತ್ತಿರುವಂತೆ ಕಾಣುವಹಾಗೆ ವೇಗವಾಗಿ ಓಡುತ್ತಿದ್ದುದು ಕೈಯ್ಯಲ್ಲಿನ ಕೋಡುಬಳೆ ಮುಗಿದಾಗಲೆ. ಅವನ ಹಿಂದೆ ನಾಯಿಯೂ ಕೊಂಚದೂರ ಓಡಿ ಹಿಂದಿರುಗುತ್ತಿತ್ತು.

ಹನ್ನೊಂದು ಘಂಟೆಗೆ ಕೈಯ್ಯಲ್ಲಿನ ಸ್ಲೇಟು ಆಡಿಸುತ್ತಾ ನಿಧಾನವಾಗಿ ತನ್ನ ಸ್ನೇಹಿತರೊಡನೆ ಅವತ್ತಿನ ಸಂಪಾದನೆ (—ಕೋಡುಬಳೆ ತುಂಡಿಗೋ ಇಲ್ಲವೇ ಪುರಿ ಉಂಡೆಯ ಚೂರಿಗೋ ಬದಲಾಗಿ ಬಳಪದ ತುಂಡನ್ನು ತೆಗೆದು ಕೊಂಡು ಬರುತ್ತಿದ್ದುದು ಅವನ ವ್ಯಾಪಾರ—)ಯ ವಿಚಾರ ವಿವಿಧವಾಗಿ ವಿವರಿಸುತ್ತಾ ಮನೆ ಸೇರುವನು.

ಮನೆಯಲ್ಲಿ ತಾಟಿನ ಮುಂದೆ ಕೂತನೆಂದರೆ ತಕರಾರಿಗೇ ಪ್ರಾರಂಭ. ತುಪ್ಪವೆಷ್ಟು ಹಾಕಿದರೂ ಕೊಂಚವೇ–ಕಡೆಗೆ ಬಡಿಸಿದ್ದುದರಲ್ಲಿ ಅರ್ಧವನ್ನೂ ತಿನ್ನದೆ ಚೆಲ್ಲಿ ಯಾವುದೋ ನೆಪಕ್ಕೆ ಅತ್ತು ರಾಜಮ್ಮನ ಕೈಲಿ "ನಿನ್ನ ಹಣೆ ಬರವೇ ಅಷ್ಟು—ಎದ್ದು ಕೈಗೆ ನೀರು ಹಾಕ್ಕೊ" ಎಂದೆನ್ನಿಸಿಕೊಂಡೇ ಏಳಬೇಕು. ಇದು ಸಂಪ್ರದಾಯವಾಗಿತ್ತು.

ಮಧ್ಯಾಹ್ನ ಶಾಲೆಗೆ ಹೋದರೆ ಹೋದ, ಇಲ್ಲದಿದ್ದರೆ ಇಲ್ಲ. ಪುಸ್ತಕ ಸ್ಲೇಟು ಹಿಡಿದು ಶಾಲೆಗೆಂದೇ ಹೊರಟು ಹುಣಸೆಮರದ ಕೆಳಗೆ ಕುಂಟುವಬಿಲ್ಲೆ ಆಟ ಆಡಿದ್ದೂ ಉಂಟು. ಮಧ್ಯಾಹ್ನ ಸುಬ್ಬರಾಯ ಕೆಲಸಕ್ಕೆ ಹೋಗುತ್ತಿದ್ದುದೇ ಶಾಮಣ್ಣನ ಸ್ವಾತಂತ್ರ್ಯತೆಗೆ ಕಾರಣ. ರಾಜಮ್ಮನನ್ನು ಹೆದರಿಸಿ

ತಿಂಡಿ ಕಸಿಯುತ್ತಿದ್ದ. ಸುಬ್ಬರಾಯ ಇದ್ದನೆಂದರೆ ಗುಬ್ಬಿಮರಿ ಹಾಗೆ ಸದ್ದಿಲ್ಲದೆ ಇರುತ್ತಿದ್ದ.

ಶಾಮಣ್ಣನಿಗೆ ಸುಬ್ಬರಾಯನನ್ನು ಕಂಡರೆ ಪ್ರೀತಿ ಇಲ್ಲವೆಂದು ಹೇಳಲಾಗದು. ಸಂಜೆಯಹೊತ್ತಿಗೆ ಶುಭ್ರವಾದ ಬನೀನು, ನಿಕ್ಕರು ಹಾಕಿ ಜಡೆ ಹೆಣೆದು ಸಾದಿಟ್ಟು ಸಂಪಿಗೆ ಹೂವು ಮುಡಿಸಿಕೊಂಡು ತಂದೆ ಜೊತೆಗೆ ತಿರುಗಾಡಲಿಕ್ಕೆ ಹೋಗುತ್ತಿದ್ದ. ಸುಬ್ಬರಾಯನಿಗೋ ಮಗನನ್ನು ಜೊತೆಗೆ ಕರೆದೊಯ್ಯುವಾಗ ಶ್ರೀಕೃಷ್ಣ ಮನ್ಮಥನನ್ನು ವಾಕಿಂಗ್ ಕರೆದೊಯ್ಯುವ ರೀತಿಯಿಂದ ಕರೆದೊಯ್ಯುತ್ತಿದ್ದ. ಓದುವಾಗ ಓದು, ಆಡುವಾಗ ಆಟ, ಮಲಗುವಾಗ ನಿದ್ರೆ ಹೀಗೆ ಯಾವಾಗ ಏನು ಕೆಲಸಮಾಡಬೇಕೋ ಕಾಲಕ್ಕೆ ಸರಿಯಾಗಿ ಕೆಲಸ ಮಾಡಬೇಕೆಂದು ಅವರಪ್ಪ ಕಲಿಸಿದ ಚಾಳಿಯನ್ನು ತನ್ನ ಮಗನೂ ಕಲಿತು ತನ್ನಂತೆ ಮಾನವಾಗಿ ಬಾಳಬೇಕೆಂಬ ಹಂಬಲದಿಂದ, ಮಗನನ್ನು ಮೊಳಕೆಯಲ್ಲೆ ತಿದ್ದುತ್ತಿದ್ದ. ಸುಬ್ಬರಾಯರ ಸವಾರಿ ಸಂಜೆ ಕಚೇರಿ ಮುಗಿಸಿಕೊಂಡು ಮನೆಗೆ ಬಂದಕೂಡಲೆ ಸರಸ್ವತಿಯದು ನೂರು ದೂರು ಇರುತ್ತಿತ್ತು ಶಾಮಣ್ಣನ ಮೇಲೆ.

"ಅಣ್ಣಯ್ಯ–ನನ್ನ ಪೆನ್ಸಿಲ್ಲು ತೊಗೊಂಡಿದ್ದಾನೆ"

"ನಾನು ಕೊಡ್ಸ್ತೀ ನಮ್ಮ ಸರಸು"

"ಇಲ್ನೋಡಣ್ಣಾ–ನಾನೂ ಲೆಕ್ಕ ಮಾಡ್ಕೋತಾ ಇದ್ರೆ ಶನಿ ಅಂತ ಬೈತಾಳೆ ಈ ಸರಸಿ ಗಿರಿಸಿ"

"ಅದ್ಯಾಕೆ ಸರಸು ನೀನು ಅವನ್ನು ಶನಿ ಅಂತ ಅನ್ನೋದು ?"

"ಅವನ್ಯಾಕೆ ನನಗೆ ಕೋತಿ ಅನ್ನಬೇಕು ?"

"ಅದ್ಯಾತಕ್ಕೊ ಶಾಮು ನೀನು ಕೋತಿ ಅನ್ನೋದು ಅವಳನ್ನ ?"

"ಅವಳು ಕೋತಿನೆ ಕಣಣ್ಣಯ್ಯಾ...."

"ಹಹಹ....ಅಷ್ಟೇಗೊ ಗೊತ್ತು ನಿನಗೆ ?"

"ಮತ್ತೆ ಮತ್ತೇ....ಅಮ್ಮನ್ನ ಅಣಗಿಸಿದಳು ಆಗ....ಅಮ್ಮನೇ ಅವಳನ್ನು ಕೋತಿ ಅಂದ್ಲು—"

"ಅಮ್ಮ ಹೇಳಿದರೆ ಅವಳು ಕೋತಿ ಆಗ್ತಾಳೇನೊ"

"ಊಂ....ಮತ್ತೆ ಅಮ್ಮ ನಂಗೆ ಸುಳ್ಳ ಹೇಳಬಾರದೂಂತ ಹೇಳ್ತಾಳಲ್ಲಾ ಅವಳು ನಿಜಾತಾನೆ ಹಾಗಾದ್ರೆ ಹೇಳೋದು ?"

"ನಿಜಕಣೋ ಶಾಮು:, ಸರಸು ಕೋತಿನೆ...."

"ಹೋಗಣ್ಣಯ್ಯಾ........"

"ಸರ್ಸು ಕೋತಿ— ಸರ್ಸು ಕೋತಿ...."

ಎಂದು ಸುಬ್ಬರಾಯನ ಸುತ್ತಾ ಚಪ್ಪಾಳೆ ತಟ್ಟುತ್ತಾ ಕುಣಿಯುವನು ಶಾಮಣ್ಣ. ಸರಸು ಸಿಟ್ಟುಮಾಡಿಕೊಂಡು ರಾಜಮ್ಮನ ಬಳಿ ದೂರು ಒಯ್ಯುವಳು—ಕೆಳ ಕೋರ್ಟನಿಂದ ಕೇಸನ್ನು ಮೇಲಿನ ಕೋರ್ಟಗೆ ಒಯ್ಯುವವರಂತೆ.

ಸುಬ್ಬರಾಯ ಕೈಕಾಲು ತೊಳೆದು ಕಾಫಿ ಕುಡಿಯುತ್ತಿದ್ದಂತೆ ರಾಜಮ್ಮನೂ ಒಂದು ಲೋಟದಲ್ಲಿ ಕಾಫಿ ಹಾಕಿಕೊಂಡು ಬರುವಳು. ಸರಸುವಿಗೂ ಒಂದು ಲೋಟ. ಶಾಮಣ್ಣನಿಗೆ ಒಂದು ಪುಟ್ಟ ಲೋಟ. ಅದು ಅವನಿಗೆಂದೇ ಬೆಂಗಳೂರಿಂದ ಸುಬ್ಬರಾಯ ತರಿಸಿದ್ದ. ನೀರು, ಕಾಫಿ, ಹಾಲು, ಪಾಯಸ ಎಲ್ಲಕ್ಕೂ ಅದೇ ಲೋಟ ಆಗಬೇಕು ಶಾಮಣ್ಣನಿಗೆ.

ಸೊಗಸಾಗಿ ತೀಡಿ ಕಚ್ಚೆ ಹಾಕಿದ ತೆಳ್ಳನೆಯ ಪಂಚೆ–ಷರಟು ಮೇಲೆ ಬಿಳಿಯ ಟರ್ಕಿ ಟವಲು ಕಾಲಿಗೆ ಎಕ್ಕಡ ಹಾಕಿ, ಕೈಯ್ಯಲ್ಲಿ ಒಂದು ಚೀಲದೊಡನೆ ಸಂಜೆಯ ವಾಕಿಂಗ್‌ಗೆ ಸವಾರಿ ಹೊರಡುತ್ತಿತ್ತು.

ಸಂಜೆಯ ತಿರುಗಾಟವೆಂದರೆ ಶಾಮಣ್ಣನಿಗೆ ಬಹು ಆನಂದ. ಹೊರಟೊಡನೆ ಪಕ್ಕದ ಮನೆಯ ಮುಂದೆ ನಿಂತು "ಜನಾರ್ಧನಯ್ಯಾ" ಎಂದು ಕೂಗು ಹಾಕಿದಾಗ "ಬಂದೇ" ಎಂದು ನಶ್ಯ ಏರಿಸುತ್ತಲೇ ಜನಾರ್ಧನಯ್ಯ ಬರುವರು. ಸುಬ್ಬರಾಯನ ಜೊತೆ ಸರ್ಕಾರಿ ನೌಕರಿಯ ವಿವಿಧ ಜಟಿಲ ಸಮಸ್ಯೆಗಳ ವಿಚಾರ ಪುಂಖಾನು ಪುಂಖವಾಗಿ ಚರ್ಚಿಸ ತೊಡಗುವರು. ಸುಬ್ಬರಾಯ–ಜನಾರ್ಧನ ಸೇರಿದರೆ ಸದಾ ಕಚೇರಿಯ ವಿಷಯವಲ್ಲದೆ ಬೇರೇ ಯಾವ ವಿಷಯವನ್ನೂ ಮಾತಾಡಲು ಅವರಿಗೆ ಬರುತ್ತಲೇ ಇರಲಿಲ್ಲ. ಜೊತೆಗೆ ಹುಡುಗರಿದ್ದರೆ ಬೇಗ ಮನೆ ಸೇರುವರು; ಇಲ್ಲವಾದರೆ ರಾಯದುರ್ಗದ ರಸ್ತೆಯಲ್ಲಿ ಹೊರಟರೆಂದರೆ ರಾತ್ರಿ ಎಂಟಾದರೂ ಆಯಿತು ಒಂಭತ್ತಾದರೂ ಆಯಿತು.

ಒಮ್ಮೊಮ್ಮೆ ಜನಾರ್ಧನಯ್ಯ ಬರದೆ ಇರುವುದುಂಟು; ಆಗಲೇ ಶಾಮಣ್ಣನಿಗೆ ಅವಕಾಶ ಅಣ್ಣನೊಡನೆ ತನ್ನ ಬೃಹತ್ ಸಮಸ್ಯೆಗಳನ್ನು ಬಿಡಿಸಿಕೊಳ್ಳುವುದಕ್ಕೆ.

"ದೊಡ್ಡೊರು ಕಲ್ಲು ಮೇಲಕ್ಕೆಸದರೆ ಆಕಾಶದ ತನಕ ಹೋಗುತ್ತೆ?"

"ತೆಂಗಿನ ಕಾಯಲ್ಲಿ ನೀರು ಹೇಗೆ ಬಂತು?"

"ಸೋಡಾ ಬಾಟಲಿಯಲ್ಲಿ ಗೋಲಿ ಹೇಗೆ ಬಂತು?"

"ಚಂದಕ್ಕೆ ಮಾವನಿಗೆ ದೊಡ್ಡ ಏಣಿ ಹಾಕಿ ಮುಟ್ಟಬಾರದೇಕೆ?"

"ಜೋಗಪ್ಪನ ಗುಡ್ಡ ಹೇಗೆ ಮಾತಾಡತ್ತೆ?"

"ಹಿಮಾಚಲದ ಮೇಲಿರೋ ಶಿವ ಯಾವಾಗಲೂ ಐಸ್‌ಕ್ರೀಂ ಮಾಡ್ಕೊಂಡು ತಿಂತಾ ಇರ್ತಾನಂತೆ ಹೌದಾ?"

"ಕಿತ್ತಲೆ ಹಣ್ಣಿನ ಮೇಲೆ ಇರುವೆ ಬಿಟ್ಟರೆ ಭೂಮಿಯಾಕಣ್ಣ ಗುಂಡಾಗಿರಬೇಕು?"

"ರಾಕ್ಷಸ ಬೇಕಾದರೆ ದೊಡ್ಡ ಕೆರೇಲಿರೋ ನೀರೆಲ್ಲಾ ಕುಡಿತಾನಂತೆ ಸರಸ್ವತಿ ಹೇಳ್ತಾಳೆ ಹೌದೇನಣ್ಣಾ?"

"ಅಮ್ಮ ಹೇಳಿದ್ಲು ಕೃಷ್ಣನ ಬಾಯಲ್ಲಿ ಈ ಪ್ರಪಂಚಾನೆ ಇದೆ ಅಂತ—ಹಾಗಾದ್ರೆ ನಮ್ಮನ್ನೆಲ್ಲಾ ಯಾಕಣ್ಣ ಅವನು ತಿನ್ನೋಲ್ಲ?"

ಒಂದಲ್ಲ ಎರಡಲ್ಲ ಚಿತ್ರ ವಿಚಿತ್ರ ಸಂದೇಹಗಳನ್ನು ಸುಬ್ಬರಾಯ ಎದುರಿಸುವಾಗ ಮಗನಿಗೆ ಉತ್ತರ ಹೇಳಲಾರದೆ ಅನೇಕವೇಳೆ ತಬ್ಬಿಬ್ಬಾಗಿ ಏನೋ ಮಾತಾಡಿ ಮಾತು ಬದಲಾಯಿಸುತ್ತಿದ್ದ. ತೀರಾ ಕಿರಿಕಿರಿ ಮಾಡಿದರೆ ಗದರಿಯೂ ಬಿಡುತ್ತಿದ್ದ. ಪಾಪ ಶಾಮಣ್ಣ ಸಣ್ಣಮುಖ ಮಾಡಿಕೊಂಡು ಸ್ವಲ್ಪ ಹೊತ್ತು ಸುಮ್ಮನೇ ಬರುತ್ತಿದ್ದ. ಇದ್ದಕ್ಕಿದ್ದಂತೆಯೇ ತನ್ನದೊಂದು ಸಂದೇಹ. ಬೃಹದಾಕಾರವಾಗಿ ಕಾಡತೊಡಗುವುದು.

"ಮುಸುಕಿನ ಜೋಳದಲ್ಲಿ ಬಿಗಿಯಾಗಿ ಸಾಲಾಗಿ ಅಷ್ಟೊಂದು ಕಾಳು ಅಂಟಿಸೋಕೆ ದೇವರಿಗೆ ಬೇಜಾರಾಗೋಲ್ವೆ?"

ಸುಬ್ಬರಾಯ ಸುಸ್ತು. ಮರುಕ್ಷಣವೆ ತನ್ನ ಮಗ ಎಂತಹ ಜಾಣ; ಈ ವಯಸ್ಸಿಗೇ ಇಂತಹ ಪ್ರಶ್ನೆಗಳ ಸುರಿಮಳೆ ಹಾಕುವವನು ದೊಡ್ಡ ವಿದ್ವಾಂಸನೇ ಆದಾನೆಂದು ಹಿಗ್ಗುವನು.

ಸಂಜೆ ಮನೆಗೆ ಬಂದೊಡನೆ ದೀಪದ ಮುಂದೆ ಓದುತ್ತಾ ಕುಳಿತ ಸರಸುವಿಗೆ, ಬರುವಾಗ ತಂದೆ ಕೊಡಿಸಿದ ಬಿಸ್ಕತ್ತನ್ನೊ ಚಾಕಲೇಟನ್ನೊ ತೋರಿಸಿ "ನಿಂಗಿಲ್ಲೇ ಇಲ್ಲ" ಎಂದು ಅಠಾರ್ ಮಾಡುವನು. ಶಾಮಣ್ಣನಿಗೆ ಕಾಣದಂತೆ ಸರಸು ತಂದೆಯಿಂದ ತನ್ನ ಪಾಲನ್ನು ತೆಗೆದುಕೊಳ್ಳುವಳು.

ರಾಜಮ್ಮ ಊಟಹಾಕಿ ಹಾಸಿಗೆ ಹಾಸಿ ಕೊಡುವಳು. ಎಲ್ಲಾ ಹಾಸಿಗೆ ಮೇಲೂ ಲಗಾಟಿ ಹೊಡೆದು ಕೆದರಿ ಸರಸುವನ್ನು ಜಿಗುಟಿ ನಗುವನು. ಮಲಗುವಾಗ ರಾಜಮ್ಮ ಬಲವಂತವಾಗಿ "ರಾಮಸ್ಕಂದಂ ಹನೂಮಂತಂ" ಹೇಳಿಸುವಳು. ಮನೆಗೆಲಸ ಮುಗಿಸಿ ತಾನೂ ಮಲಗುವಳು. ಆಗ—

"ಅಲ್ಲಾಂದ್ರೆ ನಿಮ್ಮ ಅಣ್ಣಂದಿರು ಕಾಗವನ್ನು ಬರೆಯಲಿಲ್ಲವಲ್ಲಾ" ಎಂದು ಕೇಳಿದಳು.

"ಅವನೆಲ್ಲಿ ಬರೀತಾನೇ....ಹಾಳು ಆಫೀಸಲ್ಲಿ ರಜಾ ಸಿಗಲಿಲ್ಲ ನಾನೇ ಹೋಗಿ ಇತ್ಯರ್ಥ ಮಾಡೋಣಾಂದ್ರೆ...."

"ಹೀಗೇ ನೀವು ಕಾಲತಳ್ಳಿ....ಕಡೆಗೆ ಪಂಗನಾಮವೇ"

"ಹೂಂ....ನೀನು ಹೇಳೋದು ನಿಜ...."

"ನಿತ್ಯಾ ನಿಜಾಂತಲೇ ಅಂತೀರಿ, ಕೆಲಸಮಾತ್ರ ಮಾಡೊಲ್ಲ."

"ಇಲ್ಲಕಣೆ ಈ ಸಾರಿ ನಿಶ್ಚಯ ಮಾಡಿಬಿಟ್ಟಿದೀನಿ. ಎರಡರಲ್ಲೊಂದು ತೀರ್ಮಾನ ಆಗಲೇಬೇಕು"

ಎಂದು ರಾಜಮ್ಮನಿಗೆ ಸಮಾಧಾನ ಹೇಳಿ ದೀಪ ಆರಿಸುವನು. ರಾಜಮ್ಮ ಸುಬ್ಬರಾಯನ ತೋಳತೆಕ್ಕೆಯಲ್ಲಿ ಹುದುಗುವಳು.

೨

ಅಮ್ಮೀನಹಳ್ಳಿ ಆನಂದರಾಯರು ಆಗಿನ ಕಾಲಕ್ಕೆ ಮಹಾ ಕೋಪವಂತರು—ಹಾ ಅಂದರೆ ಹಲ್ಲು ಕಡಿದು ಕೆಂಡವಾಗುವ, ಹೊ ಎಂದರೆ ಹೊಯ್ದೇ ಬಿಡುವವರು. ಕ್ಯಾತನಹಳ್ಳಿ, ತುಂಬಿ ಕೆರೆ, ಜನಿವಾರದಹಳ್ಳಿ, ದಾಸನಕೆರೆ ಮತ್ತಿತರ ಸುತ್ತುಮುತ್ತಿನ ಹಳ್ಳಿಗಳೆಲ್ಲಾ ನಡುಗಿ ತತ್ತರಿಸುತ್ತಿದ್ದವು ಆನಂದರಾಯರ ಶಾನುಭೋಗಗಿರಿಗೆ. ರೈತರೆಲ್ಲಾ ಕುಯ್ಯೋ ಮರ್ರೊ. ಆರಡಿ ಎತ್ತರ ಮೂರುವರಡಿ ಅಗಲ ಆಜಾನುಬಾಹು ಆನಂದರಾಯರ ಆಕಾರ ಆಗಿನ ಕಾಲಕ್ಕೆ ಹುಡುಗರನ್ನು ಗುಮ್ಮಬರುತ್ತೆ ನೋಡು ಅನ್ನೋ ಹಾಗೆ ಇತ್ತು.

ಎಲ್ಲಿ ಪಂಚಾಯ್ತಿಯಾಗಲಿ ಯಾವ ದೇವರ ತೇರಾಗಲಿ ಜಾತ್ರೆಯಾಗಲಿ ರಾಯರದೇ ಮುಂದಾಳುತನ. ಇವರ ಆಡಳಿತದಲ್ಲಿ ಎಲ್ಲ ಗೌಡ ಪಟೇಲರನ್ನೂ ಹುರಿದುಂಬಿಸಿ ಒಂದು ಉತ್ಸವ ನಡೆಸಿದರೆ "ಇನ್ನಿಂಥಾ ಉತ್ಸವ ನಾವು ನೋಡಿರಲಿಲ್ಲ" ಎನ್ನಿಸುವಹಾಗೆ ರಾಯರು ನಡೆಸೋ ಪದ್ಧತಿ. ಇವರ ಮುಂಗೋಪಿತನ ಒಂದಿಲ್ಲದಿದ್ದರೆ ಮನುಷ್ಯ ಅಪರಂಜಿಯಾಗುತ್ತಿದ್ದರು. ಅಂಥಾ ಕೋಪದಲ್ಲೂ ನಡಿಯೋ ಕೆಲಸಗಳೊಂದಕ್ಕೂ ಅಡ್ಡಿ ಬರದಂತೆ ನಡೆಸುತ್ತಿದ್ದರು.

ರೈತರ ಕರ್ಮ-ಇಂಥಾ ದಬಾವಣೆಯ ಶಾನುಭೋಗರು ಸಿಕ್ಕಿದ್ದೆಂದು ಇವರ ಕೋಪಕ್ಕೂ ರೈತರ ಕರ್ಮಕ್ಕೂ ಗಂಟುಹಾಕಿ ಕೈಕೊಡವಬಹುದು. ಆದರೆ ಮುಂಜಾನೆಯಿಂದ ಸಂಜೆ ತನಕ-ಸಂಜೆಯಿಂದ ಮತ್ತೆ ಮುಂಜಾನೆತನಕ ಆಜೀವ ಪರ್ಯಂತ ಈ ಪ್ರಾಣಿಯ ಕೂಡ ಬಾಳುವೆ ಮಾಡುವ ಪುಟ್ಟಮ್ಮನ ಪರಿಸ್ಥಿತಿ ಹೇಗಿರಬೇಕೆಂದು ಊಹಿಸಲು ಸಾಧ್ಯವೆ? ಪುಟ್ಟಮ್ಮ ನಿಜಕ್ಕೂ ಪುಟ್ಟಮ್ಮನೇ. ಗಿಡ್ಡ ಆಕಾರ, ಪುಟ್ಟ ತುರುಬು, ಚೂರುಮೂಗು, ದೊಡ್ಡ ಬೆಂಡೋಲೆ-ಸರಿಗೆ-ವಂಕಿ-ಚಳತುಂಬು ಬೈತಲೆಮುತ್ತು ನಾಗಮುರು ಸಮೇತ ಆನಂದರಾಯರ ಮನೆ ಸೇರಿದ್ದಳು. ರಾಯರ ಅಸಾಧ್ಯ ಕೋಪಜ್ವಾಲೆಯ ಝಳಕ್ಕೆ ಈ ಕೋಮಲಾಂಗಿ ಬಾಡಿ ಬೆಂದಿದ್ದಳು. ಬೆಂದು ನೊಂದಿದ್ದಳು. ನೊಂದಿ ಕುಂದಿದ್ದಳು. ಕುಂದಿದರೆ ಕೇಳಬೇಕೆ ಮೊದಲೆ ಮೂರುಮುಕ್ಕಾಲು ಅಡಿ ಪುಟ್ಟಮ್ಮ ಇನ್ನೂ ಗಿಡ್ಡಾಗಿ ಕಾಣುವಳು.

ಆನಂದರಾಯರ ಆರ್ಭಟದ ಜೀವನದಲ್ಲಿ ಪಾಪ ಪುಟ್ಟಮ್ಮನ ಸಮಸ್ತ ಸ್ವಾತಂತ್ರ್ಯವೂ ಉಡುಗಿಹೋಗಿತ್ತು. ಯಜಮಾನರ ಸೇವೆಯನ್ನು ನಿರರ್ಗಳವಾಗಿ ನಲವತ್ತು ವರ್ಷ ಮಾಡಿಕೊಂಡು ಬಂದಿದ್ದಳು. ಲಕ್ಷ್ಮಣ, ಸುಬ್ಬರಾಯ, ತ್ರಿಪುರಸುಂದರಿ, ಲಕ್ಷ್ಮಿ, ಲಲಿತ, ಗೌರಿ, ಗುಂಡಮ್ಮ, ರಾಮಮೂರ್ತಿ ಇವರನ್ನು ಹೆತ್ತು ಗಂಡನಿಗೊಪ್ಪಿಸಿದ್ದಳು.

ಪಾಪವೆಂದೇ ಹೇಳಬೇಕು. ಲಕ್ಷ್ಮಣ, ಸುಬ್ಬರಾಯ, ತ್ರಿಪುರಸುಂದರಿಯರನ್ನು ಬಿಟ್ಟು ಉಳಿದೆಲ್ಲ ಮಕ್ಕಳೂ ಪರಂಧಾಮಕ್ಕೈದಿದ್ದುವು. ಅದೇ ಚಿಂತೆ-ಅದೇ ಕೊರತೆ ಪುಟ್ಟಮ್ಮನನ್ನು ಕುಗ್ಗಿಸಿತ್ತು. ಒಂದೊಂದು ಮಗುವಿಗೂ ಹೆಚ್ಚುಕಡಿಮೆ ಎರಡೆರಡು ವರ್ಷದ ಅಂತರ. ಒಳ್ಳೆಕಾಲ-ಯಜಮಾನರೂ ಭರ್ಜರಿಯಾಗಿ ದುಡಿಯುವವರು. ತುಪ್ಪ ಹಾಲು ಮೊಸರಿಗೆ ಲಕ್ಷ್ಯವೇ ಇಲ್ಲದಕಾಲ–ಆದ್ದರಿಂದ ಇಷ್ಟು ಮಕ್ಕಳನ್ನು ಹೆತ್ತೂ ಪುಟ್ಟಮ್ಮ ಘಟ ಒಪ್ಪಿಸದೆ ಇನ್ನೆರಡು ಹಡೆಯಲು ಸಿದ್ಧಳಿದ್ದಳು.

ದೇವರ ಚಿತ್ತ ಹಾಗಿರಲಿಲ್ಲ. ದೊಡ್ಡ ಜ್ವರದ ಹಾವಳಿಯಲ್ಲಿ ಪುಟ್ಟಮ್ಮ ಪರಂಧಾಮವನ್ನೈದಿದಳು. ಈ ಹೊತ್ತಿಗೆ ಲಕ್ಷ್ಮಣನಿಗೆ ಮದುವೆಯಾಗಿತ್ತು. ತ್ರಿಪುರ ಸುಂದರಿಗೆ ಮದುವೆಯಾಗಿತ್ತು. ಸುಬ್ಬರಾಯ ಹದಿನಾರು ವರ್ಷದ ಹುಡುಗ. ಶಿವಮೊಗ್ಗೆಯಲ್ಲಿ ಓದುತ್ತಿದ್ದ. ಆನಂದರಾಯರು ಪುಟ್ಟಮ್ಮನನ್ನು ಕಳೆದುಕೊಂಡದ್ದಕ್ಕೆ ಅನಾಥರಾದಂತೆ ಆಡಿದರು. "ನನಗ್ಯಾರು ದಿಕ್ಕು?" ಎಂದು ಎರಡುದಿನ ಚಿಂತಿಸಿದರು. ಲಕ್ಷ್ಮಣ-ಅವನ ಹೆಂಡತಿ ಸುಮಿತ್ರ ಮನೆ ಆಡಳಿತ ನೋಡಿಕೊಳ್ಳತೊಡಗಿದರು. ಆನಂದರಾಯರದು ಒಂದೇ ಚಿಂತೆ "ಅವಳಿರುವಾಗಲೇ ಸುಬ್ಬರಾಯನಿಗೆ ಒಂದು ಹೆಣ್ಣು ಗಂಟು ಹಾಕಿದ್ದರೆ ಚೆನ್ನಾಗಿರುತ್ತಿತ್ತು." "ಸುಬ್ಬರಾಯನ ಹೆಂಡ್ತೀನ್ನ ಪುಟ್ಟ ನೋಡಲಿಲ್ಲವಲ್ಲಾ", "ಸುಬ್ಬರಾಯನ ಸಂಸಾರ ಹೇಗೆ ಕುದುರೀತು?" ಎಂದು ರಾತ್ರಿ ಹಗಲು ಚಿಂತಿಸುವರು.

"ಅಣ್ಣಯ್ಯಾ ಸಮಾಧಾನ ತಂದುಕೊ, ನೀನು ಸುಮ್ಮನೆ ಕೊರಗಬೇಡ ನಾನು ಮಾಡ್ತೀನಿ" ಎಂದು ಲಕ್ಷ್ಮಣ ಸಮಾಧಾನ ಮಾಡುವನು.

"ನೀನು ಮಾಡ್ತೀಯಪ್ಪಾ ಇಲ್ಲಾಂದವರು ಯಾರು-ಆದರೆ ನಿಮ್ಮಮ್ಮ ಎರಡನೆ ಸೊಸೇನ್ನ ನೋಡಿದಹಾಗಾಯ್ತೆ ?" ಎಂದಾಗ ಲಕ್ಷ್ಮಣನ ಕೊರಳ ಸೆರೆಗಳೂ ಉಬ್ಬುವುವು. ಇಲ್ಲವಾದ ತಾಯ ನೆನೆದು ದುಃಖಿಸುವನು.

ಇಂತಹ ದುಃಖದ ಘಾಯುಗಳಿಗೆಲ್ಲಾ ಕಾಲವೇ ತಕ್ಕ ಮದ್ದು. ದಿನಗ ಳುರುಳಿದಂತೆ ಆನಂದರಾಯರು ಮತ್ತೆ ಯಥಾಪ್ರಕಾರ ಹಳೆಯ ಆನಂದರಾಯ ರಾಗುತ್ತಾ ಬಂದರು. ಅದೇ ಕೋಪ-ಅದೇ ಜಬರದಸ್ತಿ. ಹೆಂಡತಿಯ ಮರಣಾನಂತರ ಒಂದು ಕೆಲಸಮಾತ್ರ ಬಿಟ್ಟುಬಿಟ್ಟರು. ಮೊದಲಿನಂತೆ ಹಳ್ಳಿ ಹಳ್ಳಿ ಸುತ್ತಲಾರರು. ಹಿರಿಯ ಮಗ ಲಕ್ಷ್ಮಣರಾಯನಿಗೆ ಶಾನುಭೋಗಿಯ ಲೆಖ್ಖಾಚಾರವನ್ನೆಲ್ಲಾ ವಹಿಸಿದರು. ಊರ ಪಂಚಾಯಿತಿ-ದೇವಸ್ಥಾನದ ಕಾರ್ಯಗಳಲ್ಲಿ ಮಾತ್ರ ಭಾಗವಹಿಸುತ್ತಿದ್ದರು.

ಹಿರೆಹಳ್ಳಿ ನಾಗರಾಜ ಜೋಯಿಸರು ರಾಮೋತ್ಸವಕ್ಕೆ ಬಂದಿದ್ದರು. ಅಮ್ಮೆನಹಳ್ಳಿ ಪಟ್ಟಾಭಿರಾಮ ದೇವಸ್ಥಾನದ ಉತ್ಸವ ಪ್ರತಿವರ್ಷದಂತೆ ಆ ವರ್ಷವೂ ಭರ್ಜರಿಯಾಗಿ ಶಾನುಭೋಗ ಆನಂದರಾಯರ ನೇತೃತ್ವದಲ್ಲಿ ನಡೆ ದಿತ್ತು. ನಾಗರಾಜ ಜೋಯಿಸರು ಆನಂದರಾಯರಿಗೆ ಚೆನ್ನಾಗಿ ಗೊತ್ತು. ಹಿರೆಹಳ್ಳಿಯಲ್ಲಿ ಜಮೀನು ಮನೆ ಲೇವಾದೇವಿ ಇಟ್ಟುಕೊಂಡಿದ್ದು ಚೆನ್ನಾಗಿದ್ದ ವರು. ಆದರೆ ಈಚೆಗೆ ಲೇವಾದೇವಿಯಲ್ಲಿ ಲುಕ್ಸಾನವಾಗಿ ಎರಡು ಹೊಲಗಳೂ ಹೋಗಿದ್ದು ನಷ್ಟಕ್ಕೊಳಗಾಗಿದ್ದರು. ಪ್ರತಿ ಸಾರ್ತಿ ರಾಮನವಮಿಗೂ ಜೋಯಿಸರು ಬರುವ ಪದ್ಧತಿ. ಬಂದಾಗ ತಿಪ್ಪಯ್ಯನವರ ಮನೆಯಲ್ಲಿ ಇಳಿದು ಕೊಳ್ಳುವರು. ತಿಪ್ಪಯ್ಯನವರ ವ್ಯವಹಾರವೆಂದರೆ ಹೆಣ್ಣಿಗೆ ಗಂಡು, ಗಂಡಿಗೆ ಹೆಣ್ಣು ಕೂಡಿಸಿ ಮದುವೆಗಳನ್ನು ಹೊಂದಿಸುವುದೇ ಆಗಿತ್ತು.

ಉತ್ಸವದ ಕಡೆಯದಿನ ಸಂತರ್ಪಣೆ, ಐನೂರು ಎಲೆ ಬೀಳಬೇಕು. ಸಾವಿರ ಜನ ಬಡಬಗ್ಗರಿಗೆ ಬೇರೆ ಅನ್ನದಾನದ ವ್ಯವಸ್ಥೆ ಇತ್ತು. ಅವತ್ತು ಆನಂದರಾಯರು ಮೂರನೆ ಪಂಕ್ತಿಗೆ ಇತರ ಉತ್ಸವದ ಕಾರ್ಯಕರ್ತರೊಡನೆ ಊಟಕ್ಕೆ ಉತ್ಸವದ ವಿವಿಧ ವಿವರಗಳ ವೈಖರಿಯನ್ನು ವಿಸ್ತಾರವಾಗಿ ಚರ್ಚಿ ಸುತ್ತಾ ಕೂಡುತ್ತಿದ್ದರು. ಈ ಸಾರಿ ಮೊದಲಿಂದಲೂ ಕೆಲಸಮಾಡಿದವರಲ್ಲಿ ನಾಗರಾಜ ಜೋಯಿಸರೂ ಒಬ್ಬರು. ಅವರೂ ತಿಪ್ಪಯ್ಯನವರೂ ಮತ್ತಿತರರೂ ಎಲ್ಲರೂ ಸಾಲಾಗಿ ಕುಳಿತಿದ್ದರು.

ಸುಬ್ಬರಾಯ ನಾಲ್ಕನೆ ಪಂಕ್ತಿಗೂ ಬಡಿಸುವುದರಲ್ಲಿ ನಿರತನಾಗಿದ್ದ. ಚೂಟಿಯಾಗಿ ಪಾದರಸದಂತೆ ಸುಳಿಯುತ್ತಿದ್ದ ಸುಬ್ಬರಾಯನ ಮೇಲೆ ನಾಗ ರಾಜ ಜೋಯಿಸರ ಕಣ್ಣುಬಿತ್ತು. ಹೋದವರ್ಷ ಹುಡುಗನಂತಿದ್ದವನು ಎಳೆ ಮೀಸೆ ಮೂಡಿ ಹರೆಯಕ್ಕೆ ಬರುತ್ತಿದ್ದುದು ಅವನ ಚರ್ಯೆಯಲ್ಲಿ ಅವನ ದೇಹದಲ್ಲಿ ಮೂಡಿಬಂದಿತ್ತು. ಹದಿನಾರು ತುಂಬಿ ಹದಿನೇಳಕ್ಕೆ ಬರುತ್ತಿದ್ದ ಸುಬ್ಬರಾಯ ತಮ್ಮ ಮಗಳಿಗೆ ತಕ್ಕ ಗಂಡು ಎಂದು ತಟಕ್ಕನೆ ಹೊಳೆಯಿತು.

"ತಿಪ್ಪಣ್ಣಾ-ನಾನು ಮೂರ್ಖ"

"ಯಾಕೊ ಹೀಗಂತಿ–ಇನ್ನೊಂದು ಚಿರೋಟಿ ಹಾಕಿಸಲೇನು?"

"ಚಿರೋಟಿಗಲ್ಲ ಮಹಾರಾಯ – ನಾನು ಹೇಳಿದ್ದು ನೀನು ಏನು ಮಾಡಿದೆ ?"

"ಯಾವುದು ?"

"ಸರಿಹೋಯ್ತು–ಹೀಗಾದರೆ ನಾವುಗಳು ಬದುಕುವಂತಿಲ್ಲ"

"ಅಂಥಾದ್ದೇನು ಜೋಯಿಸಾ?"

"ನಮ್ಮ ಅಮ್ಮಯ್ಯ ರಾಜಮ್ಮನಿಗೆ ಗಂಡು ಹುಡುಕೊಂತ ಹೇಳಿದ್ದು ಮರ್ತೇ ಹೋಯ್ತೆ ?"

"ಆ ವಿಷಯವೇ–ತರದೂದು ಮಾಡ್ತಾ ಇದ್ದೇನಯ್ಯ; ಸರಿಯಾದ ಸಂಬಂಧ ಸಿಕ್ಕೋದೆ ಪಂಚಾಯ್ತಿ"

"ನಿನ್ನ ನಾನು ಈ ಗಂಟುಹಾಕೋ ವಿಚಾರದಲ್ಲಿ ಖವೀಮಾಂತ ತಿಳಿ ದಿದ್ದೆ, ನೀನು ಪ್ರಯೋಜನವಿಲ್ಲ"

ಈ ಮಾತು ತಿಪ್ಪಯ್ಯನನ್ನು ಅಳುಕಿಸಿತು. ಅವನು ಮನಸ್ಸು ಮಾಡಿದ್ದರೆ ಈ ಹೊತ್ತಿಗೆ ಯಾವುದಾದರೂ ಹೊಂದಿಸುತ್ತಿದ್ದನೇನೋ–ಅದ್ಯಾಕೋ ಜೋಯಿಸರ ಮಗಳ ವಿಷಯ ನಿಜಕ್ಕೂ ತಿಪ್ಪಯ್ಯ ಮರೆತಿದ್ದ. ಹಾಗೆಂದು ಹೇಳಿಕೊಳ್ಳಲಾರದೆ ಹುಡುಕುತ್ತಾ ಇರೋ ಹಾಗೂ ತಕ್ಕ ವರ ಸಿಕ್ಕಲಿಲ್ಲವೆಂದೂ ಹೇಳಿದ.

"ಜೋಯಿಸಾ, ಹಾಗೆ ನೀನು ಟೀಕಿಸಿದರೆ ಸಂಜೆಯೊಳಗೇ ಹೊಂದಿಸಿ ಕೊಟ್ಟೇನು"

"ಅದು ಬಲ್ಲೆ ತಿಪ್ಪಯ್ಯ. ನೀನು ಮನಸ್ಸು ಮಾಡಲಿಲ್ಲಾನ್ನು"

"ಹಾಗೇ ಹೇಳಬೇಕಾಗಿದೆ"

"ಆನಂದರಾಯರ ಮಗ ಸುಬ್ಬು ಏನಾಗಿದ್ದಾನೆ ?"

"ನಾನು ಬೆಪ್ಪ ಕಣೊ ಜೋಯ್ಸ್ನ. ಕಸುಬಿನವನಿಗೇ ಇದು ಹೊಳೆಯಲಿಲ್ಲ–ನಾಳೆ ಮಾತಾಡೇಬಿಡೋಣಂತೆ"

"ಸರಿ, ವಿಷಯ ಸೂಚಿಸಿದ್ದೀನಿ, ಇನ್ನು ನಾನು ನಿಶ್ಚಿಂತೆಯಾಗಿರಬಹುದು"

"ಅದರ ಯೋಚನೆ ಬಿಡೊಂತ ನಾನು ಹೇಳ್ಳಿಲ್ವೆ ?"

ಇವರ ಗುಸು ಗುಸು ಮಾತಿನ ಅಂತರ್ಯ ಆನಂದರಾಯರಿಗೆ ಅರ್ಥವಾಗಲಿಲ್ಲ. ಆದರೂ ತಿಪ್ಪಯ್ಯ ಪ್ರಸನ್ನವದನನಾಗಿ ಪಾಯಸ ಕುಡಿದ ವರಸೆ ನೋಡಿದರೆ ಯಾವುದೊ ಗಂಡು ಯಾವುದೊ ಹೆಣ್ಣಿನ ಕೈಗೆ ಕೈಕೊಟ್ಟಿತೆಂದೇ ನಿರ್ಧರಿಸಿದರು.

ಸೊಗಸಾದ ಚಿರೋಟಿ ಸಮಾರಾಧನೆ, ಐನೂರು ಮಂದಿಗೆ ಅಂದರೆ ಹುಡುಗಾಟವೆ ?

"ಪಟ್ಟಾಭಿರಾಮನ ಸೇವೆ ಹೇಗೋ ನಡೆದುಹೋಗತ್ತೆ" ಎಂದು ಆನಂದ ರಾಯರು ಅಂದರೂ ಇದಕ್ಕಾಗಿ ಹಗಲಿರಳು ದುಡಿದ ಅವರಿಗೇ ಗೊತ್ತು ಅದರ ದುಗುಡ.

ಇತರ ಹುರುಪಿನ ಹುರಿಯಾಳುಗಳು, ಸುಬ್ಬರಾಯ, ಇತರರು ಊಟ ಮುಗಿಸಿದಾಗ ಸಂಜೆ ಐದು ಬಡಿದಿತ್ತು. ಮತ್ತೆ ಸಂಜೆಯ ಪೂಜೆ, ಹರಿಕಥೆ, ಅಂದು ರಾತ್ರಿ ಲಂಕಾದಹನ ಬೈಲಾಟ–ಇವಿಷ್ಟೂ ಇದ್ದವು. ಲಲಿತಾ ಸಹಸ್ರ ನಾಮ, ರಾಜಾಶಿರ್ವಾದ, ಶಯನೋತ್ಸವದ ಸಮಾರಂಭ ಮುಗಿದ ಮೇಲೆ ಆನಂದರಾಯರು ಮನೆಕಡೆ ಹೊರಟರು. ಸುಬ್ಬರಾಯ ಮಿತ್ರರು ಬೈಲು ನಾಟಕದ ಅಟ್ಟದಬಳಿ ಹೋದರು.

ಮರುದಿನ ಮುಂಜಾನೆ ನಾಗರಾಜ ಜೋಯಿಸರೂ ತಿಪ್ಪಯ್ಯನವರೂ ಆನಂದರಾಯರ ಮನೆಗೆ ಬಂದಾಗ ರಾಯರು ಸ್ನಾನಕ್ಕೆ ಇಳಿದಿದ್ದರು. ಸುಬ್ಬರಾಯ ಶಿವಮೊಗ್ಗೆಗೆ ಹೊರಡುವ ಸಿದ್ಧತೆ ನಡೆಸಿದ್ದ. ಗಂಟು ಹಿಡಿದು ತಂದೆ ಬಚ್ಚಲಮನೆಯಿಂದ ಬರುವುದನ್ನೇ ಕಾಯುತ್ತಾ ನಿಂತಿದ್ದ. ಮುಂದಿನ ಹಜಾರದಲ್ಲಿ ಚಾಪೆ ಹಾಸಿ ಜೋಯಿಸರಿಗೆ–ತಿಪ್ಪಯ್ಯನವರಿಗೆ ಕೂಡಿಸಿದ.

ಸುಮಿತ್ರ ಹಜಾರದ ಮುಂಭಾಗಕ್ಕಿದ್ದ ದನದ ಕೊಟ್ಟಿಗೆಯಲ್ಲಿ ಹಸು ಹಿಂಡುತ್ತಿದ್ದಳು. ಲಕ್ಷ್ಮಣ ಅಷ್ಟುಹೊತ್ತಿಗೇ ಎದ್ದು ಹೊಲದಕಡೆ ಹೋಗಿದ್ದ.

ಸ್ನಾನಮಾಡಿ ಮಂತ್ರ ಹೇಳುತ್ತಾ ಸ್ನಾನ ಗೃಹದಿಂದ ಹೊರಕ್ಕೆ ಬಂದಾಗ ಸುಬ್ಬರಾಯ, ತಿಪ್ಪಯ್ಯ ಜೋಯಿಸರು ಬಂದ ವಿಷಯ ತಿಳಿಸಿದ ಮತ್ತು ತಾನು ಹೊರಡುವ ವಿಷಯ ತಿಳಿಸಿದ.

"ನಾನು ಹೋಗಿಬರ್ಲೆ ಅಪ್ಪಾ?"

"ಹೂಂ–ಲಕ್ಷ್ಮಣ ದುಡ್ಡು ಕೊಟ್ಟನೇನು?"

"ಹತ್ತು ಕೊಟ್ಟಿದ್ದಾನೆ...."

"ಸರಿ ಚೆನ್ನಾಗಿ ಓದಿಕೊ. ದುಡ್ಡು ಸಾಕುತಾನೆ?"

"ಸಾಕು....ಬೇಕಾದರೆ ಬರೀತೀನಿ"

"ಬರಿಯೋದು ಬೇಡ. ಲಕ್ಷ್ಮಣನೇ ಅಲ್ಲಿಗೆ ಬರಬಹುದು. ಕೋರ್ಟಿನ ಕೆಲಸವಿದೆ....ಆಗ ಕೇಳಿ ಇಸ್ಕೊ"

ತಂದೆಗೆ ನಮಸ್ಕಾರ ಮಾಡಿ ಗಂಟು ಹಿಡಿದು ಹೊರಗೆ ಬಂದ. ಹಾಲು ಕರೆದು ತುಂಬಿದ ತಂಬಿಗೆಯೊಡನೆ ಎದುರುಗೊಂಡ ಅತ್ತಿಗೆ ಸುಮಿತ್ರಮ್ಮಳಿಗೆ ಹೊಗಿಬರ್‍ತೀನಿ ಅತ್ತಿಗೆ, ಅಣ್ಣನಿಗೆ ಹೇಳಿ' ಎಂದು ಹೇಳಿ ನಮಸ್ಕರಿಸಿ ಹೊರಬಿದ್ದ.

ಈ ಒಂದು ಘಳಿಗೆ ಆನಂದರಾಯರಿಗೆ ಪುಟ್ಟಮ್ಮನ ನೆನಪು ಬಂತು. ಹಿಂದೆಲ್ಲ ಮಗ ಊರಿಗೆ ಹೊರಟರೆ ಜೊತೆಗೆ ದೊಡ್ಡ ಬುಟ್ಟಿ ತುಂಬ ತಿಂಡಿಯನ್ನೂ ಮಾಡಿಕೊಡುತ್ತಿದ್ದುದು ನೆನಪಿಗೆ ಬಂತು. ಅದೇ ಬುದ್ಧಿ ಈ ಸುಮಿತ್ರೆಗೇಕೆ ಬರಲಿಲ್ಲ? ತಾಯಿ ತಾಯಿಯೆ, ಅತ್ತಿಗೆ ಅತ್ತಿಗೆಯೆ.

ಹೊರಗೆ ಕುಳಿತ ತಿಪ್ಪಯ್ಯ–ನಾಗರಾಜ ಜೋಯಿಸರು ಕೆಮ್ಮಿ ತಮ್ಮ ಆಗಮನವನ್ನು ಜ್ಞಾಪಕಕ್ಕೆ ತಂದರು.

"ಒಂದೇ ನಿಮಿಷ ಜೊಯಿಸರೆ, ಸಂಧ್ಯಾವಂದನೆ ಮುಗಿಸಿ ದೇವರಿಗೆರಡು ಹೂವು ಹಾಕಿಬರ್ತೀನ್"

"ನಿಧಾನವಾಗಿ ಮುಗಿಯಲಿ ಅಹನ್ನಿಕ" ಎಂದು ಹೇಳಿದರು.

ಆನಂದರಾಯರು ದೇವರಪೂಜೆ ಮುಗಿಸಿ ಶಾಲುಹೊದ್ದು ಹೊರಗೆ ಬಂದಾಗ ಸಾಕ್ಷಾತ್ ಪರಶಿವನನ್ನೇ ನೋಡಿದಂತಾಯಿತು. ಲಕ್ಷಣವಾಗಿ

ಮೂರು ಬೆರಳು ವಿಭೂತಿ ಧರಿಸಿ ಮಂತ್ರ ಗೊಣಗುತ್ತಲೇ ಬಂದು ಹಜಾರ ವನ್ನು ಸೇರಿದರು.

"ಏನು ತಿಪ್ಪಯ್ಯ–ನಾಗರಾಜ ಜೋಯಿಸರು ಅಪುರೂಪಕ್ಕೆ ದಯಮಾಡಿ ಸಿದ್ದು ?...."

"ನಿಮ್ಮ ಮನೆಗೆ ಅಪುರೂಪವೇ ಹೊರ್ತು ವರ್ಷ ವರ್ಷವೂ ನಿಮ್ಮ ದರ್ಶನ ಆಗಲೇ ಬೇಕಲ್ಲಾ"

"ಹೂಂ ಏನೋ ಪಟ್ಟಾಭಿರಾಮನ ಕೃಪೆ. ನಿಮ್ಮಗಳ ಸಹಾಯ ಸೇವೆ ನಡೆದುಹೋಗ್ತಾ ಇದೆ...."

"ಅದು ಸರಿಯೆ ಪಾಪ, ಆದರೂ ನಿಮ್ಮ ಪರಿಶ್ರಮ, ಆಡಳಿತ ವೈಖರಿ. ಜಬರದಸ್ತಿನ ಏರ್ಪಾಡುಗಳಿಲ್ಲದಿದ್ದರೆ ಈ ಕೆಲಸ ಇಷ್ಟು ಸುಸೂತ್ರ ನಡೆಯೋದು ಸಾಧ್ಯ ಇಲ್ಲ ರಾಯರೆ. ಏನಂತೀರಿ ತಿಪ್ಪಯ್ಯ?"

"ನಾನು ಅನ್ನೋದು ಏನು ಬಂತು. ಆನಂದರಾಯರ ಏರ್ಪಾಟೊಂದರೆ ಯಾರೂ ಒಂದು ಮಾತು ಆಡೋ ಹಾಗಿರೋಲ್ಲ"

"ಸರಿ ನೀವೇ ಮೆಚ್ಚಬೇಕು ನನ್ನ ಕೆಲಸ...."

"ಈ ಸೇವಾತತ್ಪರರ ಮನೆಯಲ್ಲಿ ತಮ್ಮ ಮಗಳದೂ ಸೇವೆ ನಡೆಯಲಿ ಅಂತಾರೆ ಜೋಯಿಸರು"

"ಅರ್ಥವಾಗಲಿಲ್ಲ ತಿಪ್ಪಯ್ಯ...."

"ನಾನು ಹೇಳ್ತೀನೆ ಕೇಳಿ ನಿನ್ನೆ ಸಮಾರಾಧನೆಯಲ್ಲಿ ಒಂದು ವಿಷಯ ತಿಪ್ಪಯ್ಯನೋರು ಹೇಳಿದರು"

"ಅಲ್ಲ ಅಲ್ಲ ರಾಯರೆ, ಇಂಥ ವಿಷಯ ತಿಪ್ಪಯ್ಯ ಹೇಳಿದ ಅಂದರೆ ವಾಸ್ತವವಾಗಿ ಕಂಡರೂ ಮೊದಲು ಹೇಳಿದ್ದು ಜೋಯಿಸರೇ"

"ಹಹಹ....ಚೆನ್ನಾಗಿದೆ ವಿಷಯ ಏನೂ ಅನ್ನೋದನ್ನ ಹೇಳದೆ ಇಬ್ಬರೂ ಮೊಗಂ ಆಗಿ ಮಾತಾಡಿದರೆ ಹೇಗೆ ?"

"ನಾನೇ ಹೇಳ್ತೀನೆ ಕೇಳಿ ರಾಯರೆ. ನಿನ್ನೆ ಸಮಾರಾಧನೇಲಿ ನಿಮ್ಮ ಸುಬ್ಬರಾಯನ್ನ ನೋಡಿದ ಜೋಯಿಸರು ಅವರ ಮಗಳನ್ನು ಯಾತಕ್ಕೆ ಅವನ ಹೆಂಡ್ತಿನ್ನಾಗಿ ಮಾಡಬಾರದೂ ಅಂತ ಯೋಚಿಸ್ತಿದಾರೆ. ಅದಕ್ಕೆ ತಮ್ಮನ್ನೇ

ಈ ವಿಷಯ ಪ್ರಸ್ತಾಪಿಸಿದರೆ ಕೆಲಸ ಬಗೆಹರಿದು ಹೋಗುತ್ತೆಂದು ನಿಮ್ಮಲ್ಲಿಗೇ ಬಂದದ್ದಾಯಿತು"

"ಋಣಾನುಬಂಧ ದೈವಸಂಕಲ್ಪ ಆ ಹುಡುಗಿ ಹಣೇಲಿ ಸುಬ್ಬರಾಯನ್ನೇ ಕೈಹಿಡಿಯಬೇಕೂನ್ನೋದು ಇದ್ದರೆ ಯಾರಿಂದ ಬಿಡಿಸೋಕೆ ಸಾಧ್ಯ ತಿಪ್ಪಯ್ಯಾ ?"

"ಅದು ಸರಿ ರಾಯರೇ, ಆ ಋಣಾನುಬಂಧ ಇದೆಯೇ ಇಲ್ಲವೋ ಅನ್ನೋದು ಅವನ-ಅವಳ ಜಾತಕ ನೋಡಿಸಿದರೆ ಇತ್ಯರ್ಥವಾಗೋದು ?"

"ಪರವಾಗಿಲ್ಲಯ್ಯಾ ಮಾತಿನಲ್ಲಿ ಜಾಣ ನೀನು. ಮೆಲ್ಲಗೆ ಜಾತಕಕೊಡಬೇಕೂಂತ ಸೂಚಿಸ್ತಾ ಇದ್ದೀಯೆ ?"

"ಯಾಕೆ ! ಅದರಲ್ಲಿ ನಂಬಿಕೆ ನಿಮಗಿಲ್ಲವೇನು ?"

"ಇಲ್ಲದೆ ಉಂಟೇ ಜಾತಕಾನೂ ತೋರ್ಸೋಣ"

"ಯಾರಿಗೇನೂ ತೋರಿಸೋ ಗೋಜಿಗೆ ಹೋಗಬೇಡಿ. ನಾಗರಾಜ ಜೋಯಿಸರಿಗಿಂತ ಇನ್ನು ಬೇರೆಯವರು ಬೇಕೆ ?"

"ತಿಪ್ಪಯ್ಯ ನಾನು ನೋಡುವುದು ಬೇಡ. ರಾಯರಿಗೆ ಮಾಮೂಲಾಗಿ ಎಲ್ಲಿ ತೋರಿಸುವ ಪದ್ಧತಿಯೋ ಅಲ್ಲಿಯೇ ತೋರಿಸಲಿ"

"ನೀವೂ ನೋಡಿ, ನಾನೂ ತೋರಿಸುತ್ತೇನೆ, ಆಯ್ತೆ? ಈ ವಿಷಯಗಳಲ್ಲಿ ಗಂಡು ಹೆಣ್ಣಿನವರು ಇಬ್ಬರೂ ತೋರಿಸುವುದೇ ಒಳ್ಳೆಯದು"

"ಅದೀಗ ಸರಿಯಾದ ಮಾತು"

"ಹಾಗಾದರೆ ನಾನು ಊರಿಗೆ ಹೋಗಿ ಜಾತಕದ ನಕಲು ಕಳಿಸ್ತೇನೆ"

"ಹಾಗೇ ಮಾಡಿ"

"ಹುಡುಗೀನ್ನ ನೋಡಬೇಕೂಂದರೆ ಮುಂದಿನ ವಾರ ಕರೆದುಕೊಂಡು ಬರ್ತೇನೆ"

"ನೋಡೋದೇನಪ್ಪಬಂತು, ಕಣ್ಣು ಮೂಗು ನೇರವಾಗಿದ್ದರೆ ಸರಿ"

"ಆದರೂವೆ ಹುಡುಗನ ಮನಸ್ಸಿಗೆ ಒಪ್ಪಿಗೆಯಾದರೆ ಒಳ್ಳೇದಲ್ಲವೆ ?"

"ನೀವು ಈಗಿನ ಕಾಲದ ಮಾತಾಡ್ತಾ ಇದ್ದೀರೀ. ನಾನು ಹೇಳಿದ ಹುಡುಗೀನ್ನ ನಮ್ಮ ಸುಬ್ಬ ಆಗೇ ಆಗ್ತಾನೆ....ನಮ್ಮ ಹುಡುಗರು ಬೆಳೆದ ರೀತಿಯೇ ಹಾಗೆ....ಮಗೂಗೆಷ್ಟು ವಯಸ್ಸು ?"

"ಅಷ್ಟವರ್ಷೇ ಭವೇತ್ ಕನ್ಯಾ—ಆರ್ಯೋಕ್ತಿ ಮೀರುವ ಮನುಷ್ಯನೇ ಅಲ್ಲ ನಾನು. ಆದರೂ ಹತ್ತು ತುಂಬಿ ಹನ್ನೊಂದಕ್ಕೆ ಬಂತು"

"ಸರಿಯೆ ಸುಬ್ಬುಗೂ ಹದಿನೇಳಕ್ಕೆ ಬೀಳುತ್ತೆ. ವರಸಾಮ್ಯ ಸರಿಹೋಗ ಬಹುದು. ಬ್ರಹ್ಮ ಬರಹ ಬರೆದಹಾಗೆ ಆಗಲೇಳಿ"

"ದೊಡ್ಡವರು ದೊಡ್ಡಮನೆತನ; ದೊಡ್ಡ ಮನಸ್ಸುಮಾಡಿ ಈ ಬಡವನ ಮಗಳನ್ನು ಮಾಡಿಕೊಳ್ಳಬೇಕು"

"ಭಗವದಿಚ್ಛೆ, ಎಲ್ಲ ಅವನ ಸಂಕಲ್ಪ; ನಮ್ಮದೇನೂ ಇಲ್ಲ ಜೋಯಿಸರೆ"

"ತಿಪ್ಪಯ್ಯ, ಹಾಲು ಕುಡಿಯುತ್ತೀರೇನು ?"

"ಆನಂದರಾಯರೆ ಗಂಡಿನವರು ನೀವು....ನಿಶ್ಚಿತಾರ್ಥ ತಾಂಬೂಲ ವಿಧಿ ನಡೆಯೋವರೆಗೂ ಒಂದು ಕಾಳು ನೀರು ನಿಮ್ಮ ಮನೆಯಲ್ಲಿ ಕುಡಿಯಕೂಡ ದಲ್ಲಾ—"

"ಅದಕ್ಕೇ ನಾನು ತಿಪ್ಪಯ್ಯನಿಗೆ ಹೇಳಿದ್ದು....ತಿಪ್ಪಯ್ಯ ನೀನು ಇಲ್ಲೇ ಭೋಜನಕ್ಕೆ ಏಳಬೇಕು"

"ಕ್ಷಮಿಸಿ, ಮನೆಯಲ್ಲಿ ಅಡಿಗೆಮಾಡಿ ಕಾದಿರ್ತಾರೆ. ನಾಗರಾಜ ಜೋಯಿ ಸರೂ ಸಂಜೆಗೆ ಹಳ್ಳಿಗೆ ಹೊರಡುವವರು. ಚಿಕ್ಕ ಮೇಜವಾನಿ ಮಾಡಿ ಕಳಿಸ ಬೇಡವೆ ?"

"ಹೌದು ಹೌದು, ನಿಶ್ಚಯವಾದ ಮಾತು"

"ನಾನು ಹೊರಡಲೆ ರಾಯರೆ ?"

"ಶುಭಮಸ್ತು....ನಮಸ್ಕಾರ"

ಹರೇ ರಾಮ ಎಂದು ತಿಪ್ಪಯ್ಯ ಎದ್ದರು. ಜೋಯಿಸರೂ ಎದ್ದರು. ಇಬ್ಬರನ್ನೂ ತಲೆಬಾಗಿಲಿನ ತನಕ ಬಿಟ್ಟು ಬರುವುದಕ್ಕೆ ಆನಂದರಾಯರೂ ಎದ್ದು ಹೊರಟರು. ಬೀದಿ ಬಾಗಿಲಿಗೆ ಈ ಮೂರು ಜನ ಸೇರುವ ಹೊತ್ತಿಗೆ ಸರಿಯಾಗಿ ತಲೆಯ ಮೇಲೆ ಜೋಳದ ದಂಟಿನ ಹೊರೆಹೊತ್ತು ಲಕ್ಷ್ಮಣ ಹೊಲದಿಂದ ಹಿಂದಿರುಗುತ್ತಿದ್ದ.

"ಏನು ಲಕ್ಷ್ಮಣಾ ಹೊಲಕ್ಕೆ ಹೋಗಿದ್ದೇನು ?"

"ಹೌದು ತಿಪ್ಪಯ್ಯನೋರೆ''

"ಇವನೇ ಆನಂದರಾಯರ ಹಿರೆಮಗ"

"ಗೊತ್ತು ಗೊತ್ತು....ಹಿರೆಕೆರೂರು ಪೈಕಿ ಅಲ್ಲವೆ ಈತನಿಗೆ ಹೆಣ್ಣು ತಂದಿರೋದು ?"

"ಹಾಗಾದರೆ ಅವರೆಲ್ಲಾ ನಿಮಗೆ ಗೊತ್ತೇನು ?''

''ಗೊತ್ತಿಲ್ಲದೆ ಉಂಟೆ"

"ಹಾಗೇನು, ಸರಿಸರಿ"

"ಹಹಹ ಸರಿ, ಬರ್‍ತಿನಿ...."

ಎಂದೆನ್ನುತ್ತಾ ಜೋಯಿಸರೂ ತಿಪ್ಪಯ್ಯನವರೂ ಹೊರಟುಹೋದರು. ಹೊರೆಯನ್ನು ಕೊಟ್ಟಿಗೆಯ ಬಳಿ ಎತ್ತಿಹಾಕಿದಾಗ ಸುಮಿತ್ರ ಚೊಂಬು ತುಂಬಾ ತಣ್ಣನೆಯ ನೀರು ತುಂಬಿ ಹಿಡಿದು ನಿಂತಿದ್ದಳು. ಲಕ್ಷ್ಮಣನಿಗೆ ತಣ್ಣನೆ ನೀರು ಮುಖಕ್ಕೆ, ಕಾಲಿಗೆ ಬಿದ್ದಾಗ ಬಹು ಹಿತವೆನಿಸಿತು.

"ಇನ್ನೊಂದು ತಂಬಿಗೆ ನೀರು ಕೊಡೆ"

"ತಂದೆ" ಎನ್ನುತ್ತಾ ಪಂಚಪಾತ್ರೆಯಲ್ಲಿ ನೀರು ತುಂಬಿ ತಂದಳು. ಲಕ್ಷ್ಮಣನ ಸ್ವಭಾವವೇ ಹಾಗೆ. ಸ್ನಾನಕ್ಕಿಳಿಯಲಿ, ಮುಖ ತೊಳೆಯಲಿ, ನಿಧಾನವಾಗಿ ಹೇರಳ ನೀರು ಉಪಯೋಗಿಸುವನು.

ಪಟೇಲ ಪುಟ್ಟಯ್ಯ ಬಂದು ಯಾವುದೋ ಪಂಚಾಯ್ತಿ ತೀರಿಸಲು ಎಲ್ಲರೂ ಚಾವಡಿಯಲ್ಲಿ ಸೇರಿರುವುದಾಗಿಯೂ ಬೇಗ ಬರಬೇಕೆಂದೂ ಆನಂದರಾಯರಿಗೆ ತಿಳಿಸಿದ. ಬಿಸಿಲು ಆಗಲೇ ಏರುತ್ತಿತ್ತು. ತಲೆಗೆ ಶಲ್ಯ ಸುತ್ತಿಕೊಂಡು ಕೋಲು ಹಿಡಿದು ರಾಯರ ಸವಾರಿ ಹೊರಬಿದ್ದಿತು.

ರಾಯರು ಮನೆಯಲ್ಲಿಲ್ಲವೆಂದು ಖಚಿತವಾದಮೇಲೇ ಸುಮಿತ್ರೆ ಮಾತಾಡಲು ಧೈರ್ಯ ಮಾಡುತ್ತಿದ್ದಳು. ಲಕ್ಷ್ಮಣನಿಗೂ ಅಷ್ಟೆ. ಅಪ್ಪ ಇಲ್ಲವೆಂದರೇ ಗಂಟಲಿರುವುದೆಂದು ಪ್ರದರ್ಶಿಸಲು ಅವಕಾಶ. ಹೊಲದಿಂದ ಬಂದವನಿಗೆ ತುಂಬಾ ಹಸಿವಾಗಿತ್ತು. ಒದ್ದೆ ಬಟ್ಟೆಯಿಂದ ಪುಷ್ಟವಾದ ರಟ್ಟೆ, ಹರವಾದ ಎದೆಯನ್ನು ಒರೆಸಿಕೊಳ್ಳುತ್ತಾ

"ಏನು ಅಡಿಗೆ ?"

"ಹಲಸಿನಕಾಯಿ ಹುಳಿ"

"ಮೊಸರು ಬಜ್ಜಿ ಮಾಡಿಲ್ಲವೆ ?"

"ಅದಿಲ್ಲದಿದ್ದರೆ ನೀವು ರಾಗಿಮುದ್ದೆ ತಿನ್ನುವುದು ನನಗೆ ಗೊತ್ತಿಲ್ಲವೆ ?"

"ಅಂಥಾಗೆ, ತಿಪ್ಪಯ್ಯನೋರು ಮತ್ತಿನ್ಯಾರೋ ಬಂದಿದ್ದರಲ್ಲಾ ಏನು ವಿಷಯ ?"

"ನಾನು ಅಡಿಗೆಮನೇಲಿದ್ದೆ, ಮಾತು ಕೇಳಿಸಲಿಲ್ಲ"

"ತಿಪ್ಪಯ್ಯ ಬಂದಿದ್ದ ಅಂದಮೇಲೆ ಹೆಣ್ಣುಗಂಡಿನ ಸಮಾಚಾರವೇ ಇರಬೇಕು"

"ನನಗೂ ಹಾಗೇ ತೋಚತ್ತೆ. ಒಂದುಸಲ ಈ ಕಡೆ ಬಂದಾಗ ಜಾತಕ ಗೀತಕ ಅಂತ ಮಾತು ಕೇಳಿಬಂತು"

"ಸರಿ ಸುಬ್ಬರಾಯನ ಮದುವೆಗೆ ಏರ್ಪಾಟೂಂತ ಕಾಣುತ್ತೆ"

"ಆಗಬೇಡವೆ ಮತ್ತೆ"

"ಆಹಾ-ಆಗಲೇಬೇಕು"

"ಈ ಹೆಣ್ಣು ಎಷ್ಟು ವರದಕ್ಷಿಣೆ ತರುತ್ತೊ ನೋಡಬೇಕು"

"ಅದೆಲ್ಲ ಅಪ್ಪಯ್ಯನಿಗೆ ಗೊತ್ತು.... ನೀನು ಬಡಿಸ್ತೀಯೋ ಅಥವ ಹೀಗೇ ಬಡಬಡಸ್ತಾ ಇರ್ತಿಯೊ ?"

"ಆಗಲೆ ಎಲೆಹಾಕಿ ನೀರಿಟ್ಟಿದ್ದೇನೆ. ನೀವೆ ಏನೇನೊ ಅಡ್ಡಮಾತು ತೆಗೆದು ನನ್ನನ್ನೇ ಅನ್ನಿ ಚೆನ್ನಾಗಿದೆ"

"ಅಬ್ಬಬ್ಬ ಏನು ಕೋಪವಪ್ಪ. ಬಡಿಸು ನಡಿ...."

ಲಕ್ಷ್ಮಣನ ಊಟವೆಂದರೆ ಸುತ್ತ ಹನ್ನೆರಡು ಹಳ್ಳಿಗೂ ಪ್ರಸಿದ್ಧಿಯಾಗಿತ್ತು. ರಾಮೋತ್ಸವದ ಸಂತರ್ಪಣೆಯಲ್ಲಿ ಜಿದ್ದಿನಮೇಲೆ ಭಕ್ಷ್ಯಗಳನ್ನು ತಿಂದು ಪಂದ್ಯದಲ್ಲಿ ಗೆದ್ದದ್ದು ಅನೇಕಬಾರಿ. ಆನಂದರಾಯರ ಮನೆತನವೇ ಹಾಗೆ. ತಿನ್ನುವುದರಲ್ಲಿ ಎತ್ತಿದ ಕೈ. ಮತ್ತೆ ಬಡಿಸುವುದರಲ್ಲೂ ಅದೇ ಧಾರಾಳತನ ರಾಮೋತ್ಸವದ ಸಂತರ್ಪಣೆಯಲ್ಲಿರುತ್ತಿತ್ತಲ್ಲದೆ ಮನೆಯಲ್ಲಿ ಬಡಿಸಬೇಕೆಂದರೆ ಕೈಕಡಿದಂತಾಗುತ್ತಿತ್ತು. ಸುಮಿತ್ರ ಬಡಿಸಿದ ಬಿಸಿಬಿಸಿಯ ಊಟವನ್ನು ಹೊಡೆದು ಹಜಾರದಲ್ಲಿ ಹಾಗೇ ಒರಗಿದ್ದ ಲಕ್ಷ್ಮಣ. ಬದಿಯ ಹೊಸಿಲ ಬಳಿ ಮಾವನವರಿಗಾಗಿ ಕಾಯುತ್ತಾ ಕುಳಿತಳು ಸುಮಿತ್ರ. ಪುಟ್ಟಮ್ಮ ಹೋದಾಗಿ

ನಿಂದ ಮನೆಯ ಯಜಮಾನತ್ವ ವಹಿಸಿದ ಸುಮಿತ್ರ ಅತ್ತೆಯವರಂತೆಯೇ ಎಲ್ಲರ ಊಟವಾಗುವವರೆಗೂ ಕಾದಿದ್ದು ಕಡೆಗೆ ಬಡಿಸಿಕೊಂಡು ಊಟಮಾಡುವ ಪದ್ಧತಿ. "ನನಗಾಗಿ ಕಾಯಬೇಡವೆ ತಾಯಿ" ಎಂದು ಅನೇಕಬಾರಿ ಆನಂದ ರಾಯರು ಅಂದದ್ದುಂಟು. ನಾಚಿ ತಲೆ ತಗ್ಗಿಸುತ್ತಿದ್ದಳಲ್ಲದೆ ಒಂದುಮಾತೂ ಆಡುತ್ತಿರಲಿಲ್ಲ. ಮಾವನವರೊಂದಿಗೆ ಮಾತಾಡುವ ಪದ್ಧತಿಯೇ ಬಂದಿರ ಲಿಲ್ಲ. ಮಾತಾಡುವುದಿರಲಿ ಅವರು ಕುಳಿತಿದ್ದರೆ ಹಜಾರದಲ್ಲಿ ಓಡಾಡಲೇ ಭಯ.

ಪಂಚಾಯ್ತಿ ಮುಗಿಸಿ ಮತ್ತೆ ಸ್ನಾನಮಾಡಿ ಊಟಮಾಡಿ ಮುಗಿಸಿದಾಗ ಆಗಲೆ ಮಧ್ಯಾಹ್ನ ಎರಡು ಘಂಟೆಯಾಗಿತ್ತು. ಸುಮಿತ್ರಳ ಊಟ ಮುಗಿ ಯುವ ಹೊತ್ತಿಗೆ ಹೊತ್ತು ಮೂರೇ ಆಗಿತ್ತು.

ಜೋಯಿಸರು ಹಳ್ಳಿ ಸೇರಿದೊಡನೆ ಜಾತಕದ ನಕಲು ಕಳಿಸಿಕೊಟ್ಟರು. ಮೂವತ್ತೆರಡು ಗುಣ ಸೇರಿದವೆಂದು ಜಾತಕ ನೋಡಿಸಿದ್ದರಲ್ಲಿ ತಿಳಿದುಬಂತು. ತಕ್ಷಣವೇ ಆನಂದರಾಯರು ಶಿವಮೊಗ್ಗೆಗೆ ಕಾಗದ ಬರೆದರು.

ಕಾಗದ ತಲುಪಿದಾಗ ಒಳ್ಳೆ ಪರೀಕ್ಷೆಕಾಲ. ಸುಬ್ಬರಾಯನಿಗೆ ಒಂದೂ ತೋಚಲಿಲ್ಲ. ತಂದೆಯ ಪತ್ರವೆಂದರೆ ಸುಗ್ರೀವಾಜ್ಞೆ ಇದ್ದಹಾಗೆ. ನಹಿ ಎಂದು ಹೇಳುವ ಹಾಗೇ ಇಲ್ಲ. ಧೈರ್ಯ ಅಂದರೆ ಹುಚ್ಚು ಧೈರ್ಯಮಾಡಿ "ಸಧ್ಯಕ್ಕೆ ಮದುವೆ ಬೇಡ ಓದು ಮುಗಿಯಲಿ" ಎಂದು ನಡುಗುವ ಕೈಯಲ್ಲಿ ನಾಲ್ಕು ಸಾಲು ಬರೆದು ಹಾಕೇಬಿಟ್ಟ.

ಕಾಗದವನ್ನು ಕಂಡ ಆನಂದರಾಯರು ಕೆಂಡವಾದರು, ಹಲ್ಲುಕಡಿದರು. "ನನಗೆ ಎದುರಾಡುವಂತಾಯಿತೆ ಈ ಕುನ್ನಿ" ಎಂದು ಆರ್ಭಟಿಸಿದರು. ಅದೇ ಸಂಜೆ ಸಂತೆಗಾಡಿಗಳ ಜೊತೆ ಚೀಟಿ ಕಳಿಸಿ ಗಾಡಿಗಳು ವಾಪಸ್ಸು ಬರುವಾಗ ಜೊತೆಗೇ ಬರಬೇಕೆಂದು ಹೇಳಿ ಕಳಿಸಿದರು.

ಉರಿಯುತ್ತಿದ್ದ ಕಂದೀಲಿನ ಬೆಳಕು ಆನಂದರಾಯರ ಮುಖದ ಮೇಲೆ ಬಿದ್ದಿತ್ತು. ನೆರಿಗೆ ಮೂಡಿದ ಆ ಮುಖದಲ್ಲಿ ಕೋಪ ತುಂಬಿ ದೀಪದ ಬೆಳಕಿನ ಮೇಲೇ ಅದರ ಪ್ರಭಾವ ಬೀರಿದಂತಿತ್ತು. ಕೆಂಗಣ್ಣು ಬೀರಿ ಹುಬ್ಬು ಗಂಟಿಕ್ಕಿ ಸುಬ್ಬರಾಯನನ್ನು ನೋಡುತ್ತಾ

"ನಾಳೆ ಮಾಘದಲ್ಲಿ ನಿನ್ನ ಲಗ್ನ ಸುಬ್ಬು" ಎಂದರು.

ಶಾಂತವಾದ ರಾತ್ರಿಯಲ್ಲಿ ಬರಸಿಡಿಲು ಬಡಿದಂತಾಯ್ತು. ತಲೆ ತಗ್ಗಿಸಿ ನಿಂತ ಸುಬ್ಬು ಒಂದೇಸಮ ನೆಲ ಕೆರೆಯುತ್ತಿದ್ದ, ಬಲಗಾಲ ಹೆಬ್ಬೆರಳಿನಿಂದ. ಮೊದಲೇ ಬೆದರಿದಂತಿದ್ದ ಬಕರನ ಮೇಲೆ ಚೇಳುಬಿಟ್ಟಂತಾಗಿತ್ತು ಸುಬ್ಬ ರಾಯನ ಪರಿಸ್ಥಿತಿ. ಅವನ ಅಭಿಪ್ರಾಯಕ್ಕೆ ಅಲ್ಲಿ ಅವಕಾಶವೇ ಇರಲಿಲ್ಲ. ಎದುರು ಮಾತಾಡುವುದಕ್ಕೇ ಇರಲಿಲ್ಲ. "ಓದಿ ಕಡಿಯೋದೇನು ನೀನು, ಮದುವೆಗೂ ಓದಿಗೂ ಏನು ಸಂಬಂಧ? ನಾವು ಮದುವೆಯಾದಾಗ ಓದಿದ್ದೆ ವೇನು? ಏನೋ ದೊಡ್ಡದಾಗಿ ನಾಲ್ಕು ಸಾಲು ಗೀಚಿಬಿಟ್ಟೆ ಮದುವೆ ಬೇಡ ಸಧ್ಯಕ್ಕೆ ಎಂತಾ" ಎಂದು ಗುಡುಗುಡಿಸಿ ಶಥಪಥ ತಿರುಗಾಡತೊಡಗಿದರು.

ಅವರ ಮಾತಿನಲ್ಲಿ ನಿರ್ಧಾರವಿತ್ತು. ಸುಬ್ಬರಾಯ ತಪ್ಪುಮಾಡಿದ ಮೊರೆ ಹಾಕಿಕೊಂಡು ನಿಂತೇ ಇದ್ದ. ಲಕ್ಷ್ಮಣ ಹೊರಗಡೆ ನಿಂತು ಕಿಟಕಿಯಲ್ಲಿ ನೋಡುತ್ತಿದ್ದ ಸುಮಿತ್ರ ಅಡುಗೆಮನೆ ಬಾಗಿಲ ಹಿಂದಿನಿಂದ ನೋಡುತ್ತಿದ್ದಳು.

"ಜಾತಕ ನೋಡ್ಸಿದ್ದೀನಿ. ನಿನಗೆ ಕೆಟ್ಟದ್ದು ಮಾಡೋಕೇನು ನಾನು ಇದನ್ನು ನಿಷ್ಕರ್ಷೆ ಮಾಡಿರೋದು? ನಿನ್ನ ಪರೀಕ್ಷೆ ಮುಗಿದ ಮೇಲೇ ಮುಹೂರ್ತ ಇಡಿಸೋಣ-ಆಯ್ತೊ" ಎಂದಾಗ—

"ಹೂಂ........" ಎಂದು ಕುರಿಯಂತೆ ತಲೆ ಆಡಿಸದಿದ್ದರೆ ಮತ್ತೊಂದು ಸಿಡಿಲು ಬಡಿಯುವುದು ನಿಜವೆಂದು ಸುಬ್ಬನಿಗೆ ಗೊತ್ತಿತ್ತು. ಹೀಗೇ ತಲೆ ಆಡಿಸಿದಾಗ ರಾಯರ ಕೋಪ ಕೊಂಚ ತಾರಕದಿಂದ ಮಧ್ಯಮಕ್ಕೆ ಇಳಿಯಿತು. "ನಿನಗೆ ಒಳ್ಳೇದಕ್ಕೆ ಹೇಳ್ತಾ ಇದ್ದೀನಿ. ಸುಮ್ಮನೆ ನಾನು ಹೇಳಿದ ಹಾಗೆ ಕೇಳು. ನಿನಗೇನು ಕಡಿಮೆ ವಯಸ್ಸಾಗಿಲ್ಲ. ಈ ಉಗಾದಿಗೆ ಹದಿನೇಳು ತುಂಬಿತು. ಈ ವಯಸ್ಸಿಗೆ ನನಗೆ ಮದುವೆಯಾಗಿ ಎರಡುವರ್ಷವಾಗಿತ್ತು. ಹಿರೆಹಳ್ಳಿ ನಾಗರಾಜ ಜೋಯಿಸರ ಸಂಬಂಧ ಬಂದಾಗ ಬೇಡವೆನ್ನಬಾರದು. ಅವರ ಮಗಳಿಗೆ ಹನ್ನೊಂದು ವರ್ಷಾಂತ ಅಂದರು. ಅಂದರೇ ಹನ್ನೆರಡೇ ಇರಬಹುದು, ನಿನಗೆ ತಕ್ಕ ಹುಡುಗಿ........" ಎಂದರು. ಸುಬ್ಬರಾಯನ ನಾಲಿಗೆ ಸೇದಿಹೋಗಿತ್ತೇನೊ – ಮಹರಾಯ ಉಸುರೇ ಎತ್ತಲಿಲ್ಲ. ಸುಮ್ಮನೆ ನಿಂತಿದ್ದರೇ ಬಚಾವು. ಏನೊಂದು ಅಡ್ಡ ಮಾತಾಡಿದರೂ ಅಪ್ಪನ ಕೋಪ ಮತ್ತೆ ತಾರಕಕ್ಕೇರಿ ತನ್ನ ಪಾಡು ನಾಯಿ ಪಾಡಾಗುವುದೆಂದು ಸುಬ್ಬರಾಯನಿಗೆ ಗೊತ್ತು.

"ಅವಳಿಗ್ವಾಗಲೇ ನಿನಗೊಂದು ಗಂಟುಹಾಕಬೇಕಿತ್ತು" ಎಂದಾಗ ಆನಂದರಾಯರ ಮನಸ್ಸು ಇಲ್ಲವಾದ ಮಡದಿಯತ್ತ ಹರಿಯಿತು. ಈ ಮಾತು ಸುಬ್ಬರಾಯನನ್ನು ಅಳುಕಿಸಿತು.

"ನೀನು ಹೇಳಿದ್ದಕ್ಕೆ ಎಂದು ಎದುರಾಡಿದ್ದೇನಪ್ಪಾ? ಪರೀಕ್ಷೆ ಮುಗಿಯಲಿ ಅಂತ ಅಂದೆ ಅಷ್ಟೆ"

"ಸರಿ, ನೀನು ನಾಳೆಯೇ ಶಿವಮೊಗ್ಗೆಗೆ ಹೊರಡು ನಿನ್ನ ಪರೀಕ್ಷೆಯೋ ಗಿರೀಕ್ಷೆಯೋ ಮುಗಿದಮೇಲೇ ಮುಹೂರ್ತ ಇಡಿಸೋಣ"

"ಹಾಗೇ ಆಗಲಿ" ಎಂದಾಗ ಮುಖದಲ್ಲಿ ದುಃಖ ಹೊರಹೊಮ್ಮುತ್ತಿತ್ತು. ಮರುದಿನ ಮುಂಜಾನೆ ಸುಬ್ಬರಾಯ ಮತ್ತೆ ಶಿವಮೊಗ್ಗೆಗೆ ಹೊರಟು ಹೋದ.

ಮುಂದಿನ ಲಗ್ನ ಮಾಸದಲ್ಲಿ ರಾಜಮ್ಮನನ್ನು ತಂದು ಸುಬ್ಬರಾಯನಿಗೆ ವಿವಾಹ ಮಹೋತ್ಸವ ನಡೆದುಹೋಯಿತು.

೩

ತಂದೆಯ ಬಲವಂತಕ್ಕೆ ರಾಜೀವಿಯನ್ನು ಮದುವೆಯಾಗಿ ಮೂರು ವರ್ಷವಾಗಿತ್ತು. ಮದುವೆಯಲ್ಲಿ ಹನ್ನೆರಡು ವರ್ಷದ ರಾಜೀವಿ ಈಗ ಹದಿನೈದಾದರೂ ದೊಡ್ಡವಳಾಗಿರಲಿಲ್ಲ. ಹದಿನೆಂಟರಲ್ಲಿ ಕಲ್ಯಾಣ ಕಂಡ ಸುಬ್ಬರಾಯನಿಗೆ ಇಪ್ಪತ್ತೊಂದರ ಹರೆಯವಾಗಿತ್ತು. ಮದುವೆಯಾದಾಗ ಮೆಟ್ರಿಕ್ಕಿಗೆ ಕಟ್ಟಿದ್ದ, ತೇರ್ಗಡೆಯಾಗಲಿಲ್ಲ. ಹುಡುಗಿಯ ಕಾಲು ಗುಣ ಎಂದು ಅಣ್ಣ ಲಕ್ಷ್ಮಣ ಗುಣಾಕಾರ ಹಾಕಿದನು. ಮತ್ತೊಂದು ವರ್ಷ ಓದಿದ ಮೇಲೇ ಮುಂದೇನು ಮಾಡಬೇಕೆಂದು ಚಿಂತೆ ತಲೆದೋರಿದ್ದು. ತಂದೆ ತೀರಿಕೊಂಡು ವರ್ಷವಾಗಿತ್ತು. ಸಮಸ್ತ ಆಡಳಿತವೂ ಲಕ್ಷ್ಮಣನ ಕೈಯ್ಯಲ್ಲೇ ಇತ್ತು. ಶಾನುಭೋಗಿ ಅವನೇ ನೋಡುತ್ತಿದ್ದ. ಮುಂದೆ ಓದಬೇಕಾಗಿದ್ದರೆ ಅವನ ನೆರವಿಲ್ಲದೆ ಸಾಧ್ಯವಿರಲಿಲ್ಲ. ತನ್ನ ಪಾಲಿನ ಆಸ್ತಿಯಲ್ಲಿ ಓದಬಹುದಾಗಿದ್ದರೂ ಸಮಸ್ತ ಆಸ್ತಿಯ ಕಾರುಬಾರವೂ ಲಕ್ಷ್ಮಣನೇ ನೋಡುತ್ತಿದ್ದುದರಿಂದ ನೇರವಾಗಿ ನಾನು ಓದಬೇಕು ಎಂದು ಹೇಳಲಾರದ ಸ್ವಭಾವದವ ಸುಬ್ಬರಾಯ. ಅಣ್ಣನೊಡನೆ ಮೊದಲಿಂದಲೂ ಹೆಚ್ಚು ಮಾತಾಡಿದವನಲ್ಲ. ಎಷ್ಟೋ ಅಷ್ಟು.

ಶಿವಮೊಗ್ಗೆಯಲ್ಲಿ ಸುಬ್ಬರಾಯ ಇದ್ದದ್ದು ತಂಗಿಯ ಮನೆಯಲ್ಲಿ. ತ್ರಿಪುರಸುಂದರಿಯ ಗಂಡ ಶ್ರೀಧರಮೂರ್ತಿ ಪೋಸ್ಟಾಫೀಸಿನಲ್ಲಿ ಗುಮಾಸ್ತೆ. ಇಬ್ಬರು ಹೆಣ್ಣುಮಕ್ಕಳೊಡನೆ ಗಂಡ ಹೆಂಡ್ತಿ ಅನ್ಯೋನ್ಯವಾಗಿದ್ದರು. ಮೊದಲ ಬಾಣಂತನ ಆನಂದರಾಯರ ಕಾಲದಲ್ಲಿ ಅದ್ಧೂರಿಯಾಗಿ ನಡೆಯಿತು. ಎರಡನೆ ಮಗು ಹುಟ್ಟುವಹೊತ್ತಿಗೆ ಮಗುವಿನ ಅಜ್ಜನೇ ಇಲ್ಲವಾಗಿದ್ದ. ತ್ರಿಪುರಸುಂದರಿಯ ಅತ್ತೆಯೇ ಬಾಣಂತನ ಮಾಡಿದ್ದಳು. ಸುಬ್ಬರಾಯ ತಂಗಿ ಭಾವನ ಜೊತೆ ಹಾಯಾಗಿದ್ದ. ಭಾವ ಖಯಾಲಿ ಮನುಷ್ಯ. ಅದಿಲ್ಲ ಇದಿಲ್ಲ ದುಡ್ಡು ತಾಪತ್ರಯ ಒಂದನ್ನೂ ಹೇಳಿಕೊಳ್ಳುತ್ತಿರಲಿಲ್ಲ. ಬಂದಿದ್ದರಲ್ಲಿ ಅಚ್ಚುಗಟ್ಟಾಗಿ ನಡೆಸಿಕೊಂಡು ಸಂಸಾರ ಸಾಗಿಸಿದ್ದ. ಅವನ ಖಯಾಲಿ ಎಂದರೆ ಸಂಗೀತದ್ದು. ಸೊಗಸಾದ ಕಂಠವಿತ್ತು. ಶಾಸ್ತ್ರೋಕ್ತ ಅಭ್ಯಾಸವಿಲ್ಲದೆ ಬರೀ ರಾಜಪ್ಪ ಬಿಡಾರಂ ಕೃಷ್ಣಪ್ಪನವರ ಗ್ರಾಮಫೋನ್ ರಿಕಾರ್ಡುಗಳನ್ನು ಅನುಕರಿಸಿಯೂ ಅನೇಕ

ನಾಟಕಗಳನ್ನು ನೋಡಿಯೂ ಸಂಗೀತ ಅಭ್ಯಾಸ ಮಾಡಿದ್ದ. ತನ್ನ ಸಂಗೀತ ಸುಧೆ ಸುಪ್ತಾವಸ್ಥೆಯಿಂದ ಪ್ರಕಾಶವಾಗಿ ಬೆಳಗಲು ಸಾಧನವಿಲ್ಲದೆ ಕೊರಗಿದ್ದ. ಕಡೆಗೆ ದೊಡ್ಡ ಬ್ರಾಹ್ಮಣರ ಕೇರಿಯ ಹಿರಿಯ ಕಿರಿಯರನ್ನೆಲ್ಲಾ ಸೇರಿಸಿ ಲಕ್ಷ್ಮೀನಾರಾಯಣಸ್ವಾಮಿ ಗುಡಿಯಲ್ಲಿ ಭಜನೆ ನಡಸಲು ಒಂದು ಭಕ್ತಮಂಡಲಿ ಮಾಡಿದ. ಪೋಸ್ಟಾಫೀಸು ಮುಗಿಯಿತೆಂದರೆ ಸಂಜೆ ಆರುವರೆ ಏಳರಿಂದ ಎಂಟೂವರೆ ತನಕ ನಿತ್ಯಾ ಭಜನೆ ನೆಡೆಸುತ್ತಿದ್ದ. ಶುಕ್ರವಾರ ಮಾತ್ರ ರಾತ್ರಿ ಹತ್ತಾದರೂ ಆಯಿತು, ಹನ್ನೊಂದಾದರೂ ಆಯಿತು. ಭಕ್ತಾದಿಗಳಿಂದ ಚಂದಾ ವಸೂಲುಮಾಡಿ ಒಂದು ಲೆಗ್ ಹಾರ್ಮೋನಿಯಂ ತರಿಸಿದ್ದ. ಅದರಲ್ಲಿ ಕಾಲು ಬಿಟ್ಟುಕೊಂಡು ಎರಡು ಕೈಯ್ಯಲ್ಲೂ ಮನೆ ಒತ್ತಿ "ಎಲ್ಲಿರುವೆ ತಂದೆ ಬಾರೋ ಮಾರುತಿ" ಎಂದು ಹೇಳುವುದಕ್ಕೆ ಪ್ರಾರಂಭಿಸಿದರೆ ಇಡೀ ಮಂದಿರವೇ ತಲ್ಲಣಿಸಿ ಹೋಗುತ್ತಿತ್ತು. ಸ್ತ್ರೀ ಸಮೂಹವಂತೂ ತ್ರಿಪುರಸುಂದರಿಯನ್ನೇ ದುರುಗುಟ್ಟಿ ಕೊಂಡು ನೋಡುವುದು. ಯಜಮಾನರ ಈ ವಿದ್ವತ್ ವೈಖರಿಗೆ ತ್ರಿಪುರಸುಂದ ರಿಯ ಮುಖದಲ್ಲಿ ಹೆಮ್ಮೆಯ ನಗು ಮೂಡುವುದು.

ಈ ಸಮಾರಂಭಗಳಲ್ಲಿ ಭಾವನಿಗೆ ಬಲಗೈಯಂತೆ ನಿಲ್ಲುತ್ತಿದ್ದ ಸುಬ್ಬ ರಾಯ. ಚಂದಾ ಎತ್ತುವುದರಲ್ಲಿ, ಅಕ್ಕಿ ಬೇಳೆ ಶೇಖರಿಸುವುದರಲ್ಲಿ, ಜಮ ಖಾನೆ ಹಾಸಿ ದೇವರ ಮಂಟಪ, ಫೋಟೋಗಳಿಗೆ ಹೂವಿನ ಹಾರಗಳನ್ನು ಹಾಕಿ ಅಲಂಕರಿಸುವುದರಲ್ಲಿ ಕಳ್ಳೆಹಿಟ್ಟೋ, ಕೋಸಂಬರಿಯೋ, ರಸಾಯನ ವನ್ನೋ ತಂಗಿಯ ಕೈಲಿ ಮಾಡಿಸಿ ದೇವಸ್ಥಾನಕ್ಕೆ ಹೊತ್ತು ತಂದು ಭಕ್ತಾದಿ ಗಳಿಗೆ ಹಂಚುವುದು ಇತ್ಯಾದಿ ಕೆಲಸಗಳಿಗೆ ಸುಬ್ಬರಾಯನಿಲ್ಲದಿದ್ದರೆ ಕೆಲಸವೇ ಸಾಗುತ್ತಿರಲಿಲ್ಲ.

ಶ್ರೀರಾಮನವಮಿ, ನರಸಿಂಹಜಯಂತಿ, ಶಿವರಾತ್ರಿ ಈ ದಿವಸಗಳ ಆಚೆ ಈಚೆ ಎಂಟು ದಿವಸ ಲಕ್ಷ್ಮೀನಾರಾಯಣ ಗುಡಿಯಲ್ಲಿ ಬಿಡುವಿಲ್ಲದ ಕಾರ್ಯ ಕ್ರಮ. ಅಂದಮೇಲೆ ಸುಬ್ಬರಾಯನಿಗೂ ಬಿಡುವಿಲ್ಲದ ಕೆಲಸ ಅಂದ ಹಾಗಾಯಿ ತಲ್ಲವೆ? ಪೋಸ್ಟಾಫೀಸಿನ ಕೆಲಸದಲ್ಲಿ ರಜವೇ ಇರುವುದಿಲ್ಲ. ಅಂಥಾದ್ದರಲ್ಲಿ ಆಧ್ಯಾತ್ಮಿಕ ಪ್ರಕೃತಿಯ ಪೋಸ್ಟ್‌ಮಾಸ್ಟರಿಗೆ ತೀರ್ಥ ಪ್ರಸಾದದ ಸರಬರಾಜು ಮಾಡಿ ನಿವೃತ್ತರಾಗಲಿದ್ದ ಆ ಅಂಚೆ ಕಚೇರಿಯ ಮುಖ್ಯಾಧಿಕಾರಿಗಳು, ಲಕ್ಷ್ಮೀ

ನರಸಿಂಹಸ್ವಾಮಿ ಸೇವೆ ಮಾಡುವ ಅವಕಾಶ ತಮಗಿಲ್ಲದಿದ್ದರೂ, ಅದರಲ್ಲಿ ನಿರತನಾಗಿದ್ದ ಶ್ರೀಧರಮೂರ್ತಿಗೆ ಸೇವೆ ಮಾಡುವ ಅವಕಾಶ ಕಲ್ಪಿಸಿಕೊಟ್ಟರೆ, ತಮಗೂ ಸ್ವಲ್ಪ ಪುಣ್ಯ ಬಂದೀತೆಂಬ ಸಾತ್ವಿಕಭಾವದಿಂದ ಅವನಿಗೆ ನಿಯಮಿತ ಕಾಲಕ್ಕಿಂತ ಮುಂಚೆಯೇ ಹೋಗುವ ಸೌಕರ್ಯ ಕಲ್ಪಿಸಿದ್ದರು. ಮುದು ಕಪ್ಪನ ಈ ವರ್ತನೆ ಇತರ ಕ್ಲಾರ್ಕುಗಳ ಕಣ್ಣು ಕೆಂಪಗೆ ಮಾಡಿತ್ತು. ಶ್ರೀಧರ ಮೂರ್ತಿ ಮಹಾ ಕಿಲಾಡಿ. ಅವರೆಲ್ಲರಿಗೂ ಶ್ರೀ ಲಕ್ಷ್ಮೀನಾರಾಯಣಸ್ವಾಮಿಯ ಕೃಪೆ ಪ್ರಾಪ್ತವಾಗುವಂತೆ ಪ್ರಸಾದ ತಂದು ಕೊಡುತ್ತಿದ್ದ. ಮೇಲಾಗಿ ಯಾರಿಗೂ ಕೆಡಕನ್ನು ಬಯಸದ ತಾನಾಯಿತು, ತನ್ನ ಕೆಲಸವಾಯಿತೆಂದು ಸದಾ ನಗುನಗುತಲಿದ್ದ ಶ್ರೀಧರಮೂರ್ತಿ ಎಲ್ಲರಲ್ಲೂ ವಿಶ್ವಾಸಗಳಿಸಿದ್ದ. ತಂಟೆ ತಕರಾರಿಲ್ಲದೆ ದೇವರ ಸೇವೆ ನಡೆಯುತ್ತಿದ್ದುದು ಇಡೀ ದೊಡ್ಡ ಬ್ರಾಹ್ಮಣರ ಕೇರಿಯನ್ನೇ ಹುರಿದುಂಬಿಸಿ, ದೊಡ್ಡಪೇಟೆ ದುರ್ಗಿ ಗುಡಿಗಳಿಂದ ಕೂಡ ಭಕ್ತಾದಿಗಳನ್ನು ಆಕರ್ಷಿಸುತ್ತಿತ್ತು. ಇಂತಹ ಸ್ತುತ್ಯ ಕಾರ್ಯಕ್ಕೆ ಸಹಜವಾಗಿ ಶಹಬ್ಬಾಶ್ ಗಿರಿಯು ಶ್ರೀಧರಮೂರ್ತಿಗೂ ಭಾವಮೈದ ಸುಬ್ಬರಾಯನಿಗೂ ಸಲ್ಲುತ್ತಿತ್ತು.

ಈ ದೇವಕಾರ್ಯದಲ್ಲಿ ನಿರತನಾಗಿದ್ದಾಗಲೇ ಸುಬ್ಬರಾಯನಿಗೆ ಮೊದಲು ಸುಶೀಲೆಯ ಪರಿಚಯವಾದದ್ದು. ಮಹಿಳಾ ಭಕ್ತರಿಗೆ ಪ್ರಸಾದ ವಿನಿಯೋಗ ಸಂದರ್ಭದಲ್ಲಿ, ಮಹಿಳೆಯರ ಪರವಾಗಿ ಈ ಹದಿನೇಳರ ಹರೆಯದ ಸುಶೀಲೆ ಮುಂದೆ ಬಂದು ಮುತ್ತೈದೆಯರಿಗೆ ಅರಿಶಿನ ಕುಂಕುಮ ರಸಾಯನಗಳನ್ನು ಹಂಚುತ್ತಿದ್ದಳು. ಗಂಡಸರ ಕಡೆ ಸುಬ್ಬರಾಯನ ಕೈವಾಡ. ತಯಾರು ಮಾಡುವ ಹಿಂಬದಿಯ ಕೋಣೆಯಲ್ಲಿ ಈ ಪ್ರಸಾದವಿನಿಯೋಗ ಸಮಯಕ್ಕೆ ಸುಶೀಲೆ ಅಡ್ಡಸೆರಗು ಕಟ್ಟಿಕೊಂಡು ಕೈಮಾಡಿದರೆ ಸುಬ್ಬರಾಯ ಉತ್ಸಾಹದಿಂದ ಪ್ರಸಾದದ ಡಬರಿಯನ್ನು ಅವಳ ಕೈಗೆ ಕೊಡುತ್ತಿದ್ದ. ತುಂಬುಗಣ್ಣನ್ನು ಹಾಯಿಸಿ ಸುಬ್ಬಣ್ಣನನ್ನು ನೋಡಿದಾಗ ಇಂತಹ ದೃಷ್ಟಿಗೆ ಹೊಸಬನಾದ ಸುಬ್ಬ ರಾಯ ತತ್ತರಿಸಿ ಹೋಗುತ್ತಿದ್ದ. ಸದ್ಗೃಹಸ್ಥರ ಸತ್ಸಂಪ್ರದಾಯದ ವಾತಾ ವರಣದಲ್ಲಿ ಬೆಳೆದ ಸುಬ್ಬರಾಯನಿಗೆ ಇದೆಲ್ಲಾ ಸರಿಯಲ್ಲ ಎಂದು ತೋರುವುದು. ಮೇಲಾಗಿ ಮದುವೆಯಾದ ತಾನು ಬೇರೊಬ್ಬ ಹೆಣ್ಣನ್ನು ಈ ತೆರನಾಗಿ ನೋಡು ವುದು ಕೈಹಿಡಿದವಳಿಗೆ ದ್ರೋಹ ಬಗೆದಂತಾಗುವುದೆಂಬ ಭಾವನೆಯಿಂದ ಸುಶೀ

ಲಳ ಕರೆಯುವ ನೋಟವನ್ನು ಆಹ್ವಾನಿಸಿದ ದೃಷ್ಟಿಯಲ್ಲಿ ಸಂದರ್ಶಿಸುವ ಸಾಹಸಕ್ಕೆ ಹೋಗಿರಲಿಲ್ಲ. ಇಂತಹ ದೇವರ ಸನ್ನಿಧಿಯಲ್ಲಿ ಹೀಗೆ ಮಾಡುವುದು ಪಾಪಕರವೆಂದು ಸುಬ್ಬರಾಯನ ಒಳಮನಸ್ಸು ಹೇಳುತ್ತಿತ್ತು.

ಸುಶೀಲೆಗೆ ಸುಬ್ಬರಾಯನನ್ನು ಏನಾದರೂ ನೆಪಮಾಡಿಕೊಂಡು ಮಾತನಾಡಿಸಬೇಕು, ಇಬ್ಬರೂ ಹೆಚ್ಚುಹೊತ್ತು ಒಬ್ಬರನ್ನೊಬ್ಬರು ನೋಡುತ್ತಿರಬೇಕೆನ್ನುವ ಬಯಕೆ. ಸುಬ್ಬರಾಯ ಈ ಭಜನೆ ಏರ್ಪಾಟಿನಲ್ಲಿ ಓಡಾಡುತ್ತಿದ್ದನೆಂದೇ ತಾನೂ ಈ ಕೆಲಸದಲ್ಲಿ ಮುಂದೆ ಬಂದು ಸಹಾಯದ ಸೋಗು ಹಾಕಿದಳು. ತನ್ನರಿವಿಲ್ಲದೇ ಅವಳು ಅವನ ಸಾಮಿಪ್ಯ ಬಯಸತೊಡಗಿದ್ದಳು.

ಅಂದು ಸುಶೀಲೆ ಸುಬ್ಬರಾಯನನ್ನು ಕಂಡದ್ದು ತುಂಗಾನದಿಯ ದಡದಲ್ಲಿ. ಸಣ್ಣ ಮಳಲು ತಿಕ್ಕಿ ಉಪುಗಾರಣೆ ತೊಳೆಯುತ್ತಾ ಕುಳಿತಾಗ ಸುಬ್ಬರಾಯ ಅನತಿ ದೂರದಲ್ಲೇ ಹರವಾದ ಪುಷ್ಟನಾಂದ ದೇಹದಾರ್ಢ್ಯವನ್ನು ಹೊರಸೂಸುವ ಹೊಳೆಯುವ ಮೈಯಿಂದ ನೀರು ತೊಟ್ಟಿಕ್ಕುತ್ತಿರುವಂತೆ ಈಸು ಮುಗಿಸಿ ಬದಿಯ ಬಂಡೆಯ ಮೇಲೆ ನಿಂತಿದ್ದ. ಆ ನಿಲುವು, ಆ ಪುಷ್ಟ ಮೈಕಟ್ಟು, ಸೊಗಸಾದ ಈಜುಗಾರಿಕೆ ಕಂಡ ಸುಶೀಲ ಒಂದು ಕ್ಷಣ ದಿಟ್ಟಿಸಿ ನೋಡಿ ಮೈಯ್ಯಲ್ಲಿ ಮಿಂಚು ಸರಿದ ಅನುಭವವಾಗಿ ನಾಚಿ ಗಲ್ಲಗಳೆರಡೂ ಗುಲಾಬಿ ರಂಗಾಗಿತ್ತು. ಸುಶೀಲೆ ಅಲ್ಲಿದ್ದದ್ದು ಸುಬ್ಬರಾಯ ನೋಡಿದ್ದನೋ ಇಲ್ಲವೊ–ಆಕೆಯನ್ನು ಕಂಡಕೂಡಲೇ ಮತ್ತೆ ನೀರಿಗೆ ಧುಮುಕಿ ಬಂಡೆಯ ಆಚೆಕಡೆಗೆ ಹೋದ. ಯಾವ ಮುಹೂರ್ತದಲ್ಲಿ ಈ ಸಂದರ್ಶನವಾಯಿತೋ ಆಗಿನಿಂದ ಸುಶೀಲೆಗೆ ಸುಬ್ಬರಾಯನನ್ನು ಕಂಡರೆ ಅವನನ್ನು ಹಾಗೇ ನೋಡುತ್ತಿರಬೇಕೆನ್ನುವ ಹಂಬಲ ಹತ್ತಿತು. ಗುಡಿಯಲ್ಲಿ ಇವನ ಓಡಾಟ, ಮಾತು ಚಟುವಟಿಕೆಗಳು ಮತ್ತಷ್ಟು ಇವಳನ್ನು ಆತನ ಬಳಿ ಸೆಳೆಯುವಂತಾಯಿತು.

ಸುಬ್ಬರಾಯನ ಸ್ಥಿತಿ ಬೆಂಕಿಯ ಬದಿಗಿಟ್ಟ ಬೆಣ್ಣೆಯಂತಾಯಿತು. ತನ್ನರಿವಿಲ್ಲದಂತೆಯೇ ಕರಗಿಹೋಗುತ್ತಿದ್ದ.

ಬೆಣ್ಣೆ ಹೀಗೆ ಕರಗುತ್ತಿರಲಿಲ್ಲ. ಆ ವರ್ಷದ ಹೊಳೆ ತುಂಬಿ ಬಂದದ್ದೆಂದರೆ ತುಂಗಾನದಿ ದೊಡ್ಡ ಬ್ರಾಹ್ಮಣರ ಕೇರಿಯ ನದಿಯ ಬದಿಯ ಮನೆಯ ಹಿತ್ತಲಕಡೆಗೇ ಬಟ್ಟೆ ಒಗೆಯುವ ಸೌಕರ್ಯ ಒದಗಿತ್ತು. ಹಳೆಯ ಮನೆಗಳು ತುಂಗಾದೇವಿಯ ಕೃಪೆಯಿಂದ ಮುಕ್ತಿ ಕಂಡವು. ಅನೇಕರ ಮನೆ ಹಿತ್ತ

ಲಲ್ಲಿಂದ ದಾಟಿ ನೀರು ಬಚ್ಚಲಮನೆ ಸೇರಿತ್ತು. ಮೇಲುಗಡೆಯಿಂದ ನಾಟಾಗಳು ಜಾನುವಾರು ಮರಮುಟ್ಟು ತೇಲಿಬಂದದ್ದು ಲೆಕ್ಕವಿಲ್ಲ. ಹುತ್ತದಲ್ಲಿ ನೀರು ಹೊಕ್ಕಮೇಲೆ ಹಾವುಗಳೂ ತೇಲಿ ಬರಬೇಕಷ್ಟೆ. ಅನೇಕ ಮಂದಿಗೆ ನೀರುಹಾವು ಮನೆ ಸೇರದಂತೆ ಕಾಯುವುದೇ ಕೆಲಸವಾಗಿತ್ತು.

ತುಂಬು ಹೊಳೆಯನ್ನು ಜಿದ್ದಿನಮೇಲೆ ಈಜಿ ದಾಟುವುದು ಪ್ರತಿ ವರ್ಷ ಹೊಳೆ ತುಂಬಿ ಬಂದಾಗಲೂ ಊರ ಉತ್ಸಾಹಿ ಯುವಕರಲ್ಲಿ ನಡೆದುಬಂದ ಪದ್ಧತಿ. ಸುಬ್ಬರಾಯ ಈಜುವುದರಲ್ಲಿ ಹೆಸರುಮಾಡಿದ್ದ. ಅದರಲ್ಲೂ ಓದಲು ಶಾಲೆಯಿಲ್ಲ, ಮಾಡಲು ಕೆಲಸವಿಲ್ಲವೆಂದು ಒಂದು ವರ್ಷ ಕಳೆಯುವಾಗ ಬರೀ ಈಜುವುದರಲ್ಲೇ ಕಾಲ ಕಳೆದಿದ್ದ. ತುಂಗಾನದಿಯಲ್ಲಿ ಹಾಯಾಗಿ ಬಿದ್ದುಕೊಂಡನೆಂದರೆ ಹೊತ್ತು ಹನ್ನೆರಡಾದರೂ ಮನೆಗೆ ಬರುವ ಯೋಚನೆಯೇ ಇರುತ್ತಿರಲಿಲ್ಲ. ಲಕ್ಷ್ಮಣ ಓದುವುದಕ್ಕೆ ಇಲ್ಲ–ಹೌದು ಹೇಳದೆ ಸುಮ್ಮನಿದ್ದುದೂ ಮಾವನವರು ಯಾವುದಾದರೂ ಕೆಲಸ ನೋಡಿದರೆ ಉತ್ತಮವೆಂದು ಸೂಚಿಸಿದ್ದೂ–ಮುಂದೇನು ಮಾಡುವುದು ಎಂಬ ಅತ್ತ ಇತ್ತ ಮನಹರಿಬಿಟ್ಟು ತೂಗಾಡುವಾಗ ನದಿಯ ನೀರೇ ಸುಬ್ಬರಾಯನಿಗೆ ನೆಮ್ಮದಿ ಕೊಡುತ್ತಿತ್ತು. ಭಾವ ಶ್ರೀಧರಮೂರ್ತಿ, ತಂಗಿ ತ್ರಿಪುರಸುಂದರಿಯರು ಎಷ್ಟು ಬೇಡವೆಂದರೂ ಕೇಳದೆ ಮುಂಜಾವಿಂದ ಮಧ್ಯಾಹ್ನದವರೆಗೆ ನದಿಯಲ್ಲಿ ಈಜುವುದೇ ಅವನ ಕೆಲಸವಾಗಿಬಿಟ್ಟಿತ್ತು.

ಬಟ್ಟೆ ಒಗೆಯಲು–ಸ್ನಾನ ಮಾಡಲು ಬಂದ ಅನೇಕ ಜನ ಕೆಲವುವೇಳೆ ಜಾರಿಬಿದ್ದು ತೇಲಿಹೋದುದೂ ಉಂಟು. ಅವತ್ತು ಮಾಮೂಲಿನ ಜಾಗದಲ್ಲಿ ಸುಶೀಲೆ ಬಟ್ಟೆ ಒಗೆಯುತ್ತಿದ್ದಳು. ಕೊಂಚ ದೂರದಲ್ಲೇ ಸುಬ್ಬರಾಯ ನೀರಿನಲ್ಲಿ ಸರ್ಕಸ್‌ಮಾಡಿ ಜೊತೆಯಲ್ಲಿ ನೀರಿಗಿಳಿದ ಸ್ನೇಹಿತ ವೆಂಕಟೇಶನನ್ನು ಕೀಟಲೆಮಾಡಿ ಗೋಳುಹುಯ್ಯುತ್ತಿದ್ದ. ಇವರ ಆಟವನ್ನು ನೋಡಿ ಸುಶೀಲೆ ಒಳಗೇ ನಗುತ್ತಿದ್ದಳು. ಇದ್ದಕ್ಕಿದ್ದಂತೆ ಹೊಳೆಯಲ್ಲಿ ನೀರು ಹೊಚ್ಚಿತು. ಕಲ್ಲಿನಮೇಲಿಟ್ಟ ಬಟ್ಟೆಗಳನ್ನು ಎತ್ತಿಕೊಂಡು ದಡಕ್ಕೆ ಧಾವಿಸುವ ಭಾರದಲ್ಲಿ ಕಾಲು ಜಾರಿತು. ಚೇತರಸಿಕೊಂಡು ಹಿಂಡಲು ಅರ್ಧ ನೀರಲ್ಲಿ ನೆನಸಿದ ಸೀರೆ ಕೈಜಾರಿ ನದಿಯಲ್ಲಿ ಹರಿದುಹೋಯಿತು. ಅವಚಿಕೊಂಡ ಬಟ್ಟೆಗಳನ್ನು ಮೇಲಿನ ಮೆಟ್ಟಲಿಗೆ ಎಸೆದು ಬಾಗಿ ಎರಡು ಮೆಟ್ಟಲು ಇಳಿದಾಗ ಮತ್ತಷ್ಟು ನೀರು ಏರಿ

ಬಂತು–ಅಷ್ಟೆ ನೆನಪು ಅವಳಿಗೆ. ಸೀರೆಯನ್ನ್ನರಿಸಿ ಹೊರಟಾಕೆ ಪ್ರವಾಹದಲ್ಲಿ ತೇಲಿಹೋದಳು. "ಅಯ್ಯೋ" ಎಂದು ಅಕ್ಕಪಕ್ಕದ ಹೆಂಗಸರು ಚೀರಿದರು. "ತೇಲಿಹೋಯಿತು–ಆ ಹುಡುಗೀ" ಎಂದು ಬೊಟ್ಟುಮಾಡಿ ಸಿಳ್ಳು ಹೊಡೆದಂತೆ ಕೂಗಿದಳು ಹೆಂಗಸೊಬ್ಬಳು.

ಭೋರ್ಗರೆದು ಹರಿವ ವಾಹಿನಿಯಲ್ಲಿ ತೇಲಿಹೋದಳು ಸುಶೀಲ. ವಾರು ಗೈ ಹಾಕಿ ಮೀನಿನಂತೆ ಚಿಮ್ಮಿ ಬೆನ್ನಟ್ಟಿಹೋದ ಸುಬ್ಬರಾಯ. ಯಾವುದೋ ಶಕ್ತಿ ಅವನ ಕೈಗಳಿಗೆ ನೂರ್ಮಡಿ ಶಕ್ತಿ ತುಂಬಿಸಿತ್ತು. ಸ್ನೇಹಿತರಿಬ್ಬರೂ ಕೊಂಚದೂರ ಈಜಿಹೋಗಿ ಪ್ರವಾಹಕ್ಕೆ ಹೆದರಿ ಹಿಂದುಳಿದರು. ಹಟದಿಂದ ಸಾಗಿದ್ದ ಸುಬ್ಬರಾಯ. ನದಿಯ ಪಾತ್ರ ವಿಸ್ತಾರವಾದ ಕಡೆ ಕೊಂಚ ನಿಧಾನ ವಾಗಿ ಹರಿಯುತ್ತಿತ್ತು. ಕರಿಯ ಸೀರೆಯನ್ನೇ ಹಿಂಬಾಲಿಸಿ ಕಡೆಗೊಮ್ಮೆ ಯಾವುದೋ ಮೆತ್ತನೆಯ ವಸ್ತು ಕೈಗೆ ಸಿಕ್ಕಿತು. ಅದು ಸುಶೀಲೆಯ ಕಾಲು. ಅತಿ ಪ್ರಯಾಸದಿಂದ ಅವಳನ್ನು ಎಳೆದುಕೊಂಡು ನೀರು ಕಡಿಮೆಯಾದ ದಡದ ಬದಿಗೆ ಬಂದ. ಸೊಂಟದ ಮಟ್ಟಕ್ಕೆ ನೀರು ಬಂದಾಗ ಅವಳನ್ನೆತ್ತಿ ಹೆಗಲ ಮೇಲೆ ಹಾಕಿಕೊಂಡು ದಡದತ್ತ ಸಾಗಿದ. ನೀರು ಕುಡಿದು ನಿಶ್ಚೇತಳಾದ ಸುಶೀಲೆಗೆ ಪ್ರಜ್ಞೆ ತಪ್ಪಿತ್ತು. ಇನ್ನೂ ಮುಂದೆ ಬಂದು ಎರಡು ಕೈಯ್ಯಲ್ಲೂ ಅವಳನ್ನು ಎತ್ತಿಕೊಂಡು ಬಂದ.

ಕಾಲ್ಗಿಚ್ಚಿಗೆ ಸಿಕ್ಕ ಹುಲ್ಲೆ, ಮರಿಯನ್ನು ಕಾಯ್ದಂತಿತ್ತು. ಒದ್ದೆಯಾದ ಅವಳ ಬಟ್ಟೆ ಮೈಗೆ ಅಂಟಿಕೊಂಡಿದ್ದು ಗಟ್ಟಿಯಾಗಿ ಎತ್ತಿ ತರುವಾಗ ಸುಬ್ಬ ರಾಯನಿಗೆ ಮೈಯ್ಯಲ್ಲಿ ಕಾವು ಹುಟ್ಟಿದಂತಾಯಿತು. ದಡದಲ್ಲಿ ಆಗಲೇ ಜನ ಸೇರಿದ್ದರು. ಸುಶೀಲಳ ತಾಯಿ ಅಳುತ್ತಾ ನಿಂತಿದ್ದಳು. ಇಡೀ ದೊಡ್ಡ ಬ್ರಾಹ್ಮಣರ ಕೇರಿಗೇ ಹರಡಿದ ಈ ಸುದ್ದಿ ಕೇಳಿ ತ್ರಿಪುರಾಂಬ, ಶ್ರೀಧರಮೂರ್ತಿ ಕೂಡ ಬಂದು ನಿಂತಿದ್ದರು. ಸಂಪಿಗೆ ಬಣ್ಣದ ಗಲ್ಲದ ಮೇಲೆ ಅಸ್ತವ್ಯಸ್ತವಾಗಿ ಹರಡಿದ ಕರಿಯ ಕೂದಲು, ತುಂಬುಗಣ್ಣು ಅರೆಮುಚ್ಚಿತ್ತು. ಅತಿ ಪ್ರಯಾಸ ದಿಂದ ಉಸಿರಾಡುವ ಮೂಗು, ಉಸಿರೆಳತಕ್ಕೆ ಉಬ್ಬಿ ಇಳಿಯುವ ದಂತದಲ್ಲಿ ಕಡೆದ ಕಳಶಕ್ಕೆ, ಒದ್ದೆಬಟ್ಟೆ ಮುಚ್ಚಿದಂತಹ ಎದೆ ಸುಬ್ಬರಾಯನ ಎದೆಗೆ ಒರ ಗಿದ್ದು ಅವನಲ್ಲಿ ವಿಚಿತ್ರ ಅನುಭವವನ್ನುಂಟುಮಾಡಿತು.

ಮೆಲ್ಲಗೆ ಹೂವಿನ ಮಾಲೆಯನ್ನಿಳಿಸುವಂತೆ ದಡದ ಮೇಲಿಳಿಸಿದ. ಅವ ರಮ್ಮ ''ಅಯ್ಯೊ ಅಮ್ಮಯ್ಯ ಮಾತಾಡೇ'' ಎಂದು ಒಂದೇಸಮ ಚೀರಿದಳು. ಬೊರಲು ಮಲಗಿಸಿ ಹೊಟ್ಟೆಗೆ ಸೇರಿದ ನೀರನ್ನು ಅಮುಕಿ ತೆಗೆದಮೇಲೆ ಸುಶೀಲ ಕೊಂಚ ಚೇತರಿಸಿಕೊಂಡಳು. ಮುತ್ತಿದ ಜನರನ್ನು ಸರಿಸಿ ದೂರ ಮಾಡಿ, ಇಬ್ಬರು ಎತ್ತಿಕೊಂಡು ಅವರ ಮನೆಗೆ ಸಾಗಿಸಿದರು. ಜೊತೆಗೆ ಸುಬ್ಬ ರಾಯ, ತ್ರಿಪುರಸುಂದರಿ, ಶ್ರೀಧರಮೂರ್ತಿ, ವೆಂಕಟೇಶರೂ ಹೋದರು. ಯಾರ ಬಾಯಲ್ಲಿ ನೋಡಿದರೂ ಸುಬ್ಬರಾಯನ ಸಾಹಸದ, ಜೀವ ಉಳಿಸಿದ ಕಥೆಯೇ ಆಗಿತ್ತು. ನಿಜಕ್ಕೂ ಸುಬ್ಬರಾಯನಿಗೆ ತನ್ನ ಸಾಮರ್ಥ್ಯದ ಬಗ್ಗೆ ತನಗೇ ಆಶ್ಚರ್ಯವಾಗಿತ್ತು.

ಸುಶೀಲೆಯ ತಾಯಿ ತಟ್ಟೆಯಲ್ಲಿ ಬಿಸಿ ಬೂದಿಯನ್ನೂ ತಂದಳು. ಅಂಗೈ ಅಂಗಾಲು ಎದೆಗೆ ತಿಕ್ಕಿದಾಗ ಸುಶೀಲೆಗೆ ಪೂರ್ಣ ಎಚ್ಚರವಾಯಿತು. ಕೃತ ಜ್ಞತೆ ತುಂಬಿದ ಬೊಗಸೆಗಣ್ಣಲ್ಲಿ ಸುಬ್ಬರಾಯನನ್ನು ನೋಡಿದ್ದು, ತನ್ನ ತಾಯಿ ಸುಬ್ಬರಾಯನಿಗೆ ''ನಮ್ಮ ಪಾಲಿನ ದೇವರು ನೀವು ಕಣಪ್ಪ–ನನ್ನ ಮಗ ಳನ್ನು ಉಳಿಸಿದಿರಿ. ನಿಮ್ಮ ಉಪಕಾರ ಏನು ಕೊಟ್ಟರೂ ತೀರದು'' ಎಂದು ಹೇಳಿದಾಗ. ತನ್ನನ್ನು ಉಳಿಸಿದ್ದಕ್ಕೆ ತನ್ನನ್ನೇ ಆತನಿಗೆ ಅರ್ಪಿಸಬೇಕೆಂದು ಆಕೆ ನಿರ್ಧರಿಸಿದ್ದು ಈ ಮುಹೂರ್ತದಲ್ಲೆ.

ಈ ಸಂಗತಿ ನಡೆದಂದಿನಿಂದ ಸುಶೀಲೆಯ ತಾಯಿಗೂ ತ್ರಿಪುರಸುಂದರಿಗೂ ಪರಿಚಯ ಹೆಚ್ಚಿತು. ಕೆಲವು ದಿನಗಳಲ್ಲೆ ಮತ್ತೆ ಹುಲ್ಲೆಯಂತೆ ಆದಳು ಸುಶೀಲ. ಅವಳೂ ಶ್ರೀಧರಮೂರ್ತಿಯ ಮನೆಗೆ ಬಂದು ಹೋಗುವುದಕ್ಕೆ ತೊಡಗಿದಳು.

ಒಂದುದಿನ ಹೀಗೆ ಸುಶೀಲೆ, ಅವಳ ತಾಯಿ ರಂಗಮ್ಮ, ತ್ರಿಪುರಸುಂದರಿ ಮಧ್ಯಾಹ್ನ ನಡುಮನೆಯಲ್ಲಿ ಊಟದೆಲೆ ಹಚ್ಚುತ್ತಾ ಕುಳಿತಿದ್ದರು. ಮುಂದಿನ ಕೊಠಡಿಯಲ್ಲಿ ಸುಬ್ಬರಾಯ ಮಲಗಿದ್ದ. "ತಿಪ್ಪಕ್ಕಾ" ಎಂದು ಕೂಗಿ ಒಳಕ್ಕೆ ಬಂದರು. ಬಂದವರು ತಿಪ್ಪಾ ಜೋಯಿಸರು. ಅಮ್ಮೇನಹಳ್ಳಿಯಿಂದ ಬಂದಿ ದ್ದರು. ತ್ರಿಪುರ ಸುಂದರಿಯನ್ನು ತಿಪ್ಪಕ್ಕನೆಂದೇ ಅವರು ಕೂಗುತ್ತಿದ್ದುದು.

"ಬಾ ತಿಪ್ಪಯ್ಯ ಮಾವಾ"

"ಬಂದೆನಲ್ಲಾ. ಎಲ್ಲಿ ಸುಬ್ಬಣ್ಣ, ಶ್ರೀಧರ ಯಾರೂ ಇಲ್ಲವೇ ?"

"ಇವರು ಆಫೀಸಿಗೆ ಹೋಗಿದ್ದಾರೆ–ಸುಬ್ಬರಾಯ ಮುಂದಿನ ರೂಮಲ್ಲಿ ಮಲಗಿದ್ದಾನೆ"

ಎಂದೆನ್ನುವಂತೆಯೇ ಕಣ್ಣುಜ್ಜಿಕೊಂಡು ಸುಬ್ಬರಾಯನೇ ಬಂದ.

"ಕೂತ್ಕೊಳ್ಳಿ ತಿಪ್ಪಯ್ಯನೋರೆ"

"ಏನಪ್ಪಾ, ಆರಾಮು ಕೆಲಸ ಬಿಡು. ಓದೋದೂ ಬಿಟ್ಟೆ. ತಂಗಿ ಮನೆ ಊಟ, ಗಡದ್ದು ನಿದ್ರೆ ಅಷ್ಟೇಂತ ಕಾಣುತ್ತೆ"

"ಇನ್ನೇನುಮಾಡ್ಲಿ ತಿಪ್ಪಣ್ಣ ?"

"ನಿಮ್ಮಣ್ಣನಿಗೆ ಹೇಳಿದೆ–ಮುಂದೆ ಓದಿಸೋ ಅಂತ. ಅವನು ನೂರು ತಾಪತ್ರಯ ಹೇಳ್ತಾನೆ"

"ಅದೇನು ಈಗ ಬಂದದ್ದು...."

"ಸಂತೆಗೆ ಬರೋ ಮಾಮೂಲು ; ಜೊತೆಗೆ–ನಂದಿನ್ನೇನು ಕೆಲಸ ನಿನಗೆ ಗೊತ್ತಿಲ್ಲವೆ ? ದುರ್ಗಿ ಗುಡೀಲಿ ಒಬ್ಬರು ಜಾತಕ ಕೊಡ್ತೀನಿಂತ ಅಂದಿದ್ರು. ಯಾರಿಗೇಂತಿಯ–ನಮ್ಮ ರಾಮುಹಳ್ಳಿ ರಾಜನ ಮಗಳು ಇಂದಿರೇಂತ ನೋಡಿಲ್ಲಿಲ್ವೆ ?"

"ಇಂದಿರೆ ಇನ್ನೂ ಚಿಕ್ಕೋಳಲ್ಲವೆ ?"

"ಚಿಕ್ಕದೇನೋ, ಆಗಲೆ ಹದಿಮೂರು ವರ್ಷ"

ಎಂದು ಗೋಡೆಬದಿಗೆ ತ್ರಿಪುರಸುಂದರಿ ತಂದು ಹಾಸಿದ ಚಾಪೆಯ ಮೇಲೆ ಕೂಡುತ್ತಾ ಹೇಳಿದರು. ರಂಗಮ್ಮ, ಸುಶೀಲರನ್ನು ತೀಕ್ಷ್ಣವಾಗಿ ನೋಡಿದರು. ಯಾರಿವರು ಎನ್ನುವ ಭಾವದ ಅವರ ಮುಖವನ್ನು ನೋಡಿದ ತ್ರಿಪುರಸುಂದರಿ, ತಿಪ್ಪಯ್ಯನವರಿಗೆ ಸುಶೀಲೆ ನದಿಯಲ್ಲಿ ಬಿದ್ದದ್ದನ್ನೂ ಸುಬ್ಬರಾಯ ಸಾಹಸದಿಂದ ಅವಳನ್ನು ಕಾಪಾಡಿದ ಕಥೆಯನ್ನು ವಿಸ್ತಾರವಾಗಿ ಹೇಳಿದಳು.

ತ್ರಿಪುರಸುಂದರಿ ಕಥೆ ಹೇಳುವಾಗ ಸುಬ್ಬರಾಯ ನಾಚಿದ ಮುದ್ದೆಯಂತೆ ಕುಳಿತ. ಸೌಂದರ್ಯಮೂರ್ತಿ ಸುಶೀಲೆಯನ್ನು ನಾಟಿದ ದೃಷ್ಟಿಯಿಂದ ನೋಡುತ್ತಿದ್ದ.

ಚಿಕ್ಕದೇನು, ಅದಕ್ಕೆ ಆಗಲೇ ಹದಿಮೂರು ವರ್ಷ ಎಂದಾಗ, ರಂಗಮ್ಮನಿಗೆ ಮಗಳ ಚಿಂತೆ. ಹಿಂದೆ ಒಂದುಸಲ ತಿಪ್ಪಯ್ಯನ ವಿಚಾರ ತ್ರಿಪುರಸುಂದ

ರಿಯು ರಂಗಮ್ಮನಿಗೆ ಹೇಳಿದ್ದಳು. ಬೆಳೆದು ನಿಂತ ಸುಶೀಲಳಿಗೂ ಒಂದು ವರ ಗೊತ್ತುಮಾಡಿಕೊಡಲು ಯಾತಕ್ಕೆ ಇವರನ್ನು ಕೇಳಬಾರದು ? ಎಂದು ಆಕೆಗೆನ್ನಿಸಿತು. ಸುಬ್ಬರಾಯ, ತಿಪ್ಪಯ್ಯನವರು ಊರಿನ ವಿಚಾರ ಮಾತಾಡುತ್ತಿದ್ದುದರಿಂದ ತನ್ನ ಮಗಳ ವಿಷಯ ಒಂದೇಬಾರಿ ಸೂಚಿಸಲು ರಂಗಮ್ಮ ಸಮಯಕ್ಕಾಗಿ ಕಾದಿದ್ದಳು. ತಿಪ್ಪಯ್ಯನಿಗೆ ಒಂದಲ್ಲ ಒಂದು ಮದುವೆಯ ಚಿಂತೆ; ರಂಗಮ್ಮನಿಗೆ ಸುಶೀಲೆಯ ಮದುವೆಯ ಚಿಂತೆ; ಸುಶೀಲೆಗೆ ಸುಬ್ಬರಾಯನ ಚಿಂತೆ; ಸುಬ್ಬರಾಯನಿಗೆ ಸುಶೀಲೆಯ ಹಾವಭಾವ ವಿಲಾಸ ವೈಖರಿಯ ಕಣ್ಣ ನೋಟದ ಕಾವಿನಿಂದಾಗಿ, ರಾಜೀವಿಯನ್ನು ಎಂದು ಸೇರೇನು, ಅವಳು ಬಂದರೆ ಈ ಅಡಿಕತ್ತರಿಯಲ್ಲಿ ಸಿಕ್ಕಂತಾದ ತನ್ನ ಅಸಹಾಯಬೇಗುದಿ ತೊಲಗೀತೆಂಬ ಚಿಂತೆ.

"ಇನ್ನೂ ಶ್ರೀಧರಮೂರ್ತಿ ಸಂಜೆಗೇ ಬರುವುದೇನೊ ?"

"ಹೌದು"

"ಅವನು ಯಾವುದೋ ಒಂದು ಹುಡುಗ ತನ್ನ ಆಫೀಸಿನಲ್ಲೆ ಇದ್ದನೆಂದು ಹೇಳುತ್ತಿದ್ದ"

"ತಿಪ್ಪಯ್ಯಾ, ನಿನಗೆ ಸದಾ ಈ ಮದುವೆ ಮಾಡಿಸುವುದೇ ಕಸುಬಾಯಿತಲ್ಲಾ !"

"ಇಲ್ನೋಡು ಸುಬ್ಬು, ನಿಮ್ಮ ತಂದೆಗೆ ಪಟ್ಟಾಭಿರಾಮನ ಉತ್ಸವ ನಡೆಸುವುದರಲ್ಲಿ ಎಷ್ಟು ಆಸಕ್ತಿ, ಭಕ್ತಿ ಇತ್ತು ಬಲ್ಲೆಯಾ ? ಅದೇಕೆ, ಶ್ರೀಧರಮೂರ್ತಿನ್ನೆ ನೋಡು ; ಅವನಿಗೆ ಶ್ರೀ ಲಕ್ಷ್ಮಿನರಸಿಂಹಸ್ವಾಮಿ ಗುಡಿಯ ಭಜನೆಯಲ್ಲಿರೋ ಆಸಕ್ತಿ ಮನೆ ಮೇಲಿದೆಯೆ ?"

"ಅದೆಲ್ಲ ನನಗೆ ಗೊತ್ತು–ಹುಡುಗರಿಗೆ ಬಟ್ಟೆ ಇಲ್ಲದಿದ್ದರೂ ವಿಚಾರಿಸೋಲ್ಲ, ಸದಾ ಅದರಲ್ಲೇ ಇರ್ತಾರೆ" ಎಂದಳು ತ್ರಿಪುರಸುಂದರಿ.

"ನಾನು ಅದನ್ನೇ ಹೇಳೋಕೆ ಬಂದೆ. ಅವರಿಗೆಲ್ಲಾ ದೇವರ ಕಾರ್ಯದಲ್ಲಿ ಆಸಕ್ತಿ ಇದ್ದಹಾಗೆ ಈ ಮದುವೆ ಹೊಂದಿಸಿ ಹತ್ತು ಸಂಸಾರ ಸುಖವಾಗಿ ಸಂತೋಷದಿಂದ ಇದ್ದಾರೆಂದರೆ ನನಗೆ ಅದೇ ಒಂದು ಸಂತೋಷ. ಒಂದು ಮದುವೆ ನಿಶ್ಚಯವಾದಾಗ ನನಗೆ ಸಾಕ್ಷಾತ್ಕಾರವಾದ ಅನುಭವ

ವಾಗುತ್ತೆ. ಎರಡು ಜೀವ ಅನ್ಯೋನ್ಯವಾಗಿ ಬಾಳ್ವೆ ಮಾಡಿಕೊಂಡಿವೆ ಎಂದರೆ ಸಾಲದೆ ?"

ಎಂದು ಹೇಳಿದಾಗ ತಿಪ್ಪಯ್ಯನ ಬಗ್ಗೆ ಸುಬ್ಬರಾಯನಿಗೆ ಹೆಮ್ಮೆ ಎನಿಸಿತು. ಇದೇ ಸಂದರ್ಭವನ್ನುಪಯೋಗಿಸಿಕೊಂಡು ರಂಗಮ್ಮ ತನ್ನ ಮಗಳ ವಿಷಯ ಮುಂದೆ ಮಾಡಿದಳು.

"ನಮ್ಮ ಸುಶೀಲಳಿಗೊಂದು ವರ ಹುಡುಕಿ ಕೊಡುವುದು ಸಾಧ್ಯವೆ ?"

"ವರಗಳಿಗೆ ಕನ್ಯೆ, ಕನ್ಯೆಗೆ ವರ ಹುಡುಕುವುದೇ ಜೀವನದ ಧ್ಯೇಯ ಅನ್ನೋವನಿಗೆ ನಿಮ್ಮ ಸುಶೀಲೆಗೆ ವರ ಸಿಕ್ಕುವುದು ಕಷ್ಟವೆ ? ಅದರಲ್ಲೂ ಕಣ್ಣು ಮೂಗು ನೇರವಾಗಿರೋ ಈ ಹುಡುಗಿಗೆ ಒಳ್ಳೆ ಸಂಬಂಧ ನಾನು ಹೊಂದಿಸಿ ಕೊಡ್ತೇನೆ"

"ಅಷ್ಟು ಮಾಡಿರಪ್ಪ. ಸಾಯುತ್ತಿದ್ದ ಮಗೂನ್ನ ಸುಬ್ಬರಾಯರು ಬದುಕಿಸಿ ಮಗಳಿಗೆ ಪುನರ್ಜನ್ಮ ಕೊಟ್ಟರು. ಅವಳಿಗೆ ಒಂದು ಗಂಡು ಹುಡುಕಿ ಕೊಟ್ಟು ನನ್ನ ಕಣ್ಣುಮುಂದೆ ಗಂಡನ ಮನೆ ಸೇರಿದರೆ ನನಗೆ ನೆಮ್ಮದಿ"

ಎಂದಾಗ ಅವಳ ಅಸಹಾಯ ಪರಿಸ್ಥಿತಿಯ ಅರಿವು ತಿಪ್ಪಯ್ಯನಿಗಾಯಿತು. ಹೆಣ್ಣು ಜೀವ ನೊಂದು ಕಣ್ಣೀರು ಮಿಡಿಯಿತು.

"ಯಾವ ಪೈಕಿ ಅನ್ನೋದು ಗೊತ್ತಾಗಲಿಲ್ಲ. ಗೋತ್ರ...."

"ಕರ್ನಾಟಕರು. ಭಾರದ್ವಾಜ ಗೋತ್ರ"

"ಹಾಗೇನು, ಹಾಗಾದರೆ ವರ ತಯಾರಾಗೇ ಇದೆ"

"ತಿಪ್ಪಯ್ಯ, ನಿನ್ನ ಕಡತದಲ್ಲಿ ಯಾವ ವರವಿಲ್ಲ ?" ಎಂದ ಸುಬ್ಬರಾಯ.

"ತ್ರಿಪುರಸುಂದರಿಗೆ–ಶ್ರೀಧರಮೂರ್ತಿ, ನಮ್ಮ ಸುಬ್ಬರಾಯನಿಗೆ–ರಾಜಮ್ಮನ್ನ ಕೂಡಿಸಿದವರ್‍ಯಾರೂಂತ...." ಎಂದು ತನ್ನ ಮದುವೆ ಕೂಡಿಸುವ ಕೆಲಸದ ಬಗ್ಗೆ ಹೆಮ್ಮೆಯಿಂದ ಮಾತಾಡಿದ ತಿಪ್ಪಯ್ಯ.

'ನಮ್ಮ ಸುಬ್ಬರಾಯನಿಗೆ–ರಾಜಮ್ಮನ್ನ' ಎಂದಾಗ ಸುಶೀಲೆಯ ತಲೆಯ ಮೇಲೆ ಒಮ್ಮೆಲೇ ಸಿಡಿಲೆರಗಿದಂತಾಯಿತು. ತಾನು ಸುಬ್ಬರಾಯನ ಆಶೆ ಬಿಡಬೇಕು, ಆತನಿಗಾಗಲೇ ಮದುವೆಯಾಗಿದೆ ಎಂಬ ಕಲ್ಪನೆಯೊಡನೆ ಮಹತ್ತರ ವೇದನೆಗೆ ಅವಳು ಸಿಲುಕಿದಂತಾಯ್ತು. ತನ್ನ ಆರಾಧ್ಯಮೂರ್ತಿಯ

ಆರಾಧನೆಗೆ ಆಗಲೆ ಹೂಮಾಲೆ ಹಾಕಿದ ಹೆಣ್ಣೊಂದು ಕಾದು ಕುಳಿತಿದೆ ಎಂದಾಗ ಅವರ್ಣನೀಯ ವ್ಯಥೆ ಅವಳನ್ನು ಮುತ್ತಿ ಕಾಡತೊಡಗಿತು. ಆ ತುಂಬು ಗಣ್ಣಲ್ಲಿ ನೀರು ಪೂರೆಯಂತೆ ಹರಡಿಕೊಂಡಿತು. ತಲೆ ತಗ್ಗಿಸಿಕೊಂಡು 'ಬಂದೆ' ಎಂದು ಉದ್ವಿಗ್ನಳಾಗಿ ಎರಡು ಶಬ್ದ ಉಚ್ಛರಿಸಿ ಸರಸರನೆ ಮನೆಗೆ ಹೊರಟು ಹೋದಳು.

ಮನೆಗೆ ಹೋದವಳು ಹಾಸಿಗೆಗೆ ಮುಖವಿಟ್ಟು ಬಿಕ್ಕಿ ಬಿಕ್ಕಿ ತನ್ನ ಪ್ರೀತಿಯ ಕನಸನ್ನು ಕಳೆದುಕೊಂಡ ಮಗುವಿನಂತೆ ಅತ್ತಳು. ಸುಬ್ಬರಾಯ ತನ್ನನ್ನು ಏಕೆ ಉಳಿಸಬೇಕಿತ್ತು? ಈ ವೇದನೆಗಿಂತ ಸಾವನ್ನಪ್ಪುವುದೇ ಬಹು ಹಿತವಾಗಿತ್ತೆಂದು ಹಲುಬಿದಳು.

ಇತ್ತ ಶ್ರೀಧರಮೂರ್ತಿಯ ಮನೆಯಲ್ಲಿ ತಿಪ್ಪಯ್ಯ ಹೇಳಿದ ಹೊನ್ನಾಳಿಯ ಜನಾರ್ಧನಯ್ಯನ ಜಾತಕ ಮತ್ತು ಸುಶೀಲೆಯ ಜಾತಕವನ್ನು ನೋಡಿಸಬೇಕೆಂದು ನಿರ್ಧಾರಕ್ಕೆ ಬಂದಿತ್ತು. ದೈನ್ಯವಾಗಿ ರಂಗಮ್ಮ ಹೇಳಿದಳು—

"ನಾನು ಬಡವಿ. ನನ್ನ ಭಾಗ್ಯವೆಂದರೆ ಬೆಳೆದ ಮಗಳು, ಮುಂಬರುವ ಅಳಿಯ. ವರದಕ್ಷಿಣೆ, ವರೋಪಚಾರ ಕೊಡುವ ಚೈತನ್ಯ ದೇವರು ಕೊಡಲಿಲ್ಲ. ನಾನು ಯಾವ ಪಾಪ ಮಾಡಿದ್ದೆನೋ ಸುಶೀಲಳು ಎಂಟು ವರ್ಷದವಳಿದ್ದಾಗ ಇವರು ತೀರಿಕೊಂಡರು"

"ಅಯ್ಯೋ ಪಾಪ! ನಿಮ್ಮ ಯಜಮಾನರು ಎಲ್ಲಿದ್ದರಮ್ಮ?"

"ಅವರ ಹಟದ ಸ್ವಭಾವವೇ ನನ್ನ ಈ ಗತಿಗೆ ಕಾರಣವಾಯಿತು ಎಂದೆನ್ನಬಹುದು. ದೊಡ್ಡ ಹೋಟಲಿಟ್ಟು ಭಂಡಿ ಭಂಡಿ ಹಣ ಸಂಪಾದಿಸಬೇಕೆಂಬ ಹಂಬಲವಿದ್ದಿದ್ದರೂ ಅವರು ಮಾಡುತ್ತಿದ್ದುದು ಹೋಟಲುಗಳಲ್ಲಿ ದೋಸೆ ಹಿಟ್ಟು ರುಬ್ಬುವುದು. ಸಾಗರದವರು ಅವರು. ಅವರ ಹಿರಿಯರು ಅನುಕೂಲವಾಗೇ ಇದ್ದರಂತೆ. ಇವರ ಅಣ್ಣ ಅಡಿಕೆ ವ್ಯಾಪಾರ ಮಾಡುವ ನೆಪದಲ್ಲಿ ಇದ್ದ ತೋಟ ಗದ್ದೆ ಮನೆಮಠಗಳನ್ನು ಮಾರಿ ಅವರೂ ಹಾಳಾಗಿ ತಮ್ಮನ ಕೈಗೆ ಚಿಪ್ಪು ಕೊಟ್ಟರು"

"ವ್ಯಾಪಾರದಲ್ಲಿ ವಿಪರೀತ ನಷ್ಟವಾಗಿರಬೇಕು"

"ವ್ಯಾಪಾರದಲ್ಲಿ ಯಾವಾಗಲೂ ನಷ್ಟವಾಗೋಲ್ಲ. ಸರಿಯಾಗಿ ಮಾಡುವುದುಬಿಟ್ಟು—ಬರೀ ಆಡಂಬರ, ವಿಪರೀತ ಮಿತವಿಲ್ಲದ ವ್ಯಯ, ಮತ್ತೆ ಮೇಲೆ

ಇಸ್ಪೀಟಿನ ಚಟ, ಜೊತೆಗೆ ದುಷ್ಟ ಸಹವಾಸದಿಂದ ಹೆಂಗಸರ ವ್ಯಾಮೋಹಕ್ಕೊಳಗಾದವರಿಗೆ ಕೊಪ್ಪರಿಗೆ ಹಣವಿದ್ದರೂ ಕರಗಿಸುವುದು ಕಷ್ಟವೆ ?"

"ನಿಮ್ಮ ಯಜಮಾನರು ಗಲಾಟೆಮಾಡಿ ತಡೆಯಲು ಸಾಧ್ಯವಾಗಲಿಲ್ಲವೆ ?"

ಅವರಿನ್ನೂ ತುಂಬಾ ಚಿಕ್ಕವರಿದ್ದರಂತೆ ಆಗ. ಹುಲಿಯಂತೆ ಮೇಲೆ ಬಿದ್ದು ಅರಿಯದ ತಮ್ಮನನ್ನು ಹೊಡೆದು ಬೈಯ್ಯುವುದೇ ಅಣ್ಣನ ಕೆಲಸವೆಂದು ತಿಳಿದವರಿಗೆ ಏನು ಹೇಳುವುದು ? ವ್ಯವಹಾರ ತಿಳಿಯದು. ತಿಳಿಯದು ಎಂದು ಹೇಳಿದರೆ ಕೋಪ. ಹೀಗಾಗಿ ಇದ್ದಬದ್ದ ಆಸ್ತಿಯನ್ನೆಲ್ಲಾ ಕಳೆದು ಮನೆಯನ್ನು ಭೋಗ್ಯಕ್ಕೆ ಹಾಕಿ ಬರಿಗೈ ಮಾಡಿಕೊಂಡು ಕೊರಗಿದರು. ಅವರ ಪುಣ್ಯವೇ ಇರಬೇಕು, ಇದ್ದಷ್ಟು ದಿನವೂ ಮನಸಾಯಿಚ್ಛೆ ಇದ್ದು ಮುದಿತಾಯಿ-ಹೆಂಡತಿ ತಮ್ಮನನ್ನು ಬಿಟ್ಟು ಯಾವುದೋ ನಲವತ್ನಾಲ್ಕು ದಿನದ ಜ್ವರವಂತೆ, ಆದರಿಂದ ನರಳಿ ಎರಡು ತಿಂಗಳಲ್ಲಿ ಇಲ್ಲವಾದರು"

"ಥೆ ಥೆ ಥೆ, ಎಂತಹ ಮನುಷ್ಯ....ಆಮೇಲೆ ತಾಯಿ, ಹೆಂಡತಿಗತಿ ?"

ಹೆಂಡತಿ ಬನವಾಸಿಯವರು. ತೌರುಮನೆ ಸೇರಿದರು. ತಾಯಿ ವಿಧವೆ, ಹದಿನಾಲ್ಕು ವರ್ಷದ ಹುಡುಗನೊಡನೆ ತಮ್ಮನಿದ್ದ ಈ ಊರಿಗೆ ಬಂದರು. ತಮ್ಮನ ಹೆಂಡತಿ ಸಾಕ್ಷಾತ್ ಚಂಡಿದೇವಿ. ಇವರ ತಾಯಿಯನ್ನೂ ಇವರನ್ನೂ ಒಂದೆರಡು ದಿನದಲ್ಲೇ ಕಿರುಕುಳ ಕೊಟ್ಟು ಹೊರಗಟ್ಟಿದಳು. ಇವರು ತಾಯಿ-ಮಗ ಚಿಕ್ಕದೊಂದು ಕೊಠಡಿಯಲ್ಲಿ ಇದೇ ಚಿಕ್ಕ ಬ್ರಾಹ್ಮಣರ ಕೇರಿಯಲ್ಲಿ ಇರತೊಡಗಿದರು. ಅವರಿವರ ಮನೆಯಲ್ಲಿ ಮನೆಗೆಲಸ ಮಾಡಿಕೊಂಡು ಜೀವನ ನಡೆಸುವಂತಾಯ್ತು"

"ಅಯ್ಯೋ ಪಾಪ-ಹೂಂ ಆಮೇಲೆ!"

"ಕಷ್ಟವನ್ನೇ ಕಂಡರಿಯದೆ ಗಂಡನೊಡನೆ ಅನೇಕ ವರ್ಷ ಸುಖವಾಗಿದ್ದವಳು ಮುಪ್ಪಿನಕಾಲಕ್ಕೆ ಮಕ್ಕಳಕಾಲಕ್ಕೆ ಭಿಕ್ಷೆ ಬೇಡುವ ಪರಿಸ್ಥಿತಿ ಬಂದೊದಗಿತು"

"ಬಹಳ ಕಷ್ಟಪಟ್ಟಿರಬೇಕು ನಿಮ್ಮತ್ತೆ"

"ಕೇಳ್ತೀರಾ? ದೇವರೇ ಈ ಹಾಳು ಮಕ್ಕಳನ್ಯಾಕೆ ಕೊಟ್ಟೆ ಎಂದು ಅಂದದ್ದೂ ಉಂಟು. ಇವರು ಓದಬೇಕೆಂದು ಬಹಳ ಪ್ರಯತ್ನಪಟ್ಟರು; ಆಗಲಿಲ್ಲ. ಕಡೆಗೆ ಹೋಟಲು ಮಂಜಯ್ಯನವರಲ್ಲಿ ಸೇರಿದರು"

"ತ್ಸೊ ತ್ಸೊ....ಪಾಪ"

"ನಮ್ಮವರು ಅಲ್ಲಿಗೆ ಸೇರಿದಾಗ ಹದಿನಾಲ್ಕು ವರ್ಷದ ಹುಡುಗರು; ಒಳ್ಳೆಯ ಸ್ಫುರದ್ರೂಪಿಗಳು; ಚಟುವಟಿಕೆಯಾದ ಈ ಹುಡುಗನನ್ನು ಹೋಟಲು ಕೆಲಸದಲ್ಲಿ ತರಬೇತು ಮಾಡಲು ತಿಂಡಿ ಸರಬರಾಜಿನಿಂದ ಹಿಟ್ಟು ರುಬ್ಬುವ ವರೆಗೆ ಮಂಜಯ್ಯನವರು ಕಲಿಸಿದರು. ಪುಷ್ಟವಾದ ಮೈಯ್ಯನ್ನು ಹೊಂದಿದ ಇವರಿಗೆ ವರ್ಷಗಳುರುಳಿ ಹದಿನೆಂಟು ಹತ್ತೊಂಭತ್ತರ ಹರಯಕ್ಕೆ ಬಂದಾಗ ಬರೀ ದೋಸೆ ಹಿಟ್ಟು ರುಬ್ಬುವುದೇ ಖಾಯಂ ಕೆಲಸವಾಗಿತ್ತು. ಮೈತುಂಬಾ ಕೆಲಸ–ಹೊಟ್ಟೆ ತುಂಬಾ ಹಿಟ್ಟು. ಕೇಳಬೇಕೆ? ಮಗ ಸುಂದರವಾಗಿ ಬೆಳೆದು ನಿಂತು ತನಗೂ ದುಡಿದು ಹಾಕುತ್ತಿದ್ದುದು ತಾಯಿಗೆ ಮರಣಕಾಲಕ್ಕೆ ನೆಮ್ಮದಿ ತಂದುಕೊಟ್ಟಿತು. ಆದರೂ ಯಜಮಾನರ ಕಾಲದಲ್ಲಿದ್ದ ಅಂತಸ್ತಿಗೂ ಈಗಿನ ತಮ್ಮ ಪರಿಸ್ಥಿತಿಗೂ ಹೋಲಿಸಿಕೊಂಡು ನಿಟ್ಟುಸಿರು ಬಿಡುವರು"

"ಅಲ್ವೆ ಪಾಪ. ಕಷ್ಟಾಂತ ಅಂದರೆ ಹೀಗೆ ಈ ಪಾಟಿ ಬೆನ್ನು ಹತ್ತಿದರೆ ಏನು ಮಾಡುತ್ತಾರೆ?"

"ಅದೇ ಹೋಟಲಿನಲ್ಲಿ ಸಿಹಿ ತಿಂಡಿ ಮಾಡುವುದು, ದೋಸೆ ಹೊಯ್ಯುವ ಕೆಲಸಕ್ಕಿದ್ದ ನಮ್ಮ ತಂದೆಗೆ ಈ ಹುಡುಗನ ಮೇಲೆ ದೃಷ್ಟಿಬಿತ್ತು. ನನ್ನನ್ನು ತೋರಿಸಿದರು. ತಾಯಿಯನ್ನು ಕೇಳಬೇಕೆಂದರು. ಅತ್ತೆಯವರೂ ಒಪ್ಪಿದರು. ಒಂದೇ ದಿನದ ಮದುವೆ ನಡೆದುಹೋಯಿತು. ಅತ್ತೆಯ ಮನೆಗೆ ಬಂದಾಗ ನನಗೆ ಹದಿನಾರು ವರ್ಷ. ಅತ್ತೆಯವರು ಬಹಳ ಪ್ರೀತಿಯಿಂದ ನೋಡಿ ಕೊಂಡರು. ಅದಕ್ಕೆ ಮತ್ತೊಂದು ಕಾರಣ, ನಮ್ಮ ತಂದೆಯವರಿಗೆ ಬರ ಬೇಕಾದ ಕೊಂಚ ಹಣ ಬಂದು ಅಳಿಯ ಮಾವ ಸೇರಿ ದೊಡ್ಡಪೇಟೆಯಲ್ಲಿ ಒಂದು ಸ್ವಂತ ಹೋಟಲು ತೆರೆದರು. ನಮ್ಮವರು ಕಷ್ಟಪಟ್ಟು ದುಡಿದರು. ಹಣವೂ ಸೇರುತ್ತಾ ಬಂತು. ಹೀಗೆ ಐದು ವರ್ಷದ ದಿನ ಸುಖವಾಗೇ ಇದ್ದೆವು. ನಮ್ಮವರು ನನ್ನನ್ನು ಬಹಳ ಪ್ರೀತಿಯಿಂದ ನೋಡುತ್ತಿದ್ದರು. ಮನೆಗೆ ಬಂದ ಎರಡನೇ ವರ್ಷವೇ ಸುಶೀಲೆಯನ್ನು ಹೆತ್ತು ಅವರ ಕೈಗಿತ್ತೆ.

ಅತ್ತೆಯವರು ಆ ಮಗುವನ್ನು ಅದೆಷ್ಟು ಮುದ್ದಾಡಿದರೋ....ಸುಶೀಲೆ ಮಗು ವಾಗಿದ್ದಾಗ ಬಹಳ ಮುದ್ದಾಗಿದ್ದಳು''

"ಈಗೇನಾಗಿದ್ದಾಳೆ ರಂಗಮ್ಮ? ಅವಳ ಲಗ್ನವೇನಾದರೂ ಕುದುರಿದರೆ ನಿಜವಾಗಿ ಜನಾರ್ಧನಯ್ಯ ಪುಣ್ಯಶಾಲಿಯೇ!"

''ಆದರೆ ಮಗುವಿಗೆ ಎರಡು ವರ್ಷವಾದಾಗ ಅತ್ತೆ ತೀರಿಕೊಂಡರು. ಹೋಟಲಿನಲ್ಲಿ ಸುಮಾರಾಗಿ ನಫೆ ಬಂದಾಗ ನನಗೆರಡು ಜೊತೆ ಬಳೆ, ಮಗು ವಿಗೆ ಗುಂಡು, ಪಾಟ್ಲೆ ಬಿಂದಿ, ಮುಂದಲೆಸರ ಮಾಡಿಸಿದರು. ಕೊಂಚ ದೊಡ್ಡ ಮನೆ ಮಾಡಿದರು. 'ಕಷ್ಟಪಟ್ಟರೆ ದೇವರು ಸುಖ ಕೊಟ್ಟೇ ಕೊಡುವನು ಕಣೇ' ಎಂದು ಈಗಲೂ ಕಿವಿಯಲ್ಲಿ ಹೇಳಿದಹಾಗಿದೆ.....ದೇವರಿಗೆ ನಮ್ಮ ಕುಟುಂಬದ ಸೌಖ್ಯ ಮನಸ್ಸಿಗೆ ಬರಲಿಲ್ಲ''

''ಹೂಂ-ಮತ್ತೆ ಕಷ್ಟದ ದಿನಗಳು ಪ್ರಾರಂಭವಾಗಿರಬೇಕಲ್ಲವೆ?''

''ಕಷ್ಟಾಂದರೆ ಅಂತಿಂಥ ಕಷ್ಟವಲ್ಲ. ನಮ್ಮವರ ಹಟ ಹೇಳತೀರದು, ಹುಚ್ಚು ಹಟ. ಇಡಿ ಊರಿಗೇ ಪ್ಲೇಗು ಬಂದು ಊರ ಹೊರಗೆ ಕ್ಯಾಂಪು ಹಾಕಿರುವಾಗ ಇನ್ನೂ ಹೋಟಲಲ್ಲೇ ದುಡಿತೇನೆ ಅಂದರೆ ಹೇಗೆ? ಅವತ್ತು ಮುಂಜಾನೆ ದೋಸೆ ಹಿಟ್ಟನ್ನು ಕೈ ಆಡಿಸುವಾಗ ಏನೋ ತಡೆದಂತಾಯಿತಂತೆ. ಕೈಹಾಕಿ ತೆಗೆದಾಗ ಒಂದು ದೊಡ್ಡ ಇಲಿ ಅದರಲ್ಲಿ ಮುಳುಗಿ ಸತ್ತಿತ್ತು. ಅದರ ಬಾಲಾ ಹಿಡಿದು ಹೊರಕ್ಕೆಸದು, ಧೈರ್ಯವಾಗಿ ದೋಸೆ ಹಿಟ್ಟಲ್ಲಿ ದೋಸೆ ಮಾಡಿ ಮಾರೇಬಿಟ್ಟರು. ಮಾರನೇ ದಿನವೇ ಜ್ವರ ಬಂತು. ಗೆಜ್ಜೆಯಲ್ಲಿ ಗಡ್ಡೆ ಕಾಣಿಸಿಕೊಂಡಿತು. ಕೆಂಡದಂತೆ ಕಾದ ಕೈಯ್ಯಲ್ಲಿ ನನ್ನ ಕೈಹಿಡಿದರು, ಅಳುತ್ತಾ ಸುಶೀಲ ಪಕ್ಕದಲ್ಲೇ ನಿಂತಿತ್ತು.

"ರಂಗೂ ನನ್ನ ದುಡಿಮೆಯ ಆಸೆ ಈ ಮಟ್ಟ ಮುಟ್ಟಬಾರದಾಗಿತ್ತು.... ಅನ್ಯಾಯ ಮಾಡಿದೆ, ನಿನಗೆ ಅನ್ಯಾಯ ಮಾಡಿದೆ''

''ಅಯ್ಯೋ ಅಳಬೇಡಿ. ಏನೂ ಆಗಿಲ್ಲ ಅಂಥಾದ್ದೇನೂ ಬಂದಿಲ್ಲ. ದೇವರ ದಯದಿಂದ ವಾಸಿಯಾಗುತ್ತೆ''

"ಅದೆಂಥ ದೇವರು ರಂಗೂ—ನಮ್ಮಮ್ಮ ಪಟ್ಟ ಕಷ್ಟ, ನಾನು ಪಟ್ಟ ಕಷ್ಟ, ನಿಯತ್ತಿನ ದುಡಿಮೆ—ಎಲ್ಲದರ ಫಲ ನಿಮ್ಮನ್ನು ಬೇವರ್ಸಿಗಳಂತೆ ಮಾಡಿಹೋಗುವುದೇ ಆಯಿತೆ? ಹೂಂ, ಎಲ್ಲೀ ದೇವರು, ಎಲ್ಲೀ ದಿಂಡರು?''

"ಬೇಡಿ ಹಾಗನ್ನಬೇಡಿ. ದೇವರನ್ನ ನಂಬಿದವರು ಕೆಟ್ಟಿಲ್ಲ. ನಮ್ಮ ಕರ್ಮದ ಫಲಕ್ಕೆ ದೇವರಿಂಗೆ ಬೈದರಾಯಿತೆ ?"

"ಸುಶೀಲೆ ಗಂಡು ಆಗಿದ್ದರೆ ನಿಶ್ಚಿಂತೆಯಾಗಿ ಸಾಯುತ್ತಿದ್ದೆ. ನಮ್ಮ ಅಮ್ಮನಿಗಾದ ಗತಿಯೇ ನಿನಗೂ ಆಯಿತೆಂದು ಚಿಂತೆ. ಅದು ಯಾವ ಶಾಪ ನಮ್ಮ ವಂಶ ಕಾಡುತ್ತಿದೆಯೊ ತಾಯಂದಿರೆಲ್ಲಾ ಚಿಕ್ಕ ಮಕ್ಕಳೊಡನೆ ದಿಕ್ಕಿಲ್ಲ ದಂತೆ, ನಡುನೀರಿನಲ್ಲಿ ಕೈಬಿಟ್ಟವರ ಗತಿಯೇ ಆಯಿತಲ್ಲಾ ರಂಗೂ"

"ಹೀಗೆ ನೀವು ಅನ್ನಬೇಡಿ........"

—ಎಂದು ನನ್ನಿಂದ ಮುಂದೆ ಮಾತೇ ಹೊರಡಲಿಲ್ಲ. ಕಣ್ಣಲ್ಲಿ ನೀರು ಸುರಿಸುವುದೇ ಕೆಲಸವಾಯಿತು. ಅರ್ಧಂಬರ್ಧ ಬಿಟ್ಟ ಊರು. ಈ ಮನೆ ಯಲ್ಲಿ ಪ್ಲೇಗಿನ ಕೇಸು ಇದ್ದಮೇಲೆ ನೆರೆಹೊರೆಯವರೂ ಬರಲು ಅಂಜುವರು. ಡಾಕ್ಟರಿಗಂತೂ ವಿಧಿಯಿಲ್ಲ, ಬರುತ್ತಿದ್ದರು. ಅವರ ಬಳಿ ಹೆಚ್ಚು ಇರಬಾರ ದೆಂದು ಸೂಚಿಸಿದ್ದರು. ನಾನು ಕಂಗೆಟ್ಟುಹೋಗಿ ಕಡೆಗಾಲದಲ್ಲೂ ಅವರ ಸೇವೆ ಮಾಡಲು ನಿರ್ಬಂಧ ಬಂದಿತಲ್ಲಾ ಎಂದು ಚಿಂತಿಸಿಗೆ. ಸುಶೀಲೆ ಯೊಬ್ಬಳು ಇಲ್ಲದಿದ್ದರೆ ನನಗೂ ಈ ಪ್ಲೇಗು ಯಾಕೆ ಬರಬಾರದು ಎಂದು ಅಂದುಕೊಂಡೆ. ಈ ಹೊತ್ತಿಗಾಗಲೆ ನಮ್ಮ ತಂದೆ, ತಾಯಿ ತೀರಿಕೊಂಡಿದ್ದರು. ಇದ್ದ ಅಣ್ಣ ಹೋಟಲು ನಡೆಸುತ್ತಿದ್ದ. ಅವನಿಗೂ ನಮ್ಮ ಮನೆಯವರಿಗೂ ಹಣಕಾಸಿನ ವಿಚಾರದಲ್ಲಿ ಕೊಂಚ ಮನಸ್ತಾಪ ಬಂದಿತ್ತು. ಗೆಜ್ಜೆಯಲ್ಲಿನ ಗಡ್ಡೆಯ ಜೊತೆಗೆ ಮತ್ತೊಂದು ಗಡ್ಡೆ ಕಾಣಿಸಿಕೊಂಡಿತು. ರಾತ್ರಿ ಒಂದು ಘಂಟೆ ಯಲ್ಲಿ ವಿಪರೀತ ಸಂಕಟಪಡತೊಡಗಿದರು. ಹೊರಗೆ ಕಗ್ಗತ್ತಲು. ಚಿಕ್ಕ ಲಾಂದ್ರದ ಬೆಳಕಿನಲ್ಲಿ ನಿಸ್ತೇಜರಾಗಿ ನರಳುವ ಇವರನ್ನು ಕಂಡು ನನ್ನ ಎದೆ ಯೊಡೆದು ಬಂತು. ನಮ್ಮ ಮನೆಯ ಮೇಲೆ ಮೂರನೆ ಮನೆಯಿಂದ "ಅಯ್ಯಯ್ಯೋೀ" ಎಂದು ಕೆಟ್ಟ ಧ್ವನಿಯಲ್ಲಿ ಅಳು ನಿಶ್ಶಬ್ದ ರಾತ್ರಿಯನ್ನು ಬೇಧಿಸಿಕೊಂಡು ಬಂತು. ನಮ್ಮವರು ಬೆಚ್ಚಿದರು. ಕೊಂಚ ನೀರು ಕೇಳಿ ದರು. "ರಂಗೂ" ಎಂದಾಗ ನನ್ನ ನರನರಗಳೇ ಕಿತ್ತು ಬಂದಂತಾಯ್ತು. ಆ ಎರಡು ಶಬ್ದದಲ್ಲಿ ನಮ್ಮನ್ನು ಅನಾಥರನ್ನಾಗಿ ಮಾಡಿಹೋಗುವ ಅಸಹಾಯ ಆರ್ತತೆ ತುಂಬಿ ಕತ್ತಿನ ಸೆರೆಗಳು ಉಬ್ಬಿ ಕಣ್ಣಿಂದ ನೀರು ಧಾರೆಧಾರೆಯಾಗಿ ಹರಿಯಿತು. ಮೂರನೆ ಮನೆಯಲ್ಲೂ ಒಂದು ಪ್ಲೇಗಿನ ಹೆಣದ ಮೇಲೆ ಬಿದ್ದು

ಬಿದ್ದು ಅಳುತ್ತಿದ್ದರು. ಶಾಂತವಾಗಿ ಮಲಗಿದವರನ್ನು ದಿಟ್ಟಿಸಿ ನೋಡಿದೆ. ಸುಧಾರಿಸಿ ಕೊಳ್ಳಲ್ಲೆಂದು ಹಾಗೇ ಗೋಡೆಗೊರಗಿದ್ದೆ. ಜವರಾಯ ಬರುವಾಗ ಜೋಂಪು ಹತ್ತುವುದೆಂದು ಕೇಳಿಬಲ್ಲೆ. ಆ ರಾತ್ರಿ ಅದರ ಅನುಭವ ನನಗಾಯ್ತು. ಬೆಳಗಿನ ಜಾವದ ಹೊತ್ತಿಗೆ, ಅಣ್ಣನೂ ಯತ್ನವಿಲ್ಲದೆ ಅಲ್ಲೇ ಇದ್ದ. "ಅಣ್ಣ ಯಾಕೋ ನರಳೋದೇ ಇಲ್ಲ ನೋಡು'' ಎಂದೆ. ಕೈಕಾಲು ಮುಟ್ಟಿ ನೋಡಿದ, ಮಂಜಿನಂತೆ ಕೊರೆಯುತ್ತಿತ್ತು. "ಬಿಟ್ಟು ಹೋದಿರಾ ನನ್ನ ದೊರೆ'' ಎಂದು ಕಿರುಚಿದೆ....ಮನೆಯ ಮುಂದೆ ಬೆಂಕಿ ಬಿದ್ದಿತ್ತು....''

ಎಂದು ಹೇಳಿ ರಂಗಮ್ಮ ಕಣ್ಣಲ್ಲಿನ ನೀರನ್ನು ಸೆರಗಿನ ತುದಿಯಲ್ಲಿ ಒರೆಸಿಕೊಂಡರು. ತಿಪ್ಪಯ್ಯ, ಸುಬ್ಬರಾಯ, ತ್ರಿಪುರಸುಂದರಿಯರೂ ಕಣ್ಣೊರಸಿಕೊಂಡರು. ರಂಗಮ್ಮನ ಬಾಳು ಗೋಳಿನ ನಾದಿನಿಯಾಗಿ ಇದುವರೆಗೂ ಸುಶೀಲೆಯನ್ನು ಕಟ್ಟಿಕೊಂಡು ಸಾಗಿಬಂದಿತ್ತು. ಈಗ ತಿಪ್ಪಯ್ಯನಿಗೆ, ಸುಶೀಲೆಗೆ ಒಂದು ವರ ಗೊತ್ತುಮಾಡಿ ಬೇಗ ಮದುವೆ ಮಾಡಿಸಲೇಬೇಕೆಂದೂ ಈ ಬಡವರಿಗೆ ಏನಾದರೂ ಸಾಧ್ಯವಾದಷ್ಟು ಉಪಕಾರ ಮಾಡಬೇಕೆಂದೂ ಅನ್ನಿಸಿತು.

"ಈಗ ನಿಮ್ಮ ಅಣ್ಣ ಎಲ್ಲಿದ್ದಾನೆ? ಆತನ ಮನೆಯಲ್ಲಿ ಇರಬಹುದಿತ್ತಲ್ಲಾ? ''

"ಅಣ್ಣ ನಮ್ಮವನಾದರೂ ಅತ್ತಿಗೆ ನಮ್ಮವಳಲ್ಲ ತಿಪ್ಪಯ್ಯನೋರೆ. ಅತ್ತಿಗೆಯ ತವರುಮನೆ ಕಳ್ಳೂರುಕಟ್ಟೆ. ಅಲ್ಲಿ ಮಾವನ ಮನೆಯಲ್ಲೇ ಇರಲು ಹೊರಟುಹೋದ. ಯಜಮಾನರ ಕಾಲದ ಕೊಂಚ ಬಂಗಾರ, ಅಣ್ಣ ಹೋಟಲು ಮಾರಿ ಹೋಗುವಾಗ ಕೊಟ್ಟ ಒಂದು ಇನ್ನೂರು ರೂಪಾಯಿ ಹೊರತು ನನ್ನದಾಗಿ ಏನೂ ಇರಲಿಲ್ಲ. ನಮ್ಮ ಅತ್ತೆಯವರಂತೆ ನಾನೂ ಈ ಪಿಳ್ಳೆಯನ್ನು ಕೂಡಿಕೊಂಡು ಈಗಿರುವ ಚಿಕ್ಕಮನೆಯಲ್ಲಿ ಕಾಲಹಾಕಿದ್ದಾಯಿತು. ಸುಶೀಲೆ ದೊಡ್ಡವಳಾದಳು. ಅವಳನ್ನು ಒಂದು ಒಳ್ಳೇ ಮನೆ ಸೇರಿಸಿ, ಇರುವ ತನಕ ರಾಮಕೃಷ್ಣಾಂತ ಕಾಲಹಾಕಬೇಕೆಂದು ಮನಸ್ಸು. ನನ್ನ ಪಾಲಿಗೆ ಗಂಡು ಜೀವದ ದಿಕ್ಕೇ ಇಲ್ಲದಂತಾಯ್ತು. ಸುಶೀಲೆಗೆ ಗಂಡು ಮಗುವಾದರೆ ಅದೇ ನನಗೆ ಸಂತೋಷ. ತಿಪ್ಪಯ್ಯನೋರೆ, ನನ್ನ ಕಥೆ ಬೇಸರವಾಯ್ತು ಅಂತ ತೋರುತ್ತದೆ....''

"ಬೇಸರವಿಲ್ಲ ರಂಗಮ್ಮನೋರೆ ವ್ಯಥೆಯಾಯಿತು. ಬಡವರಿಗೇ ಕಷ್ಟದ ಮೇಲೆ ಬರೆಹಾಕುವ ಈ ದೇವರ ಆಟ ನೋಡಿ, ಹೇಗಿದೆ''

"ನಾವು ಪಡೆದುಕೊಂಡು ಬಂದದ್ದು ದೇವರೇನು ಮಾಡುತ್ತಾನೆ ?"

"ಅದು ಸರಿ, ಈಗ ಆದದ್ದು ಆಗಿಹೋಯಿತು. ಅದರ ಬಗ್ಗೆ ವ್ಯಥೆ ಪಟ್ಟು ಪ್ರಯೋಜನವಿಲ್ಲ. ನೀವು ಸುಶೀಲಳ ಜಾತಕ ಕೊಡಿ, ನಾನು ನೋಡಿಸುತ್ತೇನೆ"

"ಹಾಗೇ ಆಗಲಿ; ನೋಡಿಸದಿದ್ದರೂ ಚಿಂತೆ ಇಲ್ಲ, ನೀವು ಒಳ್ಳೆ ಸಂಬಂಧ ಎಂದು ಹೇಳಿದರೆ ಸಾಕು"

"....ಅದು ಸರಿಯಾದ್ದಲ್ಲ ತಾಯಿ. ಗಂಡ ಹೆಂಡತಿ ಅನ್ಯೋನ್ಯವಾಗಿರಬೇಕಾದರೆ ಕುಂಡಲಿ ನೋಡಿಸಲೇಬೇಕು. ಇಷ್ಟಕ್ಕೂ ನೋಡುವವರಾದರೂ ಯಾರೂಂತ, ನಮ್ಮ ಸುಬ್ಬರಾಯನ ಮಾವನೆ"

"ಹೌದೇನು ? ಅವರು ಜಾತಕವನ್ನು ನೋಡ್ತಾರೇನು ?"

"ಹಿರೇಹಳ್ಳಿ ನಾಗರಾಜ ಜೋಯಿಸರೂಂದರೆ ಈ ಪ್ರಾಂತ್ಯಕ್ಕೆ ಜೋತಿಷ್ಯ ಶಾಸ್ತ್ರದಲ್ಲಿ ಹೆಸರಾದ ಆಸಾಮಿ"

"ಸರಿ ಹಾಗಾದರೆ, ಈಗಲೇ ಮನೆಗೆಹೋಗಿ ಜಾತಕ ತಂದುಕೊಡ್ತೇನೆ"

"ಅವಸರವೇನೂ ಇಲ್ಲ. ಸಂಜೆ ಹೊತ್ತಿಗೆ ತಂದುಕೊಡಿ. ನಾನು ನಾಳೆ ಮುಂಜಾನೆ ಹೊರಡುತ್ತೇನೆ"

ಎಂದು ಹೇಳಿ ಯಾವುದೋ ಕೆಲಸವಿದೆ ಎಂದೂ ಬಂದು ಮತ್ತೆ ಶ್ರೀಧರ ಮೂರ್ತಿಯನ್ನು ಕಾಣುವುದಾಗಿಯೂ ಹೇಳಿ ತಿಪ್ಪಯ್ಯನವರು ಹೊರಡಲನುವಾದರು. ಸುಬ್ಬರಾಯ "ತಂಗೀ, ಕಾಫಿಗಿಡಲಿಲ್ಲವೇನು ?" ಎಂದು ತ್ರಿಪುರ ಸುಂದರಿಗೆ, ತಿಪ್ಪಯ್ಯನಿಗೆ ಕಾಫಿ ಕೊಡಲಿಲ್ಲವಲ್ಲಾ ಎಂಬ ಸೂಚನೆಯಲ್ಲಿ ಕೇಳಿದ.

"ಕಾಫಿ ಬೇಡ ಮಹರಾಯ. ಮೊದಲೇ ನಂದು ಉಷ್ಣಪ್ರಕೃತಿ. ನಾನು ಕಾಫಿ ಕುಡಿಯುವುದೇ ಇಲ್ಲ"

"ಟೀ ಹಾಕಿ ಕೊಡ್ತೀನಿ"

"ಒಳ್ಳೇ ಹಸಿ ಶುಂಠಿ ಹಾಕಿ ಒಂದು ಲೋಟ ಮಜ್ಜಿಗೆ ಕೊಟ್ಟರೆ ಸಾಕು. ನಿನಗೊಂದು ಗಂಡುಮಗುವಾಗತ್ತೇ ಬೇಗ"

ಸೊಗಸಾಗಿ ಉಪ್ಪು, ಕೊತ್ತುಂಬರಿ ಸೊಪ್ಪು, ಹಸಿ ಶುಂಠಿ ಹಾಕಿ ಮಜ್ಜಿಗೇ ಮಾಡೇ ತಂದಳು, ತ್ರಿಪುರಸುಂದರಿ. ಎರಡು ಹೆಣ್ಣಿನ ಮೇಲೆ ಅವಳಿಗೆ ಮಕ್ಕಳೇ ಆಗಿರಲಿಲ್ಲ. ಗಂಡು ಕೂಸಾಗಬೇಕೆಂದು ಸುಬ್ಬರಾಯನ ಶ್ರಷ್ಠಿಯಲ್ಲಿ ಬ್ರಹ್ಮಚಾರಿಗೆ ಬಚ್ಚಖಾನಿಯನ್ನು ಪ್ರತಿವರ್ಷವೂ ದಾನ ಕೊಡುವಳು. ಈಗ ತಿಪ್ಪಯ್ಯ ಅಂದ ಮಾತಿಗೆ ಅವಳಿಗೆ ಪರಮಾನಂದವಾಯಿತು. ತಾನೊಂದು ಗಂಡುಕೂಸಿನ ತಾಯಿಯಾದೇನು, ಈ ಪುಣ್ಯಾತ್ಮನ ಬಾಯಿ ಹರಕೆಯಿಂದ ಎಂದುಕೊಂಡಳು.

ಸುಬ್ಬರಾಯನನ್ನು ಕರೆಯಲು ಸ್ನೇಹಿತ ವೆಂಕಟೇಶ ಬಂದದ್ದರಿಂದ ಗೆಳೆಯನ ಜೊತೆ ಅವನು ಹೊರಟುಹೋದ.

ರಂಗಮ್ಮನೂ "ಬರ್‍ತೇನೆ" ಎಂದು ಹೇಳಿ ಮನೆಗೆ ಹೋದಳು.

ತಿಪ್ಪಯ್ಯನೂ ಮಜ್ಜಿಗೆ ಕುಡಿದು ಹೊರಬಿದ್ದ. ತ್ರಿಪುರಸುಂದರಿ ಮಕ್ಕಳ ಬಟ್ಟೆ ಒಗೆಯಲು ಹಿತ್ತಲಕಡೆ ಹೊರಟಳು.

ರಂಗಮ್ಮ ಮನೆ ಸೇರಿದಾಗ ಸುಶೀಲ ಚಾಪೆಯ ಮೇಲೆ ಬೋರಲಾಗಿ ಮಲಗಿದ್ದಳು. ಎಂದೂ ಹೀಗೆ ಮಲಗದ ಸುಶೀಲೆಯನ್ನು ಕಂಡು ರಂಗಮ್ಮ "ಯಾಕೆ ಮಗೂ ಮೈಲಿ ಸ್ವಸ್ಥವಿಲ್ಲವೆ?" ಎಂದು ಹಣೆ ಮುಟ್ಟಿ ನೋಡಿದಳು. ಬಿಸಿಯಾಗೇನೂ ಇರಲಿಲ್ಲ. ಬೆಳಗಿನಿಂದ ಚೆನ್ನಾಗಿ ಇದ್ದವಳಿಗೆ ಇದ್ದಕ್ಕಿದ್ದ ಹಾಗೇ ಏನಾಯಿತೋ ಎಂದು "ಸುಶೀಲಾ, ಕಾಫಿ ಕಾಸಿ ಕೊಡಲಾ?" ಎಂದು ಕೇಳಿದಾಗಲೂ ಸುಶೀಲೆ ಮಾತನಾಡಲಿಲ್ಲ. ಎದ್ದುಹೋಗಿ ಚೆನ್ನಾಗಿ ಮುಖ ತೊಳೆದು ಬಂದಳು. ಉಕ್ಕಿ ಬರುತ್ತಿದ್ದ ದುಃಖವನ್ನು ಬಹು ಪ್ರಯಾಸದಿಂದ ಹುದುಗಿಸಲು ಯತ್ನಿಸಿದಳು. ಮಗಳು ಅತ್ತು ಬಳಲಿದ್ದು ಚೆನ್ನಾಗಿ ವ್ಯಕ್ತವಾಗುತ್ತಿತ್ತು. ಅವಳ ದುಃಖದ ಕಾರಣ ಮಾತ್ರ ರಂಗಮ್ಮನಿಗೆ ಗೊತ್ತಾಗಲಿಲ್ಲ.

ತಾನು ಅತ್ತಿದ್ದರ ಕಾರಣ ತಾಯಿಗೆ ಹೇಳುವುದು ಹೇಗೆ? ತನ್ನಂತ ರಂಗದ ಪ್ರೇಮಮೂರ್ತಿಗೆ ಆಗಲೆ ಬಾಳ ಗೆಳತಿಯೊಬ್ಬಳು ಇದ್ದಾಳೆ, ಇನ್ನವನು ತನಗೆ ಎಂದೆಂದಿಗೂ ದೊರಕಲಾರ, ಅವನೊಡಗೂಡಿ ಇರುವುದು ಬರಿಯ ಸ್ವಪ್ನಲೋಕದ ಮಾತೆಂದು ಹೇಗೆ ತಾಯಿಗೆ ಹೇಳುವುದು?

"ಅದೇನು ಸುಶೀಲ ಹೇಳಬಾರದೇನು ?"

"ಏನಮ್ಮ ?"

"ಅಲ್ಲಕಣೆ, ತ್ರಿಪುರಸುಂದರಮ್ಮನವರ ಮನೆಯಿಂದ ಇಕೊ ಬಂದೆ ಎಂದು ಎದ್ದು ಬಂದವಳನ್ನು ಈ ಸ್ಥಿತಿಯಲ್ಲಿ ನಾನು ಕಾಣಬೇಕೆ ? ಅದ್ಯಾಕೆ ಹೀಗಿದ್ದೀ ಸುಶೀಲ ?"

"ಅದೇನೊ ವಿಪರೀತ ತಲೆನೋವು"

"ಊಟದಲ್ಲಿಯೂ ವ್ಯತ್ಯಾಸವಾಗಿಲ್ಲ—ಅದೇಕೆ ತಲೆನೋವು ?—ಶುಂಠಿ ಕಷಾಯ ಮಾಡ್ತಿನಿ ತಡಿ, ಕುಡಿದರೆ ಸರಿಹೋಗುತ್ತೆ"

"..............." ಸುಶೀಲ ಮಾತೇ ಆಡಲಿಲ್ಲ. ನೀರು ಕಾಯಿಸಲು ಒಲೆ ಹೊತ್ತಿಸಿ ನೀರಿಟ್ಟು ಮತ್ತೆ ಮಗಳಿದ್ದ ಬಳಿ ಬಂದು ಬದಿಗೆ ಕುಳಿತಳು. ತನ್ನ ಕಷ್ಟದ ಜೀವನದ ವಿವರಗಳನ್ನು ಆಕೆ ಯಾರಲ್ಲೂ ಹೇಳಿರಲಿಲ್ಲ. ಇವತ್ತು ತಿಪ್ಪಯ್ಯನೆದುರು ತೋಡಿಕೊಂಡದ್ದು ಎಷ್ಟೊ ನೆಮ್ಮದಿ ಸಿಕ್ಕಿತ್ತು. ತನ್ನಲ್ಲಿ ಪಶ್ಚಾತ್ತಾಪಗೊಂಡ ಅವರು ಮಗಳಿಗೆ ಒಳ್ಳೆಯ ಗಂಡನನ್ನು ಹುಡುಕಿ ಕೊಡುವರೆಂದು ಕೊಟ್ಟ ಭರವಸೆಯ ವಿಷಯವನ್ನು ಸುಶೀಲೆಗೆ ತಿಳಿಸಬೇಕೆಂದು ರಂಗಮ್ಮನ ಆಸೆ. ಗೂಡಿನಲ್ಲಿದ್ದ ಅಮೃತಾಂಜನವನ್ನು ತೆಗೆದು ಹಣೆಗೆ ಕಣ್ಣಿಗೆ ತಿಕ್ಕಿಕೊಂಡಾಗ ಸುಶೀಲೆಯ ಕಣ್ಣಲ್ಲಿ ನೀರು ಧಾರಾಕಾರವಾಗಿ ಸುರಿಯಿತು. ಅಮೃತಾಂಜನದ ಪ್ರಭಾವದ ನೆಪದಲ್ಲಿ ಸುಶೀಲೆಯು ನಿಜವಾದ ದುಃಖದ ಕಣ್ಣೀರನ್ನು ಮಿಡಿಸಿದುದು ರಂಗಮ್ಮನಿಗೆ ಗೊತ್ತಾಗಲಿಲ್ಲ.

"ತ್ರಿಪುರಸುಂದರಿಯ ಮನೆಯವರು ಗೊತ್ತಾದದ್ದು ನಮ್ಮ ಪುಣ್ಯ"

"..............." ಸುಶೀಲೆ ಮಾತಾಡಲಿಲ್ಲ.

"ಇಲ್ಲದಿದ್ದರೆ ತಿಪ್ಪಯ್ಯನವರಂಥ ಹಿರಿಯರ ಸಹಾಯ ನಮಗೆ ಹೇಗೆ ಸಿಕ್ಕುತ್ತಿತ್ತು ?"

"..............." ನೆಟ್ಟದೃಷ್ಟಿಯಿಂದ ಗೋಡೆ ನೋಡುತ್ತಿದ್ದಳು.

"ಪುಣ್ಯಾತ್ಮ ಸುಬ್ಬರಾಯ-ಯಾವ ಮುಹೂರ್ತದಲ್ಲಿ ನಿನ್ನ ಜೀವ ಕಾಪಾಡಿದನೋ ಅಂದಿನಿಂದ ನಮಗೆ ಶುಭವೇ ಆಗುತ್ತಾ ಬಂದಿದೆ"

"..............." ಕಣ್ಣಿಂದ ನೀರು ಹರಿಯುತ್ತಲೇ ಇತ್ತು.

"ಆತನ ಮಾವನೇ ಚೆನ್ನಾಗಿ ಜಾತಕಾ ಕೂಡಾ ನೋಡ್ತಾರಂತೆ. ನಿನ್ನ ಜಾತಕ ನನ್ನ ಪೆಟ್ಟಿಗೇಲಿ ಇದೆ ಅಲ್ಲವೆ?"

"..............." ಹೂಂ ಎಂದೆನ್ನುವಂತೆ ತಲೆ ಮಾತ್ರ ಆಡಿಸಿದಳು.

ಗೋಡೆಗೆ ಹೊಡೆದ ಮೊಳೆಗೆ ನೇತುಹಾಕಿದ ಬೀಗದಕೈ ಕುಚ್ಚನ್ನು ತೆಗೆದು ಹಾಸಿಗೆಗಳನ್ನು ಇಳಿಸಿ ನೆಗ್ಗಿದ ಟ್ರಂಕೊಂದನ್ನು ತೆಗೆದಳು. ಟ್ರಂಕಿನೊಳಗಿನಿಂದ ಒಂದು ಚಿಕ್ಕ ಡಬ್ಬಿ ಹೊರಕ್ಕೆ ತೆಗೆದಳು. ಅದರಲ್ಲಿ ಜೋಪಾನವಾಗಿಟ್ಟ ಜಾತಕವನ್ನು ಹೊರಕ್ಕೆ ತೆಗೆದಿಟ್ಟುಕೊಂಡು, ಅದರಲ್ಲೆ ಇದ್ದ ಸರಿಗೆ, ಸರ, ಬಳೆಗಳನ್ನು ತೆಗೆದು ನೋಡಿ–"ಅರ್ಕಾಚಾರಿಗೆ ಹೇಳಿ ಒಪ್ಪವಾದರೂ ಹಾಕಿಸಬೇಕು ಲಗ್ನದಹೊತ್ತಿಗೆ" ಎಂದುಕೊಂಡಳು.

ಜಾತಕದ ಪ್ರತಿ ಮಡಿಸಿ ಮಡಿಲಲ್ಲಿ ಸಿಕ್ಕಿಸಿಕೊಂಡಳು. ಮತ್ತೆ ಬೀಗ ಹಾಕಿ ಹಾಸಿಗೆ ಮೊದಲಿನಂತೇ ಪೇರಿಸಿದಳು. ಕಾದ ನೀರಿಗೆ ಸಕ್ಕರೆ ಶುಂಠಿ ಹಾಕಿ ಕುದಿಸಿ ಎರಡು ಕಾಳು ಕೊತ್ತಂಬರಿಬೀಜ ಒಡೆದುಹಾಕಿ ಯಾಲಕ್ಕಿ ಸುಲಿದುಹಾಕಿ ಕೊಂಚ ಹಾಲು ಬೆರಸಿ ಹದವಾಗಿ ಆರಿಸಿ ಸುಶೀಲಳಿಗೆ ಕೊಟ್ಟಳು. ಬಿಸಿ ಬಿಸಿಯಾದ ಆ ಕಷಾಯ ಆಪ್ಯಾಯಮಾನವಾಗೇನೋ ಇತ್ತು. ಆದರೆ ಮನೋವ್ಯಾಧಿಗೆ ಶುಂಠಿ ಕಷಾಯ ಆಗುತ್ತದೆಯೆ? ಮನದ ದುಗುಡ ಏನು ಮಾಡಿದರೂ ಕಡಿಮೆಯಾಗಲೊಲ್ಲದು. ರಂಗಮ್ಮ ಜಾತಕದೊಡನೆ ತ್ರಿಪುರಸುಂದರಿ ಮನೆಗೆ ಹೋದಳು.

ನನ್ನನ್ನು ಯಾತಕ್ಕೆ ಅವರು ಉಳಿಸಬೇಕಿತ್ತು? ನಿಶ್ಚಿಂತೆಯಾಗಿ ತುಂಗಾ ತಾಯಿಯ ಪಾಲಾಗಿದ್ದರೆ ಈ ಜನ್ಮಕ್ಕೆ ವ್ಯಥೆಯೇ ಇರುತ್ತಿರಲಿಲ್ಲ. ಈಗ ಆದದ್ದೇನು–ನನ್ನ ಉಳಿಸಿದಾಕ್ಷಣಕ್ಕೆ ಕೈಹಿಡಿಯಲೇಬೇಕೇನು?— ಒಲವು ಎಂದರೆ ಹೆಂಡತಿಯಾದರೆ ಬರಬೇಕು ಇಲ್ಲವಾದರೆ ಇಲ್ಲವೆ? ಸುಬ್ಬರಾಯನಿಗೆ ಮದುವೆಯಾಗಿದ್ದರೇನಂತೆ, ನೀನೂ ಅವನಲ್ಲಿ ಪ್ರೀತಿ ಇಡಲಾಗದೆ? ಏನೇನೋ ಯೋಚನೆಗಳು ಇತಿಮಿತಿ ಇಲ್ಲದೆ ಸುಶೀಲೆಯ ಮನಸ್ಸಿನಲ್ಲಿ ಮುತ್ತಿ ಕಾಡಿದವು.

ಏನೂ ತೋಚದೆ ಹಾಸಿಗೆ ಉರುಳಿಸಿಕೊಂಡು ಅಳುತ್ತ ಮಲಗಿಬಿಟ್ಟಳು.

೪

ಹೊನ್ನಾಳಿಗೆ ಮೋಟಾರು ತಲುಪಿದಾಗ ಸಂಜೆಯಾಗಿತ್ತು. ತಿಪ್ಪಯ್ಯ ನೇರವಾಗಿ ತಾಲ್ಲೂಕು ಕಚೇರಿಗೇ ಹೋದ. ಜನಾರ್ಧನಯ್ಯನವರು ತಲೆ ತಗ್ಗಿಸಿಕೊಂಡು ಇಳಿಮೇಜಿನ ಮೇಲಿದ್ದ ಕಾಗದದ ಕಟ್ಟಿನಲ್ಲಿ ಮಗ್ನರಾಗಿದ್ದರು.

ಕಚೇರಿಯಿಂದ ಸಿಪಾಯಿ ಹೊಡೆದ ಘಂಟೆಯ ಸದ್ದು ಅಲೆಅಲೆಯಾಗಿ ತೇಲಿಬಂತು. ಆರು ಘಂಟೆ ಹೊಡೆದಿದ್ದರೂ ಇನ್ನೂ ಏಳದ ಜನಾರ್ಧನಯ್ಯ ನನ್ನು ಕಂಡು ತಿಪ್ಪಯ್ಯ

"ಹೊಸದರಲ್ಲಿ ಅಗಸ ಗೋಣಿ ಎತ್ತಿಎತ್ತಿ ಒಗೆದನಂತೆ" ಎಂದ. ಗೋಣು ಎತ್ತಿ ನೋಡಿದಾಗ ಜನಾರ್ಧನಯ್ಯನಿಗೆ ಆಶ್ಚರ್ಯವಾಯಿತು. ಈ ತಿಪ್ಪಯ್ಯ ಮತ್ತೆ ಯಾವುದೋ ಕೆಟ್ಟಮೂತಿಯ ಹೆಣ್ಣು ಗಂಟು ಹಾಕಲು ಯತ್ನಿಸುವುದ ಕ್ಕಾಗಿಯೇ ಬಂದಿದ್ದಾನೆಂದು ಅವನಿಗೆ ಗೊತ್ತು. ಹೋದ ತಿಂಗಳು ತಿಪ್ಪಯ್ಯ ಹೇಳಿಹೋದ ಮಾತಿನಿಂದ ಮತ್ತವನು ಸಧ್ಯದಲ್ಲಿ ಬರುವನೆಂದು ಜನಾರ್ಧನನು ತಿಳಿದಿರಲಿಲ್ಲ. ತಿಪ್ಪಯ್ಯ ಅಂದಮಾತಿಗೆ ಜನಾರ್ಧನಯ್ಯ ನಕ್ಕು

"ಏನು ತಿಪ್ಪಯ್ಯನೋರೆ ಹಾಗಂತೀರಿ?"

"ಮತ್ತಿನ್ನೇನಯ್ಯಾ? ಹೊಸದಾಗಿ ಕೆಲಸಕ್ಕೆ ಸೇರಿದ್ದೂಂತ ಘಂಟೆ ಆರಾದರೂ ಇನ್ನು ಕಚೇರೀಲೇ ಕೂತಿದ್ದೀಯಲ್ಲಾ ಸಾಹೇಬರನ್ನ ಮೆಚ್ಚಿ ಸೋದಕ್ಕೋ?"

"ಮಹಾರಾಯ, ಈ ಹೆಡ್ ಗುಮಾಸ್ತಾ........" ಎಂದವನು ತಟಕ್ಕನೆ ನಾಲಿಗೆ ಕಚ್ಚಿ ಆಕಡೆ ಈಕಡೆ ನೋಡಿ "ಯಾರೂ ಇಲ್ಲತಾನೆ–ನಾನು ಹೀಗಂ ದೇಂತ ಯಾರಾದರೂ ಪುಳ್ಳೆ ಇಟ್ಟರೋ ಬ್ರಹ್ಮೇತಿ ಮನುಷ್ಯ–ಹೊಸಬಾಂತ ಗೊತ್ತಿದ್ದರೂ ಈ ಪಾಟ ಕೆಲಸ ನನ್ನ ತಲೆಗೆ ಕಟ್ಟಿ ಹೋಗಿದ್ದಾನೆ ನೋಡು. ಇದನ್ನು ಬೇಡಾನ್ನೋಕೆ ಆಗುತ್ಯೆ?"

"ಅದು ಸರೀನ್ನು–ಎಳೆ ವಯಸ್ಸು, ಬೇಗ ಮನೆಗೆ ಹೋಗೋ ಚಪಲ. ಆದರೂ ಇಲ್ಲೇ ಇದ್ದೀಯಲ್ಲಾಂತ....ನೋಡ್ದ್ಯಾ ನಾನೊಬ್ಬ ಮೂಢ, ಮನೆಗೆ

ಹೋಗೋ ಚಪಲಾಂತ ಅಂದುಬಿಟ್ಟೆನಲ್ಲಾ. ನಿನಗೇನು ಹೆಂಡಿತೀ ಮಕ್ಕಳೀ? ಯಾರು ಕಾಯ್ತಾ ಇರ್ತಾರೇಂತ ನೀನು ಮನೆಗೆ ಬೇಗ ಹೋಗಬೇಕು?"

"ಅನ್ನಿ ತಿಪ್ಪಯ್ಯ, ಅನ್ನಿ. ನೀವು ಎಷ್ಟು ಅಂದರೂ ನೀವು ತೋರಿಸೋ ಹೆಣ್ಣುಗಳನ್ನ ನಾನು ಒಪ್ಪೋಲ್ಲ"

"ಅಲ್ಕಣೋ ಜನ್ನು, ಒಂದಲ್ಲ ಎರಡಲ್ಲ ಐದು ಹೆಣ್ಣಲ್ಲೋ ನಿನಗೆ ತೋರಿಸಿದ್ದು. ಅದ್ಯಾಕೊ ಹೀಗಾಡ್ತೀಯಾ ಆಂ? ನನ್ನ ಮಾತು ಕೇಳು. ಇದು ಒಳ್ಳೇ ವಯಸ್ಸು. ಈಗ ನೀನು ಹೀಗಿರುವುದು ಒಳ್ಳೇದಲ್ಲ. ನಿಮ್ಮ ಚಿಕ್ಕಪ್ಪನಿಗೆ ಬೇಕಾದರೆ ಹೇಳ್ತೀನಿ"

"ಸರಿ ಸರಿ ಆಯಪ್ಪನಿಗೆ ಹೇಳಿ–ಇಲ್ನೋಡಿ ತಿಪ್ಪಯ್ಯಾ. ನಾನೇನು ಆಜನ್ಮ ಬ್ರಹ್ಮಚಾರಿಯಾಗಿರ್ತಿನೀಂತ ಹಟ ತೊಟ್ಟಿಲ್ಲ. ಅಲ್ರೀ, ಕೊಂಚ ಚೆನ್ನಾಗಿರೋ ಹುಡಿಗೀರನ್ನ ತೋರಿಸಬಾರದೆ? ಒಂದೊಂದೂ ಇಲ್ಲಾ ಬೆಳೆದ ಎಮ್ಮೆ, ಇಲ್ಲಾ ಶಿಳ್ಳೆಕ್ಯಾತ, ಇಲ್ಲಾ ಆಂಜನೇಯ ವರದ ಗೋವಿಂದ. ಅಂಥ ಹೆಣ್ಣುಗಳಿಗೆ ಯಾವ ಕೈಯಿಂದ ತಾಳೀ ಕಟ್ಟಲಿ ತಿಪ್ಪಯ್ಯನೋರೆ?"

"ಅದು ಸರಿಯಪ್ಪ, ಒಪ್ಕೊಂಡೆ. ಆ ಮಾತಿಗಲ್ಲ ನಾನು ಹೇಳಿದ್ದು. ಆಗಿದ್ದು ಆಗ್ಹೋಯ್ತಲ್ಲ ಬಿಡು. ಈಗ ಒಂದು ಜಾತಕ ತಂದಿದ್ದೀನಿ. ಹುಡುಗಿ ಅಪರಂಜಿ...."

"ನಾನೂ ನೋಡಿ, ಹಾಗೇ ಕೂತ್ಕೊಂಡುಬಿಟ್ಟೆ ಇಲ್ಲೇನೆ. ಏಳಿ ಹೊರ ಡೊರಡೋಣ, ಮನೇಲಿ ಮಾತಾಡೋಣಂತೆ"

ಎಂದು ಟೋಪಿ ಹಾಕಿಕೊಂಡು ಎದ್ದುನಿಂತ. ಹಾಗೇ ಹರವಿದ ಕಾಗದ ಪತ್ರ ಜೋಡಿಸಿಟ್ಟು, ಕೈಮುರಿದು ನಟಿಕೆ ತೆಗೆದು ಹೊರಬಿದ್ದ. ಜೊತೆಗೆ ತಿಪ್ಪಯ್ಯನವರೂ ಹೊರಟರು. ತಿಪ್ಪಯ್ಯನವರ ತಂಗಿ ಇದ್ದುದು ಹೊನ್ನಾಳಿ ಯಲ್ಲಿ. ಆಗಿಂದಾಗ್ಗೆ ತನ್ನ ಕೆಲಸಕ್ಕೆ ತಿಪ್ಪಯ್ಯ ಅಲ್ಲಿಗೆ ಹೋಗಬೇಕಾಗಿ ಬರುತ್ತಿತ್ತು. ತನ್ನ ಕೆಲಸದ ಜೊತೆಗೆ ಗಂಡು ಹೆಣ್ಣುಗಳ ಜಾತಕಗಳನ್ನೂ ಹೊತ್ತು ತರುತ್ತಿದ್ದ. ಸೋಮಪ್ಪಯ್ಯ ತಿಪ್ಪಯ್ಯನ ಭಾವ. ಅಲ್ಲಿ ಪೌರೋ ಹಿತ್ಯದ ಜೊತೆಗೆ ಚಿಕ್ಕದಾಗಿ ವೈದ್ಯವೃತ್ತಿ ಮತ್ತು ಜೋತಿಷ್ಯ ನೋಡುವುದರಲ್ಲಿ ಜೀವನ ಸಾಗಿಸಿದ್ದರು. ಮನುಷ್ಯ ಭಯಸ್ಥ. ದೇವರು ದಿಂಡರೊಂದ್ರೆ ಮಹಾ ಭಕ್ತಿ, ಅತಿ ಶ್ರದ್ಧೆ. ದೇವರನ್ನ ನಂಬಿದ್ದೀನಿ, ಅವನು ಕೈಬಿಡೋಲ್ಲ ಅಂತ

ಅವರ ನಂಬಿಕೆ. ಓದೇ ಇರಲಿಲ್ಲ. ಆದರೆ ಸಂಸ್ಕೃತ ಅವರ ತಂದೆ ಕಲಿಸಿದ್ದು; ಗುರುಗಳು ಕಲಿಸಿವ ವೈದ್ಯಕೀಯ, ಜ್ಯೋತಿಷ್ಯ ಇವೇ ಅವರ ವಿದ್ಯೆ. ಅಂತೂ ಇಂತೂ ಇದ್ದದ್ದರಲ್ಲೇ ನೆಮ್ಮದಿಯಾಗಿದ್ದರು. ತಿಪ್ಪಯ್ಯನೇ ತಂಗಿ ಬಡವಿ ಎಂದು ಊರಿಂದ ಬರುವಾಗ ಕಾಳುಕಡಿ, ಜೋಳ, ತೊಗರಿ ತಂದು ಹಾಕುತ್ತಿದ್ದ. ತಿಂಗಳಿಗೊಂದು ಸಾರಿಯಾದರೂ ತಿಪ್ಪಯ್ಯ ಹೊನ್ನಾಳಿಗೆ ಬರಲೇ ಬೇಕಾಗುತ್ತಿತ್ತು.

ಆ ಸಲ ಬಂದಾಗ ಏನೂ ತರಲಾಗಲಿಲ್ಲ. ಶಿವಮೊಗ್ಗೆಯಿಂದ ನೇರವಾಗಿ ಬಂದಿದ್ದರು. ಸುಶೀಲೆಯ ಜಾತಕವನ್ನೂ ತಂದಿದ್ದರು. ಜನಾರ್ಧನಯ್ಯನ ಜಾತಕವನ್ನೂ ತೆಗೆದುಕೊಂಡು ನಾಗಾಜೋಯಿಸರ ಹತ್ತಿರ ನೋಡಿಸಿ ಈ ಲಗ್ನವನ್ನು ಮಾಡಿಸಲೇಬೇಕೆಂದು ಅವರು ಮನಸ್ಸು ಮಾಡಿದ್ದರು.

ಕಚೇರಿಯಿಂದ ಹೊರಟವರು ನೇರವಾಗಿ ಜನಾರ್ಧನನ ಮನೆಗೇ ಬಂದರು. ಜನಾರ್ಧನನ ಚಿಕ್ಕಪ್ಪ ಮನೆಮುಂದೆ ಜಗಲಿ ಮೇಲೆ ಹೊದ್ದು ಮಲಗಿದ್ದರು. ಮನುಷ್ಯನಿಗೆ ಅಸ್ತಮ ಖಾಯಿಲೆ.

"ಚಿಕ್ಕಪ್ಪಾ, ತಿಪ್ಪಯ್ಯನೋರು ಬಂದಿದ್ದಾರೇ" ಎಂದು ಕೂಗಿದಾಗ, ಮಂಜು ಬಂದ ಕಣ್ಣಿಗೆ ಕೈಮರೆಮಾಡಿ ನೋಡಿದ ಮೇಲೆ "ಯಾರು ತಿಪ್ಪ್ಪನೇ, ಬಾ" ಎಂದು ಎದ್ದು ಕೂತರು.

"ನನ್ನ ಮಾತು ಕೇಳೋಲ್ಲ ಈ ಜನ್ನು. ಬೇಗ ಮದುವೆ ಮಾಡ್ಕೊಳ್ಳೊ ಯಾವ ಹೆಣ್ಣು ತೋರ್ಸಿದರೂ ಬೇಡಾಂತಿಯಲ್ಲೊ, ಇನ್ಯಾವ ತ್ರಿಪುರಸುಂದರಿ ಕಾದಿದ್ದಾಳೋ ಈ ಮಹರಾಯನಿಗೆ ಮಾಲೆ ಹಾಕೂಕೆ" ಎಂದು ಬಂದ ಕೆಮ್ಮನ್ನು ತಡೆದು ಮಧ್ಯೆ ಮತ್ತೆ ಕೆಮ್ಮಿ ಕೆಮ್ಮಿ ಪ್ರಯಾಸದಿಂದ ಹೇಳಿದರು. ಜನಾರ್ಧನಯ್ಯ ಒಳಕ್ಕೆ ಹೋದ.

"ನೀವು ಆಯಾಸ ಮಾಡ್ಕೋಬೇಡಿ. ನಾನೆಲ್ಲಾ ಒಳ್ಳೇ ಕಡೇನೇ ನೋಡಿ ಮಾಡಿಸ್ತೀನಿ. ಆ ಯೋಚನೇನೇ ಬಿಟ್ಬುಬಿಡಿ"

"ಏನೋ ನನಗೂ ಮಕ್ಕಳಿಲ್ಲ ಮರಿಯಿಲ್ಲ. ತಾಯಿ ಇಲ್ಲದ ಈ ಜನ್ನೂನ ಸಾಕಿದೆ. ಹುಡುಗನೂ ಬುದ್ಧಿವಂತ, ಮೆಟ್ರಿಕು ಪ್ಯಾಸುಮಾಡಿ ನೌಕರೀನೂ ಮಾಡ್ತಿದ್ದಾನೆ. ಇನ್ನು ಮೊಮ್ಮಗನ್ನ ನೋಡೋಕೆ ಈ ಗುಟುಕು ಜೀವ ಹೋಗದೇ ಉಳಕೊಂಡಿದೆ"

"ಈ ವಿಚಾರ ನನಗೆ ಗೊತ್ತಿಲ್ಲವೇ? ಇದೇ ಈಗ ಶಿವಮೊಗ್ಗಾದಿಂದ ಬಂದೆ. ಒಂದು ಹುಡುಗೀನ್ನ ನೋಡ್ಕೊಂಡು ಬಂದಿದ್ದೀನಿ. ಜಾತಕಾ ತೊಗೊಂಡು ಹೋಗೋಣಾಂತ ಬಂದೆ"

"ನಿನ್ನ ಹತ್ತಿರಲೇ ಒಂದು ನಕಲು ಇತ್ತಲ್ಲೋ?"

"ಇತ್ತು-ಮೊನ್ನೆ ಯಾವುದೋ ಕಾಗದದ ಜೊತೆ ಸೇರ್ಕೊಂಡು ಕಳೆದು ಕಳೆದುಹೋಗಿದೆ"

"ಯಾರ ಪೈಕೀನೋ?"

"ಶಿವಮೊಗ್ಗಾದಲ್ಲಿ ಹಿಂದೆ ಇದ್ದರಂತೆ; ದೊಡ್ಡಪೇಟೇಲಿ ಹೋಟ ಲಿಟ್ಟಿದ್ದರಂತೆ ಗುಂಡಪ್ಪಾಂತ. ಪಾಪ ಆತ ದೊಡ್ಡ ಪ್ಲೇಗು ಬಂದಿತ್ತು ನೋಡು, ಆಗ ಹೊರಟುಹೋದರು. ಆತನ ಮಗಳು; ತಾಯಿ ಇದ್ದಾರೆ ಬಡವರೂ ಅನ್ನೋದು ಹೊರ್ತು ಹುಡುಗಿ ಅಪರಂಜಿ"

"ನಾನಿನ್ನೇನು ಮನೇಮೇಲೆ ಕಲಶ ಇಟ್ಟಿದ್ದೀನೇನೋ? ನೀನು ಹೇಳಿದಮೇಲೆ ಸರಿ; ಗಂಡನ್ನ ಸರಿಯಾಗಿ ನೋಡಿಕೊಂಡು ಮರ್ಯಾದೆ ಯಾಗಿ ಇದ್ದರೆ ಸರಿ, ಅದೇ ದೊಡ್ಡ ಆಸ್ತಿ...."

"ಆ ವಿಷಯವನ್ನೆಲ್ಲಾ ವಿಚಾರ ಮಾಡಿದ್ದೀನಿ. ನಮ್ಮ ಅಮ್ಮೇನಹಳ್ಳಿ ಆನಂದರಾಯರ ಮಗ ಸುಬ್ಬರಾಯ ಗೊತ್ತಿಲ್ಲವೆ?"

"ಆನಂದರಾಯ ಪುಣ್ಯಾತ್ಮ. ಪಟ್ಟಾಭಿರಾಮುಗುಡಿ ನಡೆಸಿದರಲ್ಲಾ ಅವರು ಗೊತ್ತಿಲ್ಲವೇ? ಆದರೆ ಅವರ ಮಗನ್ನ ನೋಡಿದ ನೆನಪಿಲ್ಲ. ಚಿಕ್ಕವ ನಿದ್ದಾಗ ನೋಡಿದ್ದರೂ ಇರಬಹುದು"

"ಅಷ್ಟ್ಯಾಕೆ, ನಮ್ಮ ಪೋಸ್ಟಾಫೀಸು ಶ್ರೀಧರಮೂರ್ತಿ ಗೊತ್ತಿಲ್ಲವೆ?"

"ಗೊತ್ತು ಗೊತ್ತು; ಹಾರ್ಮೋನಿಂ ಗೀರ್ಮೊನಿಂ ಬಾರಸ್ತಾ ಇದ್ದನಲ್ಲ ಹುಡುಗ ಅವನು ತಾನೆ?"

"ಅವನೇ ಆನಂದರಾಯರ ಅಳಿಯ"

"ಹೌದು ಹೌದು, ಹಾಳು ಮರವೇ. ಅವನ ಮದುವೆ ಊಟ ಹೊಡೆ ದಿದ್ದೀನಿ ನಾನು ಅಮ್ಮೇನಹಳ್ಳೀಲಿ. ತ್ರಿಪುರಸುಂದರಿ ಗಂಡ ಅಲ್ವೆ? ಸರಿ ಸರಿ ಈಗ ನೆನಪಿಗೆ ಬಂತು; ಈ ಸುಬ್ಬರಾಯನ್ನೂ ನಾನು ನೋಡಿದ್ದೇನಪ್ಪಾ"

"ಅವರಿಗೆ ಈ ಹುಡುಗಿ ವಿಷಯವೆಲ್ಲಾ ಗೊತ್ತು. ನಾನೂ ಇಲ್ಲಿಗೆ ಬರುವ ಮುಂಚೆ ಶಿವಮೊಗ್ಗೆಯಲ್ಲಿ ತಿಳಿದವರ ಹತ್ತಿರ ವಿಚಾರ್ಸಿದ್ದೇನೆ. ಈ ಸಂಬಂಧ ನನಗೇನೋ ಯೋಗ್ಯವಾದ್ದೂಂತ ಅನ್ನಿಸ್ತಾ ಇದೆ''

"ಶುಭಸ್ಯ ಶೀಘ್ರಂ. ನಂದೇನಿದೆ, ನಾನು ಯಾವಾಗಲು ತಯಾರು. ತಕರಾರು ಇರೋದು ತಾಳಿಕಟ್ಟೋ ಮಹರಾಯನದೇ''

''ಅವನ್ನ ನೀವು, ಒಪ್ಪಿಸಬೇಕು''

ಅಧಿಕಾರವಾಣಿಯಿಂದ ''ಆಗು'' ಎಂದು ಹೇಳುವ ಹಕ್ಕಿಲ್ಲದ ರಂಗಣ್ಣ ಅವನನ್ನು ನೀವು ಒಪ್ಪಿಸಬೇಕು ಎಂಬ ತಿಪ್ಪಯ್ಯನ ಮಾತಿಗೆ ಉತ್ತರ ಕೊಡ ಲಿಲ್ಲ. ಜನಾರ್ಧನಯ್ಯನನ್ನು ಸಾಕಿದ್ದವನು ತಾನಾಗಿದ್ದರೂ ಎಷ್ಟಾದರೂ ತಾನು ಚಿಕ್ಕಪ್ಪ. ತಂದೆ ಇದ್ದೂ ತನ್ನ ಬಳಿ ಜನಾರ್ಧನ ಬೆಳೆಯುವ ಪ್ರಸಂಗ ಬಂದ ಅವನ ಬಾಳಿನ ಗೋಳಿಗೆ ಚಿಕ್ಕಪ್ಪ ಮರುಗುವ.

ಜನಾರ್ಧನ ಜನಿಸಿದ ಮೂರು ತಿಂಗಳಿಗೆ ಬಾಣಂತಿ ಕ್ಷಯದಿಂದ ತಾಯಿ ತೀರಿಕೊಂಡಿದ್ದಳು. ತಬ್ಬಲಿಯನ್ನು ಬೆಳೆಸುವ ಭಾರ, ಮಕ್ಕಳಿಲ್ಲದ ರಂಗಣ್ಣನ ಹೆಂಡತಿ ಗೌರಮ್ಮನ ಮೇಲೆ ಬಿದ್ದಿತ್ತು. ಜನಾರ್ಧನನ ಚಿಕ್ಕಪ್ಪ ರಂಗಣ್ಣ ಮಗನಂತೆಯೇ ಅವನನ್ನು ಬೆಳೆಸಿ ದೊಡ್ಡವನನ್ನಾಗಿ ಮಾಡಿದ್ದರು. ಎಳೆಯ ಬತ್ತಿಯಿಂದ ಹರೆಯದ ಹುಡುಗನಾಗಿ ಬೆಳೆದ ಜನಾರ್ಧನಯ್ಯನನ್ನು ನೋಡಿ ಇಬ್ಬರೂ ಹಿಗ್ಗಿದ್ದರು.

ಜನಾರ್ಧನಯ್ಯನ ತಂದೆ, ಹೆಂಡತಿ ತೀರಿಕೊಂಡಮೇಲೆ ಗೌಡುಗೆರೆಯಲ್ಲಿ ಗೌಳಿಗರ ನಂಜಮ್ಮನನ್ನು ಕೂಡಿಕೊಂಡು ಇದ್ದುಬಿಟ್ಟಿದ್ದ. ಅಣ್ಣನ ಈ ವರ್ತನೆ ರಂಗಣ್ಣನವರನ್ನು ತುಂಬಾ ನೊಂದಿಸಿತ್ತು. ಗೌಡುಗೆರೆಯಲ್ಲಿ ಇದ್ದ ಜಮೀನಿನ ಉತ್ಪನ್ನವನ್ನು ಕೊಂಚವಾದರೂ ರಂಗಣ್ಣನಿಗೆ ಕೊಡದೆ ನಂಜಮ್ಮನಿಗಾಗಿ ವಿಪರೀತ ಖರ್ಚುಮಾಡಿ ಮಗನ ಅಭ್ಯುದಯದ ಕಡೆಗೂ ಮನಸ್ಸು ಕೊಡದವ ನನ್ನು ಅಣ್ಣನೆಂದು ಹೇಳಿಕೊಳ್ಳಲು ನಾಚಿಕೆಪಡುತ್ತಿದ್ದರು.

ಇದೇ ಚಿಂತೆಯ ಜೊತೆಗೆ, ತನಗೆ ಮಕ್ಕಳಿಲ್ಲದಾಯಿತಲ್ಲಾ ಎನ್ನುವ ಹೆಂಡತಿಯ ಚಿಂತೆ, ಮತ್ತೆ ಅಸ್ತಮಾದ ಖಾಯಿಲೆ. ಅಸ್ತಮ ರಂಗಣ್ಣನವರನ್ನು ಬಹುಬೇಗ ಮುದುಕರನ್ನಾಗಿ ಮಾಡಿತ್ತು. ಮಾಡುತ್ತಿದ್ದುದು ಪ್ಲೀಡರ್ ಲಾಯರಿ ಕೆಲಸ. ಒಳ್ಳೇಕಾಲ, ಚೆನ್ನಾಗಿ ನಡೆದ ಪ್ಲೀಡರ್ ಲಾಯರಿಕೆಯಲ್ಲಿ ಪುಟ್ಟ

ಗಂಟೂ ಮಾಡಿಕೊಂಡಿದ್ದರು. ಈ ಖಾಯಿಲೆ ಕಸಾಲೆಯಿಂದಾಗಿ ಆ ಗಂಟೂ ಕರಗಿತ್ತು. ಜನಾರ್ಧನನ ಓದಿಗೂ ಕೊಂಚ ವೆಚ್ಚವಾಗಿತ್ತು. ಜನಾರ್ಧನನಿಗೆ ಕಚೇರಿಯಲ್ಲಿ ಗುಮಾಸ್ತೆ ಸಿಕ್ಕಮೇಲೆ ಅವನೂ ಸಂಸಾರದ ಖರ್ಚು ವಹಿಸಿ ಕೊಂಡು ಹೋಗುತ್ತಿದ್ದ.

ಜನಾರ್ಧನಯ್ಯನಿಗೆ ನಿಜಕ್ಕೂ ಒಳ್ಳೆ ಹೆಣ್ಣುಗಳು ಬರದಿರಲು ಅವನ ತಂದೆಯ ಅಕ್ರಮ ಜೀವನವೇ ಕಾರಣವಾಗಿತ್ತು. ಒಂದಲ್ಲ ಒಂದು ಕಾರಣ ದಿಂದ ಮದುವೆಯಾಗದ ಹೆಣ್ಣುಗಳೇ ಅವನ ಪಾಲಿಗೆ ಬರುತ್ತಿದ್ದವು. ರಂಗಣ್ಣ ಒಳ್ಳೆ ಮನೆತನ, ಸಂಸಾರಿಗಳು ಎಂಬ ದೊಡ್ಡ ಮಾತು ತೆಗೆದಾಗ ತಾನು ಒಳ್ಳೆ ಮನೆತನದವನೆ? ತನ್ನ ತಂದೆ ಅನ್ಯಜಾತಿಯವಳೊಂದಿಗೆ ಕೂಡಿ ಬಾಳ್ವೆ ನಡೆಸುತ್ತಿರುವುದು ಯಾವ ದೊಡ್ಡ ಮನೆತನಸ್ಥರ ಕುರುಹು? ಇಂಥಾ ಮನೆಗೆ ಒಳ್ಳೆ ಹೆಣ್ಣು ಖಂಡಿತ ಬರುವುದಿಲ್ಲವೆಂದು ಅವನು ಚಿಂತಿಸಿದ್ದೂ ಉಂಟು. ಯಾರ ಪಾಪ ಯಾರು ಅನುಭವಿಸಬೇಕು! ತಾಯಿಯನ್ನೇ ಕಾಣದ ತಬ್ಬಲಿ. ಚಿಕ್ಕಮ್ಮ ಚಿಕ್ಕಪ್ಪನ ಮಡಿಲಲ್ಲಿ ಬೆಳೆದ ಜನಾರ್ಧನ ಸಮಾಜದಲ್ಲಿ ತನಗೆ ಯೋಗ್ಯ ವರನಾಗಲು ತನ್ನ ತಂದೆಯ ನಡತೆ ಅಡ್ಡಬರುತ್ತಿದ್ದುದು ಅವನನ್ನು ಅನೇಕವೇಳೆ ದುಃಖಕ್ಕೀಡುಮಾಡಿತ್ತು.

ತಿಪ್ಪಯ್ಯ ಇದೆಲ್ಲವನ್ನು ಬಲ್ಲವನು. ತಂದೆ ಹಾಗಾದರೆ ಮಗ ಮಾಡಿದ ಅಪರಾಧವೇನು? ಜನ್ನೂವಿಗೆ ಒಳ್ಳೆ ಹುಡುಗಿಯನ್ನ ತಂದು ಮದುವೆಮಾಡಿ ಅವನನ್ನು ಎಲ್ಲರಂತೆ ಸಂಸಾರಿಯಾಗಿ ಮಾಡುವ ತುಂಬು ಹಂಬಲ ಅವನಿಗೆ. ಎಲ್ಲಾ ಸರಿಯಾಗಿದ್ದವರಿಗೆ ಕಂಕಣ ಕೂಡಿಬರುವುದು ದೊಡ್ಡ ವಿಷಯವಲ್ಲ. ಇಂತಹವರು ಸುಖವಾಗಿರುವುದು ಮುಖ್ಯ. ಪಾಪ, ಜನಾರ್ಧನ ಯಾವ ಪಾಪ ಕಂಡವನು? ಒಳ್ಳೆ ಹುಡುಗ; ಕೆಲಸವಿದೆ; ಇಂಥವನಿಗೆ ಹೆಣ್ಣು ಕೊಡಲು, ಬೆಳೆಸಿ ದೊಡ್ಡವನನ್ನು ಮಾಡಿದ ಚಿಕ್ಕಪ್ಪ, ಚಿಕ್ಕಮ್ಮನವರ ಸದ್ಗುಣ ಸಹೃದಯತೆಗಳನ್ನು ಗೌಣವಾಗಿರಿಸಿ, ಎಲ್ಲೋ ಹಳ್ಳಿಯಲ್ಲಿ ಯಾರಿಗೂ ಕಾಣ ದಂತೆ ಅನೇಕ ವರ್ಷಗಳಿಂದ ಮಗನ ಮುಖವನ್ನೂ ನೋಡದ ತಂದೆಯ ದೋಷವನ್ನು ಪ್ರಧಾನವಾಗಿ ಮಾಡಿ ತಮ್ಮ ಮನೆಯ ಹೆಣ್ಣು ಕೊಡಲು ಹಿಂಜ ರಿಯುವವರನ್ನು ಕಂಡು ಅವರ ಅಜ್ಞಾನಕ್ಕೆ ತಿಪ್ಪಯ್ಯ ನೊಂದುಕೊಳ್ಳುವನು.

ಮೇಲಾಗಿ ಅವರಪ್ಪ ಮಾಡಿದ ದೊಡ್ಡ ಅಪರಾಧವಾದರೂ ಏನು? ಚಿಕ್ಕ ವಯಸ್ಸಿನಲ್ಲಿ ಹೆಂಡತಿಯನ್ನು ಕಳೆದುಕೊಂಡಿದ್ದ; ಗೌಳಿಗರ ನಂಜಿ ಒಲಿದು ಬಂದಳು, ಅವಳೊಡನೇ ಇದ್ದುಬಿಟ್ಟಿದ್ದ ಒಂದು ಯೋಚನೆಯೂ ಇಲ್ಲದೆ. ಮೂರು ತಿಂಗಳ ಮಗು ಜನಾರ್ಧನ ತಮ್ಮನ ಮನೆಯಲ್ಲಿ ಬೆಳೆಯುತ್ತಿದ್ದ. ದಿನಗಳುರುಳಿದಂತೆ ಅಪ್ಪ ಮಗನ ಸಂಪರ್ಕಗಳು ಕೂಡಾ ಅಪರೂಪವಾಯಿತು. ಹಡೆದ ತಂದೆಯೆಂಬ ಸಂಬಂಧ ಹೊರತಾಗಿ ಮಗನೆಂಬ ಮಮತೆ, ತನ್ನ ಕೂಸೆಂಬ ಕಕಲಾತಿ ಎಂದಿಗೂ ಅವನಲ್ಲಿ ಬೆಳೆದು ಬರಲಿಲ್ಲ.

ನಂಜಿಯಲ್ಲಿ ಅಮರಪ್ರೇಮವನ್ನು ಕಂಡು, ಬೆಳೆದ ಜವಸ ಹೊಟ್ಟೆ ತುಂಬಿಸುತ್ತಿತ್ತು; ಇದ್ದ ಮನೆ ನೆರೆಕೊಟ್ಟಿತ್ತು; ನಂಜಿ ತನ್ನಾತ್ಮವನ್ನು ಎರೆದು ಸ್ವರ್ಗವನ್ನೇ ಭೂಮಿಗೆ ತಂದಿಳಿಸಿದ ಪುಣ್ಯ ಕಟ್ಟಿಕೊಂಡಿದ್ದಳು. ತಿನ್ನಲು ತಿನುಸು, ಇರಲು ಮನೆ, ಮನ ಮೆಚ್ಚಿದ ನಂಜಿ ಇವು ಮೂರು ಇರಲು ಅವನಿಗೆ ಕಳೆದುಹೋದ ಹೆಂಡತಿಯ ವ್ಯಥೆ, ಅವಳೊಡನೆ ನಡೆಸಿದ ಜೀವನದ ಕಹಿಯನ್ನು ನೆನಪಿಗೆ ತರುವ ಜನಾರ್ಧನನ್ನನ್ನು ನೋಡದಿರುವುದೇ ಸರಿ ಎಂದು ಅವನ ವಾದ. "ಎಷ್ಟಾದರೂ ನಿಮ್ಮ ಮಗನಲ್ಲವೆ? ಮಗುವಿಗೆ ಏನಾಗಬೇಕು, ಬೇಡ ಕೇಳಬ್ಯಾಡವಾ?" ಎಂದು ನಂಜಿ ಹೇಳಿದಾಗ ಅಷ್ಟೊ ಇಷ್ಟೊ ಮಗನಿಗೆ ಹಣ ಕಳಿಸಿದರೆ ಕಳಿಸಿದ, ಇಲ್ಲದಿದ್ದರೆ ಇಲ್ಲ. ಜನಾರ್ಧನನ ಮೇಲೆ ನಂಜಿಗೆ ಅಪಾರ ಪ್ರೀತಿ. ತನ್ನ ದೇವರ ಕೂಸೆಂಬ ಮಮತೆ. ಆದರೆ ನಂಜಿಯನ್ನು ಕಂಡರೆ ಜನಾರ್ಧನನಿಗಾಗದು. ತನ್ನ ತಂದೆಯನ್ನು ತನ್ನ ವೈಯ್ಯಮೋಹದ ಮೋಡಿಗೆ ಮರುಳು ಮಾಡಿದ ಮಾಯಾವಿ ಎಂಬ ಭಾವನೆ. ತನ್ನ ಸಂಬಂಧಿಗಳ, ಜನರ ನಡುವೆ ಎಲ್ಲರಂತೆ ಇರಲು ಆಗದೆ ಇಂಥವನ ಮಗ, ಅವನಿಗೆ ಮಾನವಂತರ ಮಗಳನ್ನು ಹೇಗೆ ಕೊಡುವುದು? ಎಂದಾಡಿಸಿಕೊಂಡು ತಾನು ತಲೆ ತಗ್ಗಿಸಿ ನಡೆಯುವ ಸಂದಿಗ್ಧ ಪರಿಸ್ಥಿತಿಗೆ ಒಳಗಾದದ್ದಕ್ಕೆ ನಂಜಿಯೇ ಕಾರಣವೆಂದು ಅವನ ವಾದ. ಒಮ್ಮೊಮ್ಮೆ ರಂಗಣ್ಣನವರೇ ನನ್ನ ತಂದೆ, ಗೌರಮ್ಮನವರೇ ತಾಯಿ, ನೆನಪಿಲ್ಲದ ಹಡೆದಮ್ಮ, ತನ್ನನ್ನು ಬೊಟ್ಟುಮಾಡಿ ತೋರಿಸುವಂಥ ಸಮಸ್ಯೆಗೆ ಸಿಲುಕಿಸಿ ಎಲ್ಲೋ ಇರುವ ತಂದೆ ಇವರು ಎಲ್ಲಿಯ ಸಂಬಂಧ ಎಂದುಕೊಳ್ಳುವನು.

ಪ್ರಸ್ತುತ ಪರಿಸ್ಥಿತಿಯಲ್ಲಿ ಜನಾರ್ಧನಯ್ಯನನ್ನು ಎಲ್ಲರಂತೆ ಸಂಸಾರಿಯನ್ನಾಗಿ ಮಾಡಬಯಸಿ ಅವನಿಗೊಂದು ಒಳ್ಳೆ ಹೆಣ್ಣು ದೊರಕಿಸುವ ಸಾಹಸದಲ್ಲಿ ತೊಡಗಿದ ತಿಪ್ಪಯ್ಯನಿಗೆ ಸುಶೀಲೆಯ ಸಂಬಂಧ ಬಹಳ ಉತ್ತಮವಾಗಿ ಕಂಡಿತ್ತು. ತಾನು ರಂಗಣ್ಣನವರಿಗೆ "ಅವನನ್ನು ನೀವು ಒಪ್ಪಿಸಬೇಕು" ಎಂದು ಹೇಳಿದಾಗ ಮಾತೇ ಆಡದ ರಂಗಣ್ಣನನ್ನು ತಿಪ್ಪಯ್ಯನೇ ಪ್ರಶ್ನಿಸಿದ

"ಯಾಕೆ ರಂಗಣ್ಣನೋರೆ, ಮಾತೇ ಆಡಲೊಲ್ಲೆ ಅಂತಿರೇನು ?"

"ಏನು ಮಾತಾಡಲಿ ತಿಪ್ಪಯ್ಯ ? ಎಲ್ಲಾ ತಿಳಿದವನು ನೀನು; ನನ್ನ ಕೈಯಿ ಬರಿದು, ಅವರಪ್ಪನದಂತೂ ನಿನಗೆ ತಿಳಿದದ್ದೇ ಇದೆ. ನಾನೇ ನಾಂದಿ ಇಟ್ಕೋಬೇಕಾಗುತ್ತೆ. ಹುಡುಗಿ ಕಡೆಯವರು ಬಡವರೂಂತ ಆಗಲೇ ಹೇಳಿ ಬಿಟ್ಟಿದ್ದೀಯ. ಹೇಗೆ ಮದುವೆ ನಡೆಯುತ್ತೆನ್ನೋದೆ ಯೋಚನೆ. ಅವರಪ್ಪನಿಗೂ ಒಂದು ಮಾತು ತಿಳಿಸಬೇಕು. ಇದೆಲ್ಲಕ್ಕಿಂತ ದೊಡ್ಡ ಯೋಚನೇಂದ್ರೆ, ನಮ್ಮಣ್ಣನ ವಿಷಯ ಅವರಿಂದ ಮುಚ್ಚಿಟ್ಟು ಕೆಲಸ ಮಾಡೋದು ನನಗೆ ಇಷ್ಟವಿಲ್ಲ"

"ಸಾವಿರ ಸುಳ್ಳು, ಹೇಳಿ ಲಗ್ನ ಮಾಡ್ಸೋದೂಂತ ಗೊತ್ತಿಲ್ಲವೆ? ಮೇಲಾಗಿ ಅವರು ಇದನ್ನೆಲ್ಲಾ ನೋಡೋವರಲ್ಲ. ಹುಡುಗ ಯೋಗ್ಯವಾಗಿ ಕೆಲಸ ಮಾಡ್ಕೊಂಡಿದ್ದರೆ ಸರಿ ಅವರಿಗೆ"

"ಇರೋ ವಿಷಯ ಹೇಳಿದೆ. ಮುಂದೆ ನಿಂತು ಮದುವೆ ಮಾಡಿಸಿದ ನಿನಗೂ ಒಂದು ಸೊಟ್ಟ ಮಾತು ಬರಬಾರದು; ಹಿರಿಯ ಅನ್ನಿಸಿಕೊಂಡ ನನಗೂ ಒಂದು ಕೆಟ್ಟ ಮಾತು ಬರಬಾರದು ಅಲ್ಲವೆ ?"

ಎಂದೆನ್ನುವ ಹೊತ್ತಿಗೆ ಇನ್ನೊಂದು ವರಸೆ ಕೆಮ್ಮು ಧಾರಾಕಾರವಾಗಿ ಹರಿದು ಬಂತು. ಅಗ್ಗಿಷ್ಟಿಕೆಯಲ್ಲಿ ಕೆಂಡ ಮಾಡಿಕೊಂಡು ಗೌರಮ್ಮ ಬಂದರು. ಯಜಮಾನರ ಮುಂದೆ, ಅಗ್ಗಿಷ್ಟಿಗೆ ಇಟ್ಟು, ಯಾವುದೋ ಪುಡಿ ಬೆಂಕಿಗೆ ಹಾಕಿ ಅದರಲ್ಲಿಂದ ಹೊರಟ ಹೊಗೆಯನ್ನು ಮುಖಕ್ಕೆ ಬಡಿಸಿಕೊಳ್ಳುತ್ತಾ ಕುಳಿತರು ರಂಗಣ್ಣನವರು. ಟೌಲು ಹೆಗಲಿಗೆ ಹಾಕಿಕೊಂಡು ತಲೆಗೂದಲ ಗಂಟನ್ನು ಕಟ್ಟಿಕೊಳುತ್ತಾ, ಜನಾರ್ಧನಯ್ಯನೂ ಹೊರಕ್ಕೆ ಬಂದು ಚಿಕ್ಕಪ್ಪನ ಬದಿಯಲ್ಲಿ ಕುಳಿತು ಜೇಬಿನಿಂದ ಮಡಿಸಿದ ಜಾತಕದ ಪ್ರತಿ ತೆಗೆದು ತಿಪ್ಪಯ್ಯನ

ಕೈಗೆ ಕೊಟ್ಟ. ಅದನ್ನು ತನ್ನ ಜೇಬಿಗೆ ಸೇರಿಸುತ್ತಾ ತಿಪ್ಪಯ್ಯ ಹೊರಡಲು ಎದ್ದು ನಿಂತ. ಗೌರಮ್ಮನೇ ಪ್ರಾರಂಭಿಸಿದಳು

"ಇಲ್ಲೆ ಊಟಕ್ಕೆ ಏಳೂಂತ ಹೇಳಬಾರದೇನೂ ಜನ್ನೂ ?"

"ನನ್ನ ತಂಗಿ ಕಾದಿರ್ತಾಳೆ ಮನೇಲಿ. ಬೇಡ, ಸುಮ್ಮನಿರಿ"

"ಎಲ್ಲಾ ಫೋಂಗಿ ಚಿಕ್ಕಮ್ಮ. ಇವನ ಮಾತು ನೀನು ನಂಬಬೇಡ. ಮೋಟಾರಿನಿಂದ ಇಳಿದವನು ನೆಟ್ಟಗೆ ಕಚೇರಿಗೆ ಬಂದ. ಅಲ್ಲಿಂದ ಇಲ್ಲಿಗೆ ಇಬ್ಬರೂ ಬಂದದ್ದು ಸರಿತಾನೆ! ಅಂದಮೇಲೆ ತಂಗಿ ಮನೆಗೆ ನೀನು ಬಂದ ಸುದ್ದಿ ಮುಟ್ಟಿಸಲಿಕ್ಕೆ ಯಾವಾಗ ಹೋಗಿದ್ದೆ ?"

"ಹ್ಹ ಹ್ಹ....ಕಚೇರಿ ನೌಕರನಪ್ಪ ಅವ. ಎಂಥಾ ಲಾಯರಿ ಹಿಡಿತದಲ್ಲಿ ನಿನ್ನ ಸಿಕ್ಕಹಾಕಿದ ನೋಡು"

"ಇಲ್ಲಪ್ಪಾ ನೀನು ಮನೆಗೆ ಹೋಗಿ ಇಷ್ಟುಹೊತ್ತಿನಲ್ಲಿ ಕೂತರೆ ಇನ್ನೂ ಅಡಿಗೆಗಿಟ್ಟು ಮಾಡಿಹಾಕುವ ತೊಂದರೆ ನಿನ್ನ ತಂಗಿಗೆ ಇರೋಲ್ಲವೆ ?" ಎಂದು ಕೆಮ್ಮುತ್ತಲೇ ರಂಗಣ್ಣ ಹೇಳಿದರು.

"ಅಷ್ಟೇ ಅಲ್ಲಾಂದರೆ, ಈಗ ನಾನು ಮಾಡಲಿಕ್ಕಿಟ್ಟಿರುವ ಅನ್ನ ಬೇರೆ ದಂಡವಾಗುತ್ತೆ" ಎಂದಳು ಗೌರಮ್ಮ.

"ನೋಡಿದೆಯಾ ಚಿಕ್ಕಮ್ಮನ ಜಾಣತನ? ಆಗಲೆ ಅಡಿಗೆ ಮಾಡಲಿಕ್ಕೆ ಇಟ್ಟುಬಿಟ್ಟಿದ್ದಾಳೆ, ನೀನು ಇಲ್ಲಿಂದ ಹೊರಡಲಿಕ್ಕೆ ಸಾಧ್ಯವೇ ಇಲ್ಲ."

"ಸರಿ, ಯಾವ ಹೊತ್ತಿನಲ್ಲಿ ಯಾರ ಊಟ ಎಲ್ಲಿರುತ್ತೇಂತ ಹೇಳಲು ಹೇಗೆ ಸಾಧ್ಯ? ಶ್ರೀಹರಿ ಪ್ರೀತಿ ನಡೆಯಲಿ"

"ಈ ಹೊತ್ತಿನಲ್ಲಿ ಇವತ್ತು ನಿನ್ನ ಊಟ ಇಲ್ಲೇ ಎಂದು ನಾನು ಈಗ ಹೇಳಲೇನು ?"

ಎಂಬ ಜನಾರ್ಧನನ ಮಾತಿಗೆ ಎಲ್ಲರೂ ನಕ್ಕರು. ತಿಪ್ಪಯ್ಯ ಎದ್ದು ಕೈಕಾಲು ತೊಳೆದುಕೊಂಡು ಸಂಧ್ಯಾವಂದನೆಯ ಶಾಸ್ತ್ರ ಮುಗಿಸಿ ಆ ಹರಟೆ ಈ ಮಾತುಗಳಲ್ಲಿ ಹೊತ್ತು ಎಂಟೂವರೆಯಾಗಿತ್ತು. ಸೊಗಸಾದ ಹಲಸಂದಿ ಕಾಳಿನ ಹುಳಿ ಬೆಳಗಿನದು ಮಿಕ್ಕಿತ್ತು. ಆರಿಹೋದಮೇಲೆ ಅದರ ರುಚಿ ಇಮ್ಮಡಿಸಿತ್ತು. ಬಿಸಿ ಅನ್ನ, ಹುಣುಸೆಕಾಯಿ ತೊಕ್ಕಿಗೆ ಒಗ್ಗರಣೆ ಹಾಕಿ ಮೊಸರು ಸೇರಿಸಿದ ಅನ್ನ, ಒಂದು ವರಸೆ ಮಜ್ಜಿಗೆ ಅನ್ನ ಕಂಠಪೂರ್ತ ಹೊಡೆದು, ಈ ಹೊಟ್ಟೆ

ಹೊತ್ತುಕೊಂಡು ಅವೇಳೆಯಲ್ಲಿ ತಂಗಿ ಮನೆಗೆ ಹೋಗದೆ ಅಲ್ಲೇ ಮಲಗಿದ್ದು ಮರುದಿನ ಮುಂಜಾನೆ ಹೊರಡುವುದೆಂದು ನಿಶ್ಚಯಿಸಿದ.

ಹೊರಗಿನ ಕಟ್ಟೆಯ ಮೇಲೆ ಜನಾರ್ಧನ ತನಗೆ ಮತ್ತು ತಿಪ್ಪಯ್ಯನಿಗೆ ಹಾಸಿಗೆ ತಯಾರು ಮಾಡಿದ. ರಂಗಣ್ಣ ಆಗಲೇ ಹೊದ್ದು ಮಲಗಿದ್ದ. ಜನಾರ್ಧನ, ತಿಪ್ಪಯ್ಯ ಬಹಳಹೊತ್ತು ಮಾತಾಡುತ್ತಿದ್ದರು. ತಿಪ್ಪಯ್ಯನಿಂದ ಸುಶೀಲೆಯ ವಿಷಯ ಮತ್ತು ಅವಳ ತಾಯಿ ಪಟ್ಟ ಪಾಡಿನ ವಿಷಯವನ್ನು ಕೇಳಿದ ಮೇಲೆ ತನ್ನ ಅಂತಸ್ತಿಗೆ ತಕ್ಕವಳು ಸುಶೀಲ ಎಂದುಕೊಂಡ. ಕಡೆಗೆ ಜಾತಕ ನೋಡಿಸಿಯಾದ ಮೇಲೆ ಒಂದುದಿನ ಶಿವಮೊಗ್ಗೆಗೆ ಹೋಗಿ ಹುಡುಗಿಯನ್ನು ನೋಡಿ ಮುಂದಿನ ವಿಷಯಗಳ ಇತ್ಯರ್ಥವಾಗಿತ್ತು.

ಮರುದಿನ ಹಿರೇಹಳ್ಳಿಗೆ ಹೊರಟು ನೇರವಾಗಿ ನಾಗಾಜೋಯಿಸರ ಮನೆಗೆ ಹೋದಾಗ ಮಧ್ಯಾಹ್ನವಾಗಿತ್ತು. ಜೋಯಿಸರು ಬಾತ ಕಾಲಿಗೆ ಕಾವು ಕೊಟ್ಟುಕೊಳ್ಳುತ್ತಿದ್ದರು. ಮೂಲೆಯಲ್ಲಿ ರಾಜೀವಿ ಮತ್ತು ಅವಳ ಸ್ನೇಹಿತೆ ಗೊಟಗೋಣಿ ಮನೆ ಆಟ ಆಡುತ್ತಿದ್ದರು. ತಿಪ್ಪಯ್ಯ ಬಂದದ್ದು ನೋಡಿ ಜೋಯಿಸರು "ಬಾ ತಿಪ್ಪಯ್ಯ, ಯಾವಾಗ ಬಂದೆ?" ಎಂದು ಆಹ್ವಾನಿಸಿದರು.

"ಈಗತಾನೆ ಬಂದೆ. ಈ ಜಾತಕಗಳನ್ನ ಕೊಟ್ಟು ಹೋಗೋಣಾಂತ ಬಂದಿದ್ದೇ. ಅಳಿಯಂದಿರು ಚೆನ್ನಾಗಿದ್ದಾರೆ" ಎಂದಾಗ ರಾಜೀವಿಯ ಕೆನ್ನೆಗಳೆರಡೂ ಟೊಮೆಟೋ ಹಣ್ಣಿನಂತಾದವು. ತಲೆತಗ್ಗಿಸಿ ಸೆರಗು ಸರಿಯಾಗಿ ಹೊದ್ದುಕೊಂಡಳು. "ಎಂದು ಅಮ್ಮಾ ಅವರು ಮನೆಗೆ ಬರ್‍ತಾರೇಂತ ಕಾದುಕೊಂಡಿದ್ದಾರೆ" ಎಂದು ಹೇಳಿದಾಗ ಆಟವನ್ನು ಅಲ್ಲಿಗೇ ಬಿಟ್ಟು ಅಡಿಗೆ ಮನೆ ಸೇರಿಬಿಟ್ಟಳು. ತಿಪ್ಪಯ್ಯ ನಾಗರಾಜ ಜೋಯಿಸರ ಬದಿಗೇ ಕುಳಿತ.

"ಇದ್ಯಾವುದು ಜಾತಕಗಳು? ಯಾವುದಾದರೂ ನೀನು ಹಚ್ಚಿಕೊಂಡೇ ಇರ್‍ತೀಯ"

"ನಿಮ್ಮ ಸುಬ್ಬರಾಯನ ಇಷ್ಟಮಿತ್ರರೂಂತ್ಲೆ ಅನ್ನಬಹುದು"

"ಅಂದರೆ?" ಎಂದು ಜೋಯಿಸರು ಮುಖವನ್ನು ಪ್ರಶ್ನಾರ್ಥಕ ಚಿಹ್ನೆಯಂತೆ ಮಾಡಿದಾಗ, ಅಳಿಯನ ಈಜುವ ಪ್ರಾವೀಣ್ಯ ಮತ್ತು ತುಂಬಿದ ಹೊಳೆಯಲ್ಲಿ ಸುಶೀಲೆಯನ್ನು ಅವನು ಬದುಕಿಸಿದ ವಿಚಾರವನ್ನು ಬಣ್ಣಿಸಿ

ಹೇಳಿದ. ಅಡಿಗೆ ಮನೆಯ ಬಾಗಿಲ ಬಳಿ ತಾಯಿ ಮಗಳಿಬ್ಬರೂ ಕುಳಿತಿದ್ದರು. ಅದನ್ನು ಕೇಳುತ್ತಿದ್ದ ರಾಜೀವಿ, ತನ್ನ ಗಂಡನ ಬಗ್ಗೆ ಹೆಮ್ಮೆ ತಾಳಿದಳು. ಅವಳ ತಾಯಿ ಅಳಿಯನ ಸಾಹಸಕ್ಕೆ ಮರುಳಾದಳು. ಮರುಕ್ಷಣವೇ ಈ ಈಜುವುದು ತುಂಬಾ ಅಪಾಯದ ಆಟವೆಂದು ಅವಳ ಅಳಿಯದೇವರ ಹುಚ್ಚಿಗೆ ಹೆದರಿದಳು. ನಾಗರಾಜ ಜೋಯಿಸರೂ ಸುಮಾರು ಈಜುಗಾರ ರಾಗಿದ್ದು ಅಳಿಯನ ಸಾಮರ್ಥ್ಯ ಮೆಚ್ಚಿಕೊಂಡರು. ಹಾಗೇ ಮುಂದುವರಿದು, ಸುಶೀಲೆಯ ತಾಯಿಯ ಕಷ್ಟದ ಜೀವನವನ್ನು ಸೂಕ್ಷ್ಮವಾಗಿ ಹೇಳಿದರು. ಮತ್ತೆ ಜನಾರ್ಧನನ ವಿಚಾರವನ್ನೂ ಹೇಳಿ

"ಈ ಒಂದು ಮದುವೆ ಹೊಂದಿದರೆ ನನಗೆ ಸಮಾಧಾನ" ಎಂದರು.

"ಹಾಗಾದರೆ ನಿನಗೆ ಇನ್ನು ಯಾವಾಗಬೇಕು–ನಿಧಾನವಾಗಿ ನೋಡ ಬಹುದೋ ?"

"ಅಂಥಾದೇನೂ ಅವಸರವಿಲ್ಲ; ಮತ್ತೆ ನಾನು ಶಿವಮೊಗ್ಗಿಗೆ ಹೋಗೋದು ಅಮಾವಾಸ್ಯೆ ಆದಮೇಲೆ. ಇನ್ನೂ ಹನ್ನೆರಡು ಹದಿಮೂರು ದಿನವಿದೆಯಲ್ಲ, ನಿಧಾನವಾಗೇ ನೋಡಿ"

"ಶುಭಮಸ್ತು....ಇನ್ನು ಸುಬ್ಬರಾಯರು ಏನೂ ಹೇಳಲಿಲ್ಲವೆ ?"

"ಏನೂ ಹೇಳಲಿಲ್ಲ. ಅವನ ಭಾವ ಶ್ರೀಧರಮೂರ್ತಿನ್ನ ಇನ್ಯಾವುದೋ ವಿಚಾರಕ್ಕೆ ನೋಡಬೇಕಾಗಿದ್ದು ನೋಡಿದಾಗ ಅವನ ಸಾಹೇಬರು ಪೋಸ್ಟ್ ಮಾಸ್ಟರಿಗೂ ಶಿವಮೊಗ್ಗಾ ಡಿಪ್ಟಿ ಕಮಿಷನರ್ ಸಾಹೇಬರಿಗೂ ಸ್ನೇಹವಂತೆ, ಯಾವುದಾದರೂ ತಾಲ್ಲೋಕು ಆಫೀಸು ಕೆಲಸ ಕೊಡಿಸುವುದೇನೂ ಕಷ್ಟವಾಗ ಲಾರದೂಂತ ಹೇಳಿದ; ನೋಡಬೇಕು ಏನಾಗುತ್ತೊ"

"ಈ ವಿಷಯವೇನೋ ಸುಬ್ಬರಾಯರು ಮೊನ್ನಿನ ಕಾಗದದಲ್ಲಿ ಬರೆ ದಿದ್ದರು. ಮುಂದೆ ಓದಿದ್ದರೆ ಚೆನ್ನಾಗಿರ್ತಿತ್ತಲ್ಲಾ"

"ಓದಿಸು, ಓದದೇ ಏನುಮಾಡ್ತಾನೆ ?"

"ನಾನು ಓದಿಸೋ ಸ್ಥಿತೀಲಿ ಇದ್ದಿದ್ದರೆ ಯೋಚನೆಯೇ ಮಾಡ್ತಿರಲಿಲ್ಲಾ ನ್ನೋದು ನಿನಗೆ ಗೊತ್ತಿಲ್ಲವೆ ?"

"ನೀನು ಓದಿಸೋ ಸ್ಥಿತೀಲಿಲ್ಲ, ಅವರಣ್ಣ ಇವನೂ ಬರ್‍ತಾ ಬರ್‍ತಾ ವಾಲಿ ಸುಗ್ರೀವರಾಗ್ತಾ ಇದ್ದಾರೆ. ಇನ್ನೂ ಭಾವ ಗುಮಾಸ್ತೆ ಕೆಲಸ ಕೊಡಿಸದೆ ಇನ್ನೇನು ಮಾಡಬೇಕು ? "

ತಿಪ್ಪಯ್ಯನ ಈ ಮಾತು ಅಭಿಮಾನ ಪೂರ್ವಕವಾಗಿ ಬಂದದ್ದು ನಿಜ. ಆದರೆ ಅಳಿಯನ ಅಭ್ಯುದಯಕ್ಕೆ ಏನೂ ಮಾಡಲಾಗದ ತಮ್ಮ ಅಸಹಾಯಕ ಪರಿಸ್ಥಿತಿಗೆ ಜೋಯಿಸರು ಏನುಮಾಡಲೂ ಸಾಧ್ಯವಿರಲಿಲ್ಲ. ಇತ್ತೀಚೆಗಂತೂ ಲೇವಾದೇವಿಯಲ್ಲಿ ನಂಬಿದ ಇಸಮುಗಳು ಒಂದಲ್ಲ ಒಂದು ಕಾರಣದಿಂದ ಹಣ ಕೊಡದೆ ಹೋಗಿದ್ದರು. ಗಂಡುಮಕ್ಕಳಲ್ಲಿ ಹಿರಿಯವನು ಜಗನ್ನಾಥ ತಂದೆಯನ್ನು ಅನುಕರಿಸಿದ್ದ. ಅವನು ಪೌರೋಹಿತ್ಯ ವಿದ್ಯೆಯನ್ನು ತಂದೆಯಿಂದಲೇ ಕಲಿಯುತ್ತಿದ್ದ. ಚಿಕ್ಕವನು ಅಚ್ಯುತ ಓದುತ್ತಿದ್ದ. ಇನ್ನೂ ರಾಜೀವಿಯ ನಿಷೇಕಪ್ರಸ್ತದ ಖರ್ಚು ಬೇರೆ ಕಾದಿತ್ತು. 'ದೇವರು ದೊಡ್ಡವನು, ಒಬ್ಬಳೇ ಮಗಳನ್ನು ಕೊಟ್ಟಿದ್ದಾನೆ' ಎಂದುಕೊಳ್ಳುವರು.

"ನಿಜವಾಗಿ ಅವನ ಜಾತಕ ಒಳ್ಳೆ ಜಾತಕ ತಿಪ್ಪಯ್ಯ. ಈಗ ಅವನಿಗೆ ಶನಿಯ ಕಾಟವಿದೆ. ಮುಂದೆ ಒಳ್ಳೆ ಪ್ರವರ್ಧಮಾನಕ್ಕೆ ಬರ್ತಾನೆ"

"ಜಾತಕ ಚೆನ್ನಾಗಿದೇಂತ ಜಪಮಾಲೆ ಹಿಡಿದು ಕೂತರೆ ಆಗುತ್ಯೆ? ನಮ್ಮ ಪ್ರಯತ್ನ ನಾವು ಮಾಡಬೇಡವೆ ? ''

"ಪ್ರಯತ್ನ ವಿದ್ದೇ ಇರುತ್ತಲ್ಲಾ—ಹಾಗಂತ ಸುಮ್ಮನೆಇರೂಂತ ಹೇಳೋಲ್ಲ. ಅವರವರ ಅದೃಷ್ಟ. ಸುಬ್ಬರಾಯನಿಗೆ ಈಗೇನು ಕಡಿಮೆಯಾಗಿಲ್ಲಾನ್ನು.... ಆದರೂ ನೀನು ಹೇಳೋಹಾಗೆ ಒಂದುಕಡೆ ಸುಭದ್ರವಾದ ನೌಕರಿ ಹಿಡಿದರೇ ಮೇಲೂಂತ ಕಾಣತ್ತೆ''

"....ಅವನು ಹಿಡಿದೂ ಹಿಡಿಯುತ್ತಾನೇನ್ನೋ ನಂಬಿಕೇನೂ ಇದೆ'' ಎಂದು ಹೇಳಿ ಹೊರಡಲು ಎದ್ದು ನಿಂತ. ಸಂಜೆಯಹೊತ್ತಿಗೆ ಅಮ್ಮೇನಹಳ್ಳಿ ಸೇರಬೇಕೆಂದು ಅವನ ಕಾರ್ಯಕ್ರಮವಿತ್ತು.

"ಎಲ್ಲಿಗೆ ಹೊರಟೆ ? "

"ಹಳ್ಳಿ ಬಿಟ್ಟು ವಾರವಾಯಿತು. ಮನೆಕಡೆ ಏನೇನಾಗಿದೆಯೋ ನೋಡ ಬೇಡವೆ ? "

"ಸಾಕಪ್ಪ ಕೂತುಕೊ. ನೀನು ಮನೆಕಡೆ ಕೊಡೊ ನಿಗ ನನಗೆ ಹೇಳ ಬೇಡ. ಸದಾ ಇನ್ನೊಬ್ಬರ ಮಕ್ಕಳ ಮದುವೆ ಚಿಂತೆ ಮತ್ತೆ ನಿನ್ನ ಕೋರ್ಟು ಕಚೇರಿಗಳ ವ್ಯವಹಾರದ ಚಿಂತೆ ಮಧ್ಯೆ ಮನೆ ಚಿಂತೆ ನಿನಗೆ ಇಲ್ಲೇ ಇಲ್ಲಾಂತ ನನಗೆ ಗೊತ್ತು"

"ಹಾಗಂದ್ರೆ ಹೇಗೆ? ಕೊಯ್ಲು ಕಾಲ ಬಂತು ಆಳು ಹೊಂದಿಸಬೇಕು; ಮನೇಲಿ ಅವಳಿಗೆ ಮೈಲಿ ಜೇರೆ ಸ್ವಸ್ಥವಿರಲಿಲ್ಲ"

"ನಿನ್ನ ಹೆಂಡ್ತಿ ಮಹರಾಯಿತಿ ಎಲ್ಲಾನೂ ಸುಸೂತ್ರವಾಗಿ ನಡೆಸಿ ಕೊಂಡು ಹೋಗ್ತಾಳೆ. ನಿನಗೆ ಗೊತ್ತಾಗೋಲ್ಲ ಅಷ್ಟೆ....ಕೂತುಕೋ–ಚೀಲ ಆ ಕಡೆ ಮೂಲೆಗಿಡು. ಆಗಲೆ ಮೂರು ಘಂಟೆ ಆಗ್ತ ಬಂತು. ಸೊಗಸಾದ ಗೊಜ್ಜವಲಕ್ಕಿ ಮಾಡಿಸ್ತೀನಿ, ತಿಂದು ರಾತ್ರಿ ಊಟಾನೂ ಮಾಡ್ಕೊಂಡು ನಾಳೆ ಬೆಳಗಿನಜಾವ ಎದ್ದು ಊರುಕಡೆ ಹೊರಡು. ನನ್ನ ಮಾತು ಕೇಳು"

"ಇಲ್ಲಿಗೆ ಬಂದಾಗಲೆಲ್ಲಾ ನೀವು ಹೀಗೇ ಮಾಡೋದು" ಎಂದೆನ್ನುತ್ತಾ ಚೀಲ ಗೋಡೆಯ ಗೂಟಕ್ಕೆ ತಗುಲಹಾಕಿ ಕೋಟು ಪೇಟ ತೆಗೆದಿಟ್ಟ.

ರಿಂದಮ್ಮನವರು ಅಡಿಗೆ ಮನೆಯಲ್ಲಿ ಗೊಜ್ಜವಲಕ್ಕಿಗೆ ಏರ್ಪಾಡು ಮಾಡತೊಡಗಿದರು. ರಾಜೀವಿ ಹಪ್ಪಳಸೊಂಡಿಗೆ ಡಬ್ಬ ಕೆಳಗಿಳಿಸಿದಳು.

ಕೈಕಾಲು ತೊಳೆದುಕೊಂಡು ಹಾಸಿದ ಚಾಪೆಯ ಮೇಲೆ ಹಾಗೇ ಉರುಳಿ ಕೊಂಡ ತಿಪ್ಪಯ್ಯನಿಗೆ ಸೊಗಸಾಗಿ ನಿದ್ರೆ ಹತ್ತಿತು. ಎಚ್ಚರವಾದಾಗ ಐದು ಘಂಟೆಯಾಗಿತ್ತು.

"ಸೊಗಸಾದ ನಿದ್ರೇನೇ ತೆಗೆದುಬಿಟ್ಟೆ"

"ನಡೆದ ಆಯಾಸ ಜೋಂಪು ಹತ್ತಿದಂತಾಯಿತು, ನೋಡಿದರೆ ಆಗಲೆ ಐದು ಘಂಟೆಯಾಗಿದೆ"

"ನಡಿನಡಿ, ಕೈಕಾಲು ತೊಳೆದುಕೊ ತಿಂಡಿ ತಯಾರಾಗಿ ಕಾದಿದೆ....ಲೇ ಎಲೆ ಹಾಕು, ತಿಪ್ಪಯ್ಯ ಎದ್ದ"

"ಒಳಗಡೆ ಹಾಕಲೋ ನಡುಮನೇಲಿ ಹಾಕಲೊ?"

"ಇಲ್ಲೇ ಹಾಕು ಆ ಕತ್ತಲಲ್ಲಿ ಯಾರು ತಿಂದಾರು"

"ರಾಜೀವಿ ನೀರು ಇಡಮ್ಮ" ಎಂದರು ರಿಂದಮ್ಮ.

ಒದ್ದೆಯಾದ ಮುಖ ಕೈಕಾಲನ್ನು ನೀರು ಪಂಚೆಯಿಂದ ಒರಸಿ ಕೊಳ್ಳುತ್ತಾ ತಿಪ್ಪಯ್ಯ ಬಂದಾಗ ಲಕ್ಷಣವಾಗಿ ಎಲೆ ತುಂಬಾ ಅವನ ಪ್ರೀತಿಯ ಗೊಜ್ಜವಲಕ್ಕಿ ಕೂತಿತ್ತು. ಜೊತೆಗೆ ಖಾರದ ಸೊಂಡಿಗೆ ಹಪ್ಪಳ.

"ನಾಗರಾಜಾ ಇವತ್ತು ಯಾವ ವಾರ ?"

"ಸರಿಹೋಯ್ತು! ಊರೂರು ಅಲೆತದಲ್ಲಿ ವಾರ ತಿಥಿ ಕೂಡ ಮರೆತು ಹೋಯ್ತೇನು ? ಇವತ್ತು ಶನಿವಾರ"

"ಹೌದು ಹೌದು, ಶನಿವಾರ. ಹೊನ್ನಾಳಿಗೆ ಬಂದದ್ದು ಗುರುವಾರ, ಶುಕ್ರ ವಾರ ಅಲ್ಲಿದ್ದೆ ಇವತ್ತು ಶನಿವಾರ ಅಂದಮೇಲೆ ರಾತ್ರಿ ನನಗೆ ಊಟವಿಲ್ಲಾ" ಎಂದು ರಾಗ ಎಳೆದ.

"ಲೇ–ಮೊಸರವಲಕ್ಕಿನೂ ಕಲಿಸಿಬಿಡು ರಾತ್ರಿ ಫಲಹಾರದ ಶಾಸ್ತ್ರವೂ ಈಗಲೇ ಆಗಿಬಿಡಲಿ" ಎಂದು ಜೋಯಿಸರು ಹೆಂಡತಿಗೆ ಹೇಳಿದರು.

ಒಂದುವರಸೆ ಗೊಜ್ಜವಲಕ್ಕಿ ಮುಗಿದಾದ ಮೇಲೇ ಮತ್ತೆ ತಿಪ್ಪಯ್ಯ ಮಾತಾಡಿದ್ದು.

"ರಿಂದಕ್ಕಾ, ನೀನು ಮಾಡಿದಹಾಗೆ ಗೊಜ್ಜವಲಕ್ಕಿ ಮಾಡು ಅಂತ ನನ್ನಾ ಕೆಗೆ ಹೇಳ್ತೀನಿ, ಉಹೂಂ ಈ ರುಚಿ ಅವಳು ಮಾಡಿದ್ದರಲ್ಲಿ ಇರೋದೇ ಇಲ್ಲ"

"ಹಾಕು ಹಾಕು, ಇನ್ನೊಂದು ಒಬ್ಬೆ ಬಡಿಸು"

"ಸಾಕು ಸಾಕು....ಎಷ್ಟೊಂದು ಹಾಕಿಬಿಟ್ಟೆರಲ್ಲಾ"

"ಸಾಕು ಕಂಡಿದ್ದೀನಿ ತಿನ್ನಯ್ಯಾ. ರಾಜೀವೀ, ಇನ್ನಷ್ಟು ಸಂಡಿಗೆ ಬಡಿಸಮ್ಮಾ...."

ಹೆಪ್ಪು ಹಾಕಿದ ಕೆನೆಮೊಸರವಲಕ್ಕಿಯನ್ನು ಕಲಸಿ ಬಡಿಸಿದರು ರಿಂದಮ್ಮ. ರಾತ್ರಿ ಊಟವಿಲ್ಲದ ಪ್ರಯುಕ್ತ ಮನೆಮಂದಿ ಎಲ್ಲಾ ಅಂದು ಉಪಹಾರದಲ್ಲೇ ಕಳೆದರು. ಅಮ್ಮೇನಹಳ್ಳಿ ಶ್ರೀ ಪಟ್ಟಾಭಿರಾಮಸ್ವಾಮಿಗೆ ನಡೆದುಕೊಳ್ಳು ವವರಲ್ಲಿ ಅನೇಕರು ಪ್ರತಿ ಶನಿವಾರ ಸಾಮಾನ್ಯವಾಗಿ ಒಪ್ಪತ್ತು ಉಪವಾಸ ಮಾಡುವರು. ಅಂದರೆ ಅಕ್ಕಿ ಅನ್ನ ತಿನ್ನದೆ ಉಪಹಾರ ಮಾತ್ರ ಊಟದ ಎರಡರಷ್ಟಾಗುತ್ತಿತ್ತು. ಶ್ರೀರಾಮನಿಗೆ ಇದೇ ಪ್ರೀತಿ ಎಂದು ಅವರ ಅಭಿ ಪ್ರಾಯವೇನೊ !

ಮರುದಿನ ಬೆಳಗಿನ ಜಾವಕ್ಕೆ ತಿಪ್ಪಯ್ಯ ಎದ್ದು ಕೆರೆಯಕಡೆ ಹೊರಟ. ಮರಳಿ ಬರುವುದನ್ನು ಕಾಯುತ್ತಿದ್ದರು ನಾಗರಾಜ ಜೋಯಿಸರು.

ರಿಂದಮ್ಮನವರ ಮುಖದಲ್ಲಿ ನಗುತಾಂಡವವಾಡುತ್ತಿತ್ತು. ರಾಜೀವಿ ಕಾಣಿಸಲೇ ಇಲ್ಲ.

ನಡುಮನೆಯ ಗೋಡೆಗೆ ಐದು ಬೆರಳು ಮೂಡಿದ ಕೆಂಪು ಚಟ್ಟು ಹೊಡೆದಿತ್ತು. ರಾಜೀವಿ ದೊಡ್ಡವಳಾಗಿದ್ದಳು. ಚಿಗಳಿ ಕುಟ್ಟಲು ಎಳ್ಳು, ಬೆಲ್ಲಕ್ಕೆ ಹೇಳುತ್ತಿದ್ದರು ರಿಂದಮ್ಮ. ವಿಷಯ ತಿಳಿದ ತಿಪ್ಪಯ್ಯನವರು ರಾಜೀವಿ ಸುಬ್ಬರಾಯನ ಮನೆ ಸೇರುವ ದಿನ ಹತ್ತಿರ ಬಂತೆಂದು ತೃಪ್ತಿಪಟ್ಟರು.

"ಲಕ್ಷ್ಮಣರಾಯರಿಗೆ ವಿಷಯ ತಿಳಿಸು ತಿಪ್ಪಯ್ಯ"

"ಹೂಂ-ಹೇಳೋದಂತೂ ಹೇಳ್ತೀನಿ"

"ಅವರೇ ತಾನೇ ಈಗ ಮನೆಗೆ ಹಿರಿಯರು-ನಾನೂ ಅಮ್ಮೇನಹಳ್ಳಿಗೆ ಬಂದು ಮಾತಾಡುತ್ತೇನೆ. ಇನ್ನು ಎರಡು ಮುಟ್ಟು ಕಳೆದಮೇಲೆ ಪ್ರಶಸ್ತವಾದ ಮುಹೂರ್ತ ನೋಡಿ ನಿಷೇಕದ ಶಾಸ್ತ್ರ ಮುಗಿಸಿಬಿಡಬೇಕು. ಇಲ್ಲೇ ಆದರೆ ಚೆನ್ನ-ಇನ್ನು ಗಂಡಿನವರು ಹೇಗೆ ಹೇಳಿದರೆ ಹಾಗೆ ನಾವು ಕೇಳಬೇಕು. ನೀನಂತೂ ವಿಷಯ ತಿಳಿಸು"

"ಸರಿ-ಒಳ್ಳೆ ಸುದ್ದಿಯೇ ಸಿಕ್ಕಂತಾಯ್ತು. ನಾನು ಹೊರಡ್ತೀನಿ" ಎಂದು ತನ್ನ ಚೀಲ ತೆಗೆದುಕೊಂಡು ಕೋಟು ಹಾಕಿ ರುಮಾಲು ಸುತ್ತಿ ಊರುಕಡೆ ಕಾಲು ಬೆಳಸಿದ.

೫

ಶುಭ್ರವಾಗಿ ಒಗೆದ ಬಟ್ಟೆಗಳನ್ನು ಓರಣವಾಗಿ ಮಡಿಸಿ ಸೇರಿಸಿಕೊಂಡು ಕೊಂಕುಳಲ್ಲಿಟ್ಟು ನದಿಯ ಮೆಟ್ಟಲುಗಳನ್ನು ಹತ್ತುತ್ತಿದ್ದ ಸುಬ್ಬರಾಯ. ಕೊಂಕುಳಲ್ಲಿನ ಬುಟ್ಟಿಯಲ್ಲಿ ನಾಲ್ಕಾರು ಪಾತ್ರೆಗಳನ್ನು ಹಾಕಿಕೊಂಡು ಪಾವಟಿಗೆಗಳನ್ನು ಇಳಿಯುತ್ತಿದ್ದಳು ಸುಶೀಲೆ.

ಸುಬ್ಬರಾಯನನ್ನು ಕಂಡು ಬದಿಗೆ ಸರಿದು ಇಳಿದುಹೋದಳು. ಎರಡು ಎರಡು ಮೆಟ್ಟಿಲು ಹತ್ತಿದವನು ಮತ್ತೆ ಅದೇಕೋ ತಿರುಗಿ ನೋಡಿದ; ಸುಶೀಲೆಯೂ ಹಿಂದಿರುಗಿ ನಿಂತು ಇವನನ್ನೇ ನೋಡುತ್ತಿದ್ದಳು. ಒಂದು ಕ್ಷಣ ಇಬ್ಬರಲ್ಲೂ ವಿದ್ಯುತ್ ಸಂಚಾರದ ಅನುಭವವಾಯ್ತು. "ನಮ್ಮ ತಾಯಿ ಮನೆಗೆ ಬರಹೇಳಿದರು, ಸಂಜೆ ಬರಬೇಕಂತೆ" ಎಂದು ಹೇಳಿದಾಗ ನಾಚಿದ ಕಣ್ಣಲ್ಲಿ ಪ್ರೇಮ ತೂರಿಬಂತು.

"ಹೂಂ ಆಗಲಿ" ಎಂದಾಗ ತೂರಿಬಂದ ಮಿಂಚಿನ ನೋಟಕ್ಕೆ ಅಧೀರನಾಗಿ ಸರಸರನೆ ಮನೆಯಕಡೆ ಹೊರಟೇಹೋದ ಸುಬ್ಬರಾಯ.

ಸಂಜೆ ಸುಬ್ಬರಾಯ ರಂಗಮ್ಮನವರ ಮನೆಗೆ ಹೋದಾಗ ರಂಗಮ್ಮ ಅಲ್ಲಿರಲಿಲ್ಲ. ಅಂದು ಸಂಜೆ ಲಕ್ಷ್ಮೀನಾರಾಯಣ ಗುಡಿಯಲ್ಲಿ ಕುರ್ತುಕೋಟಿ ಕೃಷ್ಣಶಾಸ್ತ್ರಿಗಳ ಹರಿಕಥೆ ಇತ್ತು. ಈ ವಿಷಯ ಸುಬ್ಬರಾಯನಿಗೆ ಗೊತ್ತಿತ್ತು. ರಂಗಮ್ಮ ಅಲ್ಲಿಗೆ ಹೋಗಿರುವರೆಂದೂ ತಿಳಿದಿದ್ದ. ತನ್ನೊಡನೆ ಏಕಾಂತವಾಗಿ ಮಾತಾಡಲು ಸುಶೀಲೆ ಮಾಡಿದ ಮಸಲತ್ತು ಇದು ಎಂದು ಅವಳ ತುಂಟು ನಗುವೇ ತಿಳಿಸಿತ್ತು.

ಅರಳಿದ ಮಲ್ಲಿಗೆಯ ದಂಡೆಯಂತೆ ಕಂಗೊಳಿಸಿದಳು ಸುಶೀಲೆ. ಇದ್ದಿದ್ದರಲ್ಲೇ ಒಳ್ಳೆಯ ಸೀರೆ ಉಟ್ಟಿದ್ದಳು. ನೆರಿಗೆ ಹಿಡಿದ ಜಾಕೀಟು ಹಾಕಿದ್ದಳು. ಇದ್ದ ಸರ, ಬಳೆಗಳು ಪೆಟ್ಟಿಗೆಯಿಂದ ಇವಳ ಮೈಗೆ ಸಾಗಿ ಬಂದಿತ್ತು. ಮೂಗಿನಲ್ಲಿ ಸಿಕ್ಕಿದ ಕಡ್ಡಿ ಮಾಯವಾಗಿ ಕೆಂಪು ಹರಳಿನ ಬೊಟ್ಟು ಮಿನುಗುತ್ತಿತ್ತು. ಶುಭ್ರ ಪ್ರೇಮದ ಹಿಮದಲ್ಲಿ ಮಿಂದ ಕಾಂತಿಯುಕ್ತ ಸಂಪಿಗೆಯ ಕುಚ್ಚನ್ನು ಮುಡಿದು

ಮುಂದೆ ಬಂದು ನಿಂತ ಸುಶೀಲೆಯ ಅಸಾದೃಶ್ಯ ಸೌಂದರ್ಯ ಸುಬ್ಬರಾಯ ನನ್ನು ಪರವಶನನ್ನಾಗಿ ಮಾಡಿತು.

ಇಬ್ಬರೂ ಮಾತಾಡಲೇ ಇಲ್ಲ. ಸುಶೀಲೆಯೇ ಮೊದಲು ಮಾತನಾಡ ಬೇಕಾಯಿತು. ಸುಬ್ಬರಾಯನ ಗಂಟಲು ಒಣಗಿಹೋಗಿತ್ತು. ಯಾವುದೋ ಹೆದರಿಕೆ, ಗಾಬರಿ ಅವನನ್ನು ಅಲ್ಲಿಂದ ಬೇಗ ಹೊರಡಲು ಆತುರಪಡಿಸುತ್ತಿತ್ತು. ಸುಶೀಲೆಯ ಧೈರ್ಯ ಅವನಿಗಿಲ್ಲದಾಗಿತ್ತು. ಯೌವ್ವನವತಿಯಾದ ಸುಂದ ರಿಯ ಮನೆಯಲ್ಲಿ ಮದುವೆಯಾದ ಯುವಕ ಒಬ್ಬನೇ ಇರುವುದು ಆಚೀಚಿನ ಜನಕ್ಕೆ ತಿಳಿದರೆ ಎಂತಹ ಅಪಕೀರ್ತಿ ? ಈ ವಿಚಾರ ರಾಜೀವಿಗೆ ತಿಳಿದರೆ ತನ್ನ ಬಗ್ಗೆ ಅವಳೇನು ತಿಳಿದುಕೊಂಡಾಳು ? ಇದು ಸರಿಯಲ್ಲ–ಎಂದು ಪೇಚಾಡಿದ ಸುಬ್ಬರಾಯ.

"ತೆಗೆದುಕೊಳ್ಳಿ" ಎಂದು ಒಂದು ಲೋಟದಲ್ಲಿ ಒಳ್ಳೆಯ ಸಕ್ಕರೆಯ ಪಾನಕ ತಂದಿಟ್ಟಳು ಸುಶೀಲ. ಒಣಗಿದ ಗಂಟಲಿಗೆ ಬಹು ಹಿತವಾಗಿತ್ತು ಆ ಪಾನಕ.

ಬಹು ಪ್ರಯಾಸದಿಂದ ಸುಬ್ಬರಾಯ ಹೇಳಿದ

"ಅದೇನು ಸುಶೀಲ ಬರಹೇಳಿದ್ದು ?"

"ಸುಮ್ಮನೆ; ಹತ್ತಿರದಿಂದ ನಿಮ್ಮನ್ನು ತೃಪ್ತಿಯಾಗುವವರೆಗೆ ಈ ಕಣ್ಣು ಗಳಿಂದ ನೋಡಬೇಕೆಂದು"

"ಇದು ತಪ್ಪಲ್ಲವೆ ?"

ತಪ್ಪೋ ನೆಪ್ಪೋ, ಹಾಗೆ ನೋಡಬೇಕೆಂದು ಮೈಯ್ಯ ಪ್ರತಿರಕ್ತಕಣವೂ ಚೀರಿದಂತೆ ಭಾಸವಾಯಿತು; ಅದಕ್ಕೆ ಹೇಳಿಕಳಿಸಿದೆ ಎಂದೆನ್ನುವ ಹಂಬಲ ಅವಳಿಗೆ ಆದರೆ ಹಾಗೆ ಹೇಳುವುದು ಹೇಗೆ?

"ಅದೇನೋ–ಹಾಗನ್ನಿಸಿತು"

"ಸರಿ ನೋಡಿಯಾಗಿರಬೇಕು ನಾನಿನ್ನು ಹೊರಡಲೆ ?"

"..............."

"ಯಾಕೆ ಸುಶೀಲ ಮಾತಾಡುವುದಿಲ್ಲ ?"

"..............."

"ಹುಚ್ಚು ಹುಡುಗಿ. ತಿಪ್ಪಯ್ಯನವರು ನಿಜವಾಗಿ ನಿನಗೆ ತಕ್ಕ ಗಂಡ ನನ್ನು ಹುಡುಕಿ ಕೊಡುವರು. ನೀನು ಗಂಡನೊಡನೆ ನಗುನಗುತ್ತ ಸಂಸಾರ ಮಾಡಿಕೊಂಡಿರಬೇಕು- ಇದು ನನ್ನ ಆಸೆ. ಹೀಗೆಲ್ಲಾ ಆಗದ ವಿಷಯಕ್ಕೆ ಮನಸ್ಸು ಹರಿಬಿಟ್ಟು ಬಿಡುವುದು ಒಳ್ಳೆಯದಲ್ಲ...."

"ನಿಮ್ಮನ್ನು ಹೇಗೆ ಮರೆಯಲಿ ?" ಕಣ್ಣುಗಳು ಒದ್ದೆಯಾಗಿದ್ದವು.

"ಯಾವುದೊ ಋಣಾನುಬಂಧ ನನ್ನ ನಿನ್ನನ್ನು ಹತ್ತಿರ ಸೆಳೆಯಿತು. ಅದನ್ನ ನೀನು ವಿಪರೀತ ಮನಸ್ಸಿಗೆ ಹಚ್ಚಿಕೊಳ್ಳಕೂಡದು. ನಾನು ಮದುವೆ ಯಾದವನು. ಅವಳು ಚಿಕ್ಕ ಹುಡುಗಿ, ನಿನ್ನಷ್ಟೆ ಇರಬಹುದು. ನಿನ್ನ ತಂಗಿಯ ವಸ್ತುವನ್ನು ಕದಿಯುವ ಹೊಂಚು ಹಾಕಬೇಡ ಸುಶೀಲ"

"ವಸ್ತು ನನ್ನದೇ ಆಗಿರುವಾಗ ಕದಿಯುವ ಮಾತೆಲ್ಲಿ ಬಂತು ?"

"ನೀನು ನೋಡುವ ಮೊದಲೇ ಅಗ್ನಿಸಾಕ್ಷಿಯಾಗಿ ಅವಳನ್ನು ಕೈಹಿಡಿದಿದ್ದೇನೆ. ಆಗಲೇ ಅವಳ ವಸ್ತುವಾಗಿ ಹೋಗಿದ್ದೇನೆ. ಅಂದಮೇಲೆ ನಿನಗೆ ಅದರಮೇಲೆ ಹಕ್ಕಿಲ್ಲ"

"ನಿಮ್ಮ ಮಾತುಗಳೊಂದೂ ನನಗೆ ಅರ್ಥವಾಗುತ್ತಿಲ್ಲ. ಆಜೀವ ಪರ್ಯಂತ ನಿಮ್ಮನ್ನು ಮರೆಯಲಾರೆ........"

ಎಂದೆನ್ನುತ್ತಾ ಅವನ ಕೈಗಳೆರಡನ್ನು ತನ್ನ ಬೊಗಸೆಯಲ್ಲಿ ಹಿಡಿದು ಕಣ್ಣುಗಳಿಗೊತ್ತಿಕೊಂಡಳು. ಒಂದು ಹೆಣ್ಣು ತನ್ನನ್ನು ಇಂತಹ ಸಂದಿಗ್ಧ ಪರಿಸ್ಥಿತಿಯಲ್ಲಿ ಸಿಲುಕಿಸುವುದೆಂದು ಸುಬ್ಬರಾಯ ಕನಸು ಮನಸಿನಲ್ಲಿ ನೆನೆದಿರ ಲಿಲ್ಲ. ಕೇವಲ ಬಾಲಕನಿದ್ದಾಗಿನಿಂದ ಅವನ ತಂದೆ ಹೇಳಿದ ಪಾಠ, ಅವನ ತಾಯಿ ಹೇಳಿದ ಕಥೆಗಳಿಂದ ಸದ್ಗೃಹಸ್ಥನ ಗುಣಗಳನ್ನು ತೀದ ಸುಬ್ಬರಾಯ ತನ್ನದಲ್ಲದ ಒಡವೆಗೆ ಎಂದೂ ಆಶಿಸಿದವನಲ್ಲ. ಈ ಹೆಣ್ಣು ಅದಾಗಿ ಒಲಿದು ಬಂದಿತ್ತು. ಈ ಅರಿಯದ ಹುಡುಗಿಯ ಮುಗ್ಧಪ್ರೇಮಕ್ಕೆ ಮನ ಸೋತಿದ್ದ. ಇವಳಿಗೆ ತಿಳಿಹೇಳಿ ತನ್ನನ್ನು ಮರೆವಂತೆ ಮಾಡುವುದು ತನ್ನ ಕರ್ತವ್ಯವೆಂದು ಇನ್ನೊಂದು ಮನಸ್ಸು ಹೇಳುವುದು.

ಅವನ ಆ ವಯಸ್ಸಿನಲ್ಲಿ ಎಂತಹವರೂ ಜಾರುವ ಪರಿಸ್ಥಿತಿ ಅದು. ಮನ ಸ್ಸಿನ ತುಮುಲವನ್ನು ಹಿಡಿತಕ್ಕೆ ತಂದು ಕೈಬಿಡಿಸಿಕೊಂಡು ತಲೆ ನೇವರಿಸಿ ಅವಳ ಸೆರಗಿನ ತುದಿಯಿಂದ ಅವಳ ಕಣ್ಣೀರನ್ನು ಒರೆಸಿದ.

"ಸುಶೀಲ, ಲಕ್ಷ್ಮೀನಾರಾಯಣ ಗುಡಿಯಲ್ಲಿ ಚರುಪು ಹಂಚುವ ಹೊತ್ತಾ ಗುತ್ತಾ ಬಂತು. ನೀನು ಬರುವುದಿಲ್ಲವೆ?''

"ನನಗೊಂದೂ ತೋಚದು ; ಏನು ಮಾಡಲೂ ತೋಚದು. ಏನೋ ಕಳೆದುಕೊಂಡಂತೆ ಇದೆ'' ಎಂದು ಹೇಳಬೇಕಾದರೆ ಅವಳಿಗೆ ಸಾಕು ಸಾಕಾಗಿ ಹೋಯಿತು.

"ಛಿ ಹುಚ್ಚು ಹುಡುಗಿ! ನಡಿ, ಮುಖ ತೊಳೆದು ಬಾ ; ಎಲ್ಲಾ ಸರಿ ಹೋಗುವುದು'' ಎಂದು ಹೇಳಿ, ಅವನು ಅಲ್ಲಿ ನಿಂತರೆ ಮರುಕ್ಷಣದಲ್ಲಿ ಯಾರು ಬಂದು ತನ್ನನ್ನು ಸ್ಥಿತಿಯಲ್ಲಿ ನೋಡಿಯಾರೋ ಎಂಬ ಭಯದಿಂದಲೇ ಸರ ಸರನೆ ಮುಂದೆ ಮಾಡಿದ ಬಾಗಿಲು ತೆಗೆದುಕೊಂಡು ಹೊರಟುಹೋದ.

ಸುಶೀಲೆಗೆ ತನ್ನ ಹೃದಯ ಮಂದಿರದಿಂದ ಬಾಗಿಲು ತೆಗೆದು ತನ್ನ ಆರಾಧ್ಯಮೂರ್ತಿ ಅದೃಶ್ಯವಾದ ಅನುಭವವಾಯಿತು. ಅವಳಿಗಾದ ದುಃಖ ಅವರ್ಣನೀಯ.

ಈ ಅವಸರ ಈ ಆತುರ ಅಲ್ಲಿ ತನ್ನನ್ನು ನಿಲ್ಲಲಾಗದಂತೆ ಮಾಡಿದ್ದು ಸುಬ್ಬರಾಯನ ಮನೋವೃತ್ತಿಗಿಂತ, ಸುತ್ತುಮುತ್ತಿನವರು ಈ ವಿಚಾರವಾಗಿ ತನ್ನ ಬಗ್ಗೆ ಅಪವಾದದ ಮಾತಾಡಿ ನಗೆಗೀಡಾಗುವ ಹೆದರಿಕೆಯೇ ಕಾರಣ ವಾಗಿತ್ತು. ಅವನದೂ ಉಪ್ಪುಹುಳಿ ತಿನ್ನುವ ಗಂಡುಜಾತಿ. ಒಲಿದು ಬಂದ ಹೆಣ್ಣನ್ನು ಅಪ್ಪದೆ ಬಿಡುವ ಚೇತನವೇ ಅಲ್ಲ. ಮೇಲೆ ಮಡಿವಂತಿಕೆಯ ಸಾಸಿರ ಮಾತಾಡುವ ಮಾರ್ಜಾಲ ಮಹಾಮುನಿಯಂತೆಯೇ ಅವನ ಮನ ಸ್ಸಾದರೂ, ಈ ವಿಧದ ಅನುಭವಕ್ಕೆ ಹೊಸಬನಾದ ಅವನು ಜನಕ್ಕೆ ಹೆವರಿ ಸುಶೀಲೆಯ ಪ್ರೇಮದ ಕರೆಗೆ ಓ ಕೊಡದೆ ಹೋಗಿದ್ದ. ಇತರರು ಏನು ಆಡಿ ಕೊಳ್ಳುವರೋ-ಈ ಸುದ್ದಿ ರಾಜೀವಿಯ ಕಿವಿಗೆ ಮುಟ್ಟಿದರೆ ಹೇಗೆ! ಶ್ರೀಧರ ಮೂರ್ತಿ ತ್ರಿಪುರ ಸುಂದರಿಯರಿಗೆ ತಾನು ಹೀಗೆ ಎಂಬುದು ತಿಳಿದರೆ ತಲೆ ಎತ್ತಿ ತಿರುಗಲಾಗದಲ್ಲಾ ಎಂಬ ಹೆದರಿಕೆಯಿಂದ ಸುಶೀಲೆಯೊಡನೆ ಹೆಚ್ಚು ಮಾತಾ ಡಲೂ ಭಯದಿಂದ ಇದ್ದ.

ಸುಬ್ಬರಾಯ ಹೊರಟುಹೋದ ಕೊಂಚಹೊತ್ತಿಗೆ ರಂಗಮ್ಮ ಬಂದಾಗ ಸುಶೀಲೆ ರಾಪುಬಡಿದವಳಂತೆ ಕುಳಿತಿದ್ದಳು. ಗೂಡಿನಲ್ಲಿ ಉರಿಯುತ್ತಿದ್ದ ದೀಪ

ಗಾಳಿಗೆ ಹೊಯ್ದಾಡುತ್ತಿತ್ತು. ಅದರೊಡನೆ ಸ್ಪರ್ಧಿಸುವಂತೆ ಇವಳ ಮನಸ್ಸೂ ಹೊಯ್ದಾಡುತ್ತಿತ್ತು.

''ಯಾಕೆ ಸುಶೀಲ ಹರಿಕಥೆಗೆ ಬರಲಿಲ್ಲ?''

ಅರ್ಧ ಹರಿಕಥೆ ಬಿಟ್ಟು ಮಗಳು ಏಕೆ ಬರಲಿಲ್ಲವೆಂದು ನೋಡುವುದಕ್ಕಾಗಿಯೇ ರಂಗಮ್ಮ ಬಂದದ್ದು. ಸುಶೀಲೆ ಮಾತೇ ಆಡಲಿಲ್ಲ. ಒಲೆಯ ಮೇಲಿಟ್ಟಿದ್ದ ಹಾಲು ಉಕ್ಕಿಹೋಗಿತ್ತು. ಅದನ್ನು ಇಳಿಸಿ ಅಕ್ಕಿಹಾಕಿ ಅನ್ನಕ್ಕಿಟ್ಟು ಸುಶೀಲೆ ಬೀಗಹಾಕಿಕೊಂಡು ಹರಿಕಥೆಗೆ ಹೋಗಬೇಕಿತ್ತು.

"ಹಾಲು ಉಕ್ಕಿದ ವಾಸನೆ ಬಂದರೂ ನಿನಗೆ ಗೊತ್ತಾಗಲಿಲ್ಲವೆ?"

"..............." ಸುಶೀಲೆ ಮಾತಾಡಲೇ ಇಲ್ಲ.

"ಇದೇನೆ ಸುಶೀಲ ಹೀಗೆ! ನಿನಗೆ ಆಗಿರೋದಾದರೂ ಏನು ಹೇಳಬಾರದೆ? ಈಚೆಗೆ ನೀನು ಸರಿಯಾಗಿ ಮಾತೇ ಆಡೋಲ್ಲ. ಅದೇನು ಮನಸ್ಸಿನಲ್ಲಿದೆ ಹೇಳಬಾರದೆ? ನಾಳೆ ಮದುವೆಯಾಗೋ ಹುಡುಗಿ ಹೀಗೆಲ್ಲಾ ಇರಬಾರದು ತಾಯಿ. ಹಾಲು ಒಲೆಮೇಲಿದೆ, ಕಾದಮೇಲೆ ಇಳಿಸಬೇಕೂನ್ನೋದು ಮರೆಯೋ ಅಷ್ಟು ಕೆಲಸವೆ ನಿನಗೆ? ಅದ್ಯಾಕೆ ಹೀಗಾಡ್ತಿಯೋ ದೇವರೇ ಬಲ್ಲ; ನಿನ್ನೊಬ್ಬಳನ್ನು ಗಂಡನ ಮನೆಗೆ ಕಳಿಸಿದರೆ ಸಾಕು ದೇವರೇ–ನನ್ನೂ ನಿನ್ನ ಹತ್ತಿರ ಕರೆದಿಟ್ಟುಕೋ. ಅವರು ಹೋದಾಗಿನಿಂದ ಕಟ್ಟಾಣಿಮಣಿ ಹಾಗೆ ಸಾಕಿದೆನಲ್ಲೆ. ಇನ್ನು ಕೊಂಚ ದಿನವೇ ಕೊರಗದೆ ಇದ್ದುಬಿಡು ಸುಶೀಲ. ಎಲ್ಲಾ ಸರಿಹೋಗುತ್ತೆ. ನಿನ್ನ ಯೋಚನೆಯಾದರೂ ಏನು, ನನ್ನ ಹತ್ತಿರಲೂ ಹೇಳದಂಥ ವಿಷಯವೆ ಅದೂ....?" ಎಂದು ಬಹುದುಃಖದಿಂದ ಹೇಳಿದಾಗ ಸುಶೀಲೆಯ ಕರುಳು ಕತ್ತರಿಸಿ ಬಂತು. ದುಃಖದ ಬೆಟ್ಟದ ಮೇಲೇ ಬೆಳೆದ ತಾಯಿಗೆ ತಾನು ಕುರುವಿನ ಮೇಲೆ ಬರೆ ಎಳೆಯುವ ಕಾದ ಕಬ್ಬಿಣವಾಗಬಾರದು; ತನ್ನ ದುಃಖ ತಾಯಿಯಲ್ಲಿಯೂ ಹೇಳುವಂತಹುದಲ್ಲ. ತನ್ನ ಚರ್ಯೆ ತಾಯಿಗೆ ಅಪಾರಯಾತನೆ ಕೊಡುವುದಾಗಬಾರದು. ತನಗಾಗಿ ಬದುಕಿದ ಜೀವಕ್ಕೆ ತನ್ನಿಂದ ದುಃಖ ಬರಬಾರದು.

"ಏನೋ ಯೋಚಿಸುತ್ತಿದ್ದಹಾಗೇ ಮರ್ರುಹೋಯಿತಮ್ಮ".

"ಮುಂಬರುವ ಗಂಡ ಹೇಗಿರುವನೋ ಎಂದು ಚಿಂತೆಯೇನೆ?''

"ಥೂ, ಹೋಗಮ್ಮ" ಎಂದು ನಕ್ಕಳು.

"ಸಧ್ಯ ನಿನ್ನ ಮುಖದಲ್ಲಿ ನಗು ಕಾಣ್ತೀನೋ ಇಲ್ವೋಂತ ಇದ್ದೆ" ಎಂದಾಗ ತಾನು ನಕ್ಕುನಗು ಕೃತಕವೆಂದು ಸುಶೀಲೆಗೆ ಸೂತ್ರ ಗೊತ್ತಿತ್ತು. ಜಾಲಿಳಿಸಿ ಅಕ್ಕಿ ತೊಳೆದು ಎಸರಿಗಿಟ್ಟು ತಾಯಿಮಕ್ಕಳಿಬ್ಬರೂ ಮತ್ತೆ ಲಕ್ಷ್ಮಿ ನಾರಾಯಣಸ್ವಾಮಿ ದೇವಸ್ಥಾನಕ್ಕೆ ಬಂದಾಗ ದಾಸರು ಆಗಲಿ ಶಶಿರೇಖೆ ಯನ್ನು ಅಭಿಮನ್ಯುವಿಗೆ ಕೊಟ್ಟು ಲಗ್ನ ಮಾಡಿಸುತ್ತಿದ್ದರು.

ಸುಶೀಲ ಎಂದಿನಂತೆ ಚರುಪು ಹಂಚಲು ಅಡ್ಡ ಸೆರಗು ಕಟ್ಟಿ ನಿಲ್ಲಲಿಲ್ಲ.

ಸುಬ್ಬರಾಯ ಮಾತ್ರ ಎಂದಿನಂತೆ ಚರುಪು ಹಂಚಲು ಏರ್ಪಾಡು ನಡೆಸಿದ್ದ. ಕಥೆ ಮುಗಿದು ಮನೆಗೆ ಬಂದಾಗ ರಾತ್ರಿ ಒಂಭತ್ತುಗಂಟೆಯಾಗಿತ್ತು.

ತಿಪ್ಪಯ್ಯನವರಿಂದ ಕಾಗದ ಶ್ರೀಧರಮೂರ್ತಿ ವಿಳಾಸಕ್ಕೆ ಬಂತು. ಹದಿನೆಂಟನೆ ತಾರೀಖು ಗುರುವಾರ ಜನಾರ್ಧನನ ಕೂಡ ಶಿವಮೊಗ್ಗೆಗೆ ಬರುವುದಾಗಿ ಬರೆದಿದ್ದರು. ಈ ಸುದ್ದಿ ಕೇಳಿದ ರಂಗಮ್ಮನವರಿಗೆ ಮಗಳ ಮದುವೆಯ ಕೆಲಸಗಳು ಶೀಘ್ರವಾಗಿ ನಡೆಯತೊಡಗಿದ್ದು ತಮ್ಮ ಕಷ್ಟದ ದಿನಗಳು ಕಳೆದು ಒಳ್ಳೆಯ ದಿನಗಳೂ ಶೀಘ್ರದಲ್ಲಿಯೇ ಬರುವುದೆಂದು ತಿಳಿದರು. ದೇವರ ಮುಂದೆ ನಂದಾ ದೀಪ ಇಟ್ಟರು. ಈ ಸಂಬಂಧ ಅನುಕೂಲವಾದರೆ ತಿರುಪತಿಗೆ ಸೇವೆ ಮಾಡಿಸಲು ಬರುವೆನೆಂದು ವೆಂಕಟರಮಣಸ್ವಾಮಿಗೆ ಹರಕೆ ಹೊತ್ತರು.

ಏನೆಲ್ಲ ಮಾತುಕಥೆಗಳಿದ್ದರೂ ಹುಡುಗ ಹುಡುಗಿಯನ್ನು ನೋಡಿದ ಮೇಲೆ ನಡೆಯಬೇಕಿತ್ತು. ಶ್ರೀಧರಮೂರ್ತಿಗಳ ಮನೆಯಲ್ಲೇ ಹೆಣ್ಣು ನೋಡುವ ಶಾಸ್ತ್ರ ನಡೆಸಬೇಕೆಂದು ನಿರ್ಧರಿಸಿದ್ದು ತ್ರಿಪುರಸುಂದರಿಯೆ. ಗೌರಮ್ಮನವರೂ ಜೊತೆಗೆ ಬರುವವರಿದ್ದರು. "ಗುರುವಾರ ಇನ್ನೇನು ಹತ್ತಿರ ಬಂತು'' ಎಂದು ಹದಿನೈದು ದಿನಕ್ಕೆ ಮುಂಚೆನಿಂದಲೇ ಹೇಳುತ್ತಿದ್ದಳು ತ್ರಿಪುರಸುಂದರಿ.

ಅಣ್ಣನಿಗೂ ಬರಲಿಕ್ಕೆ ಕಾಗದ ಹಾಕಿಸಿದ್ದರು ರಂಗಮ್ಮ. ಹೆಂಡತಿಗೆ ಖಾಯಿಲೆಯಾಗಿರುವ ಪ್ರಯುಕ್ತ ಬರುವುದಕ್ಕಾಗುವುದಿಲ್ಲವೆಂದು ಕಳ್ಳೂರು ಕಟ್ಟೆಯಿಂದ ಉತ್ತರವೂ ಬಂತು. ಹೀಗೆ ಉತ್ತರ ಬಂದೂ ಬರುವುದೆಂದು ರಂಗಮ್ಮನಿಗೆ ಗೊತ್ತು ಇತ್ತು. ಇರುವನೊಬ್ಬ ಅಣ್ಣ ಒಬ್ಬಳೇ ತಂಗಿಯ ಮಗಳ ಮದುವೆ ನ್ಯಾಯವಾಗಿ ನಿಂತು ಮಾಡಬೇಕು. ಹೋಗಲಿ ಗಂಡ

ಸಾಗಿ ತನ್ನ ಕಡೆಯ ಬಳಗದವೈಕಿಯ ಪ್ರತಿನಿಧಿಯಾಗೂ ಬರಲು ಹಿಂದೇಟು ಹಾಕಿದ ಅಣ್ಣನಮೇಲೆ ಕೋಪವೇ ಬಂತು. "ದೇವರ ದಯದಿಂದ ಈ ಮದುವೆ ನಿಶ್ಚಿತವಾದರೆ ನೀನೆ ನಮ್ಮ ಕಡೆನಾಂದಿ ಇಟ್ಟುಕೊಳ್ಳಬೇಕಾಗುತ್ತೆ. ದಿಕ್ಕಿಲ್ಲದ ತಂಗಿಗೆ ಈ ಸಮಯದಲ್ಲೂ ಸಹಾಯ ಮಾಡಲು ಹಿಂಜರಿದರೆ ಹೇಗೆ? ಖಂಡಿತ ವಾಗಿ ಮದುವೆಗೆ ಬರಲೇಬೇಕು" ಎಂದೂ ಈಗ ಅಲ್ಲದಿದ್ದರೂ ಮದುವೆಹೊತ್ತಿಗೆ ಬರಲೇಬೇಕೆಂದೂ ಒತ್ತಾಯಮಾಡಿ ಇನ್ನೊಂದು ಕಾಗದಾ ಹಾಕಿಸಿದರು.

ತಿಪ್ಪಯ್ಯನವರ ಕಾಗದದ ಜೊತೆಗೆ ಅರಿಶಿನ ಹಚ್ಚಿದ ಒಂದು ಲಕೋಟೆಯೂ ಶ್ರೀಧರಮೂರ್ತಿಗೆ ಬಂದಿತ್ತು. ಅದನ್ನು ಓದಿಕೊಂಡು ನಗುನಗುತ್ತಲೇ ತ್ರಿಪುರಸುಂದರಿಯ ಕೈಗೆ ಕೊಟ್ಟ. ಹಿರೇಹಳ್ಳಿಯಿಂದ ನಾಗರಾಜ ಜೋಯಿಸರು ಬರೆದಿದ್ದರು. ರಾಜೀವಿ ಋತುಮತಿಯಾದ ವಿಷಯವನ್ನು ಬರೆದಿದ್ದರು. ಅಮ್ಮೇನಹಳ್ಳಿಗೆ ಶ್ರೀ ಲಕ್ಷ್ಮಣರಾಯರಿಗೆ ಬರೆದಿರುವುದಾಗೂ ನಿಷೇಕಪ್ರಸ್ತದ ಮುಹೂರ್ತ ಇಡಿಸಿ ಬರೆಯುವುದಾಗೂ ಬರೆದಿದ್ದರು. ಸುಬ್ಬರಾಯನ ಸ್ನೇಹಿತ ವೆಂಕಟೇಶ ಈ ಸುದ್ದಿ ಕೇಳಿ ಸುಬ್ಬರಾಯನ ಷರಟು ಪಂಚೆಯ ಮೇಲೆ ಓಕಳಿ ಚೆಲ್ಲಿ ಬಣ್ಣ ಮಾಡಿದ.

ರಾಜೀವಿ ಮನೆಗೆ ಬರುವ ಮುನ್ನ ತಾನೊಂದು ನೌಕರಿ ಹಿಡಿಯಬೇಕೆಂಬ ಹಂಬಲ ಸುಬ್ಬರಾಯನದು. ಶ್ರೀಧರಮೂರ್ತಿ ತನ್ನ ಸಾಹೇಬರ ಮುಖಾಂತರ ಡೆಪ್ಟಿಕಮಿಷನ್ ಸಾಹೇಬರಿಗೆ ಹೇಳಿಸಿದ್ದ. ಅವರು ಸ್ವಲ್ಪದಿನ ತಡೆಯುವಂತೆ ಹೇಳಿದ್ದರು. ಹಾಗೆ ಹೇಳಿಯೂ ಕೊಂಚದಿನವಾಗಿತ್ತು. ಮತ್ತೊಮ್ಮೆ ಸುಬ್ಬರಾಯನನ್ನೂ ಕರೆದುಕೊಂಡು ಡೆಪ್ಟಿಕಮಿಷನ್ನರ ಹತ್ತಿರ ಖುದ್ದಾಗಿ ಹೋಗುವುದಾಗಿ ನಿರ್ಧರಿಸಿದ್ದು ನರಸಿಂಹ ಜಯಂತಿಯ ಅವಾಂತರ ಮುಗಿದುಹೋಗಲಿ ಎಂದು ಕಾದಿದ್ದ.

ಎಲ್ಲಿಲ್ಲದ ಸಂಭ್ರಮ ತ್ರಿಪುರಸುಂದರಿಗೆ. ಸುಬ್ಬರಾಯನ ಹೆಂಡತಿ ಮೈನೆರೆದಿದ್ದು, ಸುಶೀಲೆಯನ್ನು ನೋಡಲು ಗಂಡು ಬರುವುದು–ಎರಡು ವಿಷಯಗಳೂ ಅವಳನ್ನು ಹಿಗ್ಗಿಸಿದ್ದವು.

ದಿನಗಳು ಬೇಗ ಉರುಳುತ್ತವೆನ್ನುವುದಕ್ಕೆ ತಿಪ್ಪಯ್ಯ ಬರುವ ಗುರುವಾರ ಬೇಗ ಬಂದದ್ದೇ ನಿದರ್ಶನ. ಹೊನ್ನಾಳಿಯಿಂದ ಮೋಟಾರು ಹತ್ತು

ಘಂಟೆಗೊಂದು ಹನ್ನೊಂದಕ್ಕೊಂದು ಎರಡು ಬರುತ್ತಿತ್ತು. ಮನೆಯನ್ನು ಅಲಂಕರಿಸಿದ್ದಳು ತ್ರಿಪುರಸುಂದರಿ. ರಂಗಮ್ಮನೂ ಮನೆ ಶುಭ್ರಮಾಡು ವುದರಲ್ಲಿ ಸರಿಸಮ ನಿಂತು ದುಡಿದಿದ್ದರು. ಸುಶೀಲೆ ಮಾತ್ರ ಮಂಕು ಬಡಿ ದವಳಂತೆ ಒಂದರಲ್ಲೂ ಆಸಕ್ತಿಯನ್ನು ತೋರಿಸುತ್ತಿರಲಿಲ್ಲ.

ಬಸ್ ಸ್ಟ್ಯಾಂಡಿಗೆ ಶ್ರೀಧರಮೂರ್ತಿ ಹೋಗಿದ್ದ. ಹತ್ತು ಘಂಟೆ ಬಸ್ಸು ಹನ್ನೊಂದಕ್ಕೆ ಬಂತು. ಸಧ್ಯ ಅದರಲ್ಲೇ ತಿಪ್ಪಯ್ಯ, ಗೌರಮ್ಮ ಮತ್ತು ಜನಾರ್ಧನಯ್ಯ ಇವರುಗಳು ಬಂದಿದ್ದರು.

"ಮೋಟಾರು ಹೊತ್ತಾಗಿ ಬಂದಿದೆ ಅಲ್ಲವೆ ತಿಪ್ಪಯ್ಯ?"

"ಹೊತ್ತೇನು ಬಂದದ್ದು–ಈ ಘಂಟೆ ಗಡಿಯಾರಗಳ ವಿಚಾರಕ್ಕೂ ನನಗೂ ಬಹುದೂರ"

"ದಿನ ಬೆಳಗಾದರೆ ಕೋರ್ಟು ಕಚೇರೀಂತ ಅಲೆಯೋ ಮನುಷ್ಯ ಹೊತ್ತುಗೊತ್ತು ತಲೆಗೆ ಹಚ್ಚಿಕೊಳ್ಳೋಲ್ಲಾಂತಿಯಾ?"

"ಹಸಿವಾದಾಗ ಊಟದಹೊತ್ತು, ನಿದ್ರೆ ಬಂದಾಗ ರಾತ್ರಿ ಇವಿಷ್ಟೆ ನನಗೆ ಗೊತ್ತು. ಬೆಳಗಿನಿಂದ ಸಂಜೆತನಕ ಹೊಲದಲ್ಲಿ ದುಡಿಯೋರಿಗೆ ಘಂಟೆ ನಿಮಿಷ ಕಟ್ಟಿಕೊಂಡೇನು?"

"ನಮ್ಮ ವಿಷಯ ಹಾಗಲ್ಲ. ಪೋಸ್ಟಾಫೀಸೂಂದ್ರೆ ಜೀವವಿರೋ ಗಡಿ ಯಾರಾಂತಲೆ ಲೆಖ್ಖ"

"ಅದು ಸರೀನ್ನು....ನಮ್ಮ ಮಾತಲ್ಲಿ ಜನಾರ್ಧನಯ್ಯನನ್ನು ನಿನಗೆ ಗುರ್ತುಮಾಡಿಕೊಡಲಿಲ್ಲವಲ್ಲಾ!"

"ನಮಸ್ಕಾರ" ಎಂದು ಕೈಮುಗಿದ ಜನಾರ್ಧನ.

"ನಮಸ್ಕಾರ....ಪ್ರಯಾಣದಲ್ಲಿ ಆಯಾಸವಾಗಲಿಲ್ಲವೆ?"

"ಏನು ಮಹಾ ದೊಡ್ಡ ಪ್ರಯಾಣ, ಹೊನ್ನಾಳಿಯಿಂದ ಬರಲಿಕ್ಕೆ...."

"ಇಷ್ಟೇನೆ ಸಾಮಾನು?"

"ಇನ್ನೇನು ಹಾಸಿಗೆ ಟ್ರಂಕು ತರಬೇಕಿತ್ತೇನು? ಮೊದಲೇ ಬರೆದಿದ್ದರೆ ಒಂದು ತಿಂಗಳು ಠಿಕಾಣೆಗೆ ಅಣಿಮಾಡಿಕೊಂಡು ಬರ್‍ತಾ ಇದ್ದೆನಲ್ಲಾ ಸುಬ್ಬ ರಾಯ"

"ಹಹಹ....ನೀನು ಬಿಡು ತಿಪ್ಪಯ್ಯ, ಮಾತಿನಲ್ಲಿ ನಿಪುಣ. ಇದೇ ಮೂರು ಗಂಟೇ ಎಂದು ಕೇಳಿದೆ ಅಷ್ಟೆ."

"ಅದರಲ್ಲೂ ಎರಡು ನಂದು. ಒಂದು ಮಾತ್ರ ಜನಾರ್ಧನಯ್ಯನದು ಮಹರಾಯ...."

"ಇದೇನು ಬಸ್ ಸ್ಟ್ಯಾಂಡಿನಲ್ಲೆ ಬಾಯಿ ಉಪಚಾರವಾಯಿತಲ್ಲಾ, ಮನೆಕಡೆ ಹೊರಡೋಣವೆ ?"

"ಆಹಾ–ಇಲ್ಲಿನ್ನಿನ್ನೇನು ಕೆಲಸ ?"

ಮೂವರೂ ಶ್ರೀಧರಮೂರ್ತಿಯ ಮನೆಕಡೆ ಹೊರಟರು. ಜನಾರ್ಧನಯ್ಯ, ಶ್ರೀಧರಮೂರ್ತಿ ಮಾತಾಡುತ್ತಾ ಮುಂದೆ ನಡೆದರು. ತಿಪ್ಪಯ್ಯ, ಗೌರಮ್ಮ ನಿಧಾನವಾಗಿ ಅವರನ್ನು ಹಿಂಬಾಲಿಸಿದರು.

ಮನೆಯ ಮುಂದೆ ತ್ರಿಪುರಸುಂದರಿ ತನ್ನಿಬ್ಬರು ಹೆಣ್ಣುಮಕ್ಕಳೊಡನೆ ಕಾದು ನಿಂತಿದ್ದಳು. ಅವಳ ಆತುರವೆಂದರೆ ಜನಾರ್ಧನಯ್ಯ ಹೇಗಿರುವನೆಂಬುದೇ ಆಗಿತ್ತು. ರಂಗಮ್ಮನವರೂ ಅಲ್ಲೇ ಇದ್ದರು. ಸುಶೀಲೆ ಮನೆಯಲ್ಲಿ ಬಾಗಿಲು ಹಾಕಿಕೊಂಡು ಕುಳಿತುಬಿಟ್ಟಿದ್ದಳು. ರಂಗಮ್ಮ ಭಾವಿ ಅಳಿಯನ ರೂಪು ನೋಡಿ ಮೆಚ್ಚಿಕೊಂಡಳು. ಸುಶೀಲೆಯ ಪುಣ್ಯ ಇಂತಹ ಗಂಡು ಸಿಕ್ಕದ್ದು ಎಂದುಕೊಂಡಳು.

ರಂಗಮ್ಮ ಗೌರಮ್ಮನವರ ಪರಸ್ಪರ ಪರಿಚಯವಾಯಿತು. ತಿಪ್ಪಯ್ಯನ ತೀರ್ಮಾನದಂತೆ ಮಧ್ಯಾನ್ಹ ಮೂರು ಘಂಟೆ ಮೇಲೆ ಹೊತ್ತು ಚೆನ್ನಾಗಿರುವುದರಿಂದ ಗಂಡು ಹೆಣ್ಣು ನೋಡುವ ಶಾಸ್ತ್ರ ಮತ್ತು ಇತರ ಮಾತುಕಥೆಗಳೂ ನಡೆಯುವುದೆಂದು ಗೊತ್ತಾಯಿತು.

ರಂಗಮ್ಮ ಸುಶೀಲೆಯನ್ನು ಮೂರು ಗಂಟೆ ಹೊತ್ತಿಗೆ ಕರೆದುಕೊಂಡು ಬರುವುದಾಗಿ ತಿಳಿಸಿ ಮನೆಗೆ ಹೋದಳು. ತಿಪ್ಪಯ್ಯ ಮತ್ತೆ ಸ್ನಾನ ಮಾಡಿ ಸಂಧ್ಯಾವಂದನೆಯ ಶಾಸ್ತ್ರ ಮುಗಿಸಿದ. ಜನಾರ್ಧನಯ್ಯ ಹೊರಡುವಾಗ ಮಾಡಿದ್ದರಿಂದ ಸ್ನಾನ ಬೇಡವೆಂದ. ಗೌರಮ್ಮನವರು ಮೋಟಾರಿನಲ್ಲಿ ಬಂದದ್ದರಿಂದ ಮತ್ತೆ ಮೈತೊಳೆದು ಮಡಿಸೀರೆ ಉಡುವವರೆಗೆ ಊಟ ಮಾಡುವಂತೇ ಇರಲಿಲ್ಲ.

ಕಾಯಿ ಚಟ್ನಿ, ಕುಂಬಳಕಾಯಿ ಹುಳಿ ಒಂದು ಪಲ್ಯ, ಅನ್ನ ಇಷು ಮಾಡಿದ್ದಳು ತ್ರಿಪುರಸುಂದರಿ. ತ್ರಿಪುರಸುಂದರಿಯ ಅಡಿಗೆ ಎಂದರೆ ಸಾಧ್ಹಾರಣವಾಗಿ ಉಪ್ಪು ಹೆಚ್ಚು. ಕೊಂಚ ಉಪ್ಪು ಹೆಚ್ಚಾದರೆ ಉರಿದುಬೀಳುವ ಸ್ವಭಾವ ಶ್ರೀಧರಮೂರ್ತಿಯದು. ನಿತ್ಯ ಈ ವಿಚಾರವಾಗಿ ಶ್ರೀಧರಮೂರ್ತಿ ಅಂದು ಅಂದು ಬೇಸತ್ತಿದ್ದ. ಜನಾರ್ಧನಯ್ಯನಿಗೆ ಕೊಂಚ ಉಪ್ಪು ಮುಂದಾಗಿದ್ದರೇ ಅಡಿಗೆ ರುಚಿಸುವುದು. ಊಟ ಮುಗಿಯುವವರೆಗೆ ಗೌರಮ್ಮ, ಜನಾರ್ಧನಯ್ಯ ಬಾಯಿ ತುಂಬಾ ತ್ರಿಪುರಸುಂದರಿಯ ಅಡಿಗೆಯನ್ನು ಹೊಗಳಿದರು.

ಕಡೆಗೆ ಈ ಹೊಗಳಿಕೆ ಕೇಳಿ ತಡೆಯಲಾರದೆ ಶ್ರೀಧರಮೂರ್ತಿ "ಹೌದು ಹೌದು, ಇವಳ ಕೈಯಿಂದ ಅಡಿಗೆ ಮಾಡಿಸಿ ನೋಡೇ ನಾನು ಮದುವೆಯಾಗಲು ಒಪ್ಪಿದ್ದು" ಎಂದ. ಎಲ್ಲರೂ ನಕ್ಕರು.

ತಿಪ್ಪಯ್ಯ ಮಾತ್ರ ಕೊಂಕುಮಾತಾಡಿದ. "ನನಗೆ ಗೊತ್ತು ಶ್ರೀಧರಮೂರ್ತಿ ನೀನು ಹೇಗೆ ಲಗ್ನವಾದದ್ದೂಂತ...."

"ಹೇಗೆ ಹೇಳಬಾರದೆ ? " ಎಂದ ಜನಾರ್ಧನಯ್ಯ.

"ಹಸೆಮೇಲೆ ಕೂತಮೇಲೇ ಈತ ಹೆಣ್ಣಿನ ಮುಖ ನೋಡಿದ್ದು. ಅವರಪ್ಪ ಮಾಡಿಕೊ ಅಂದರು, ಇವನು ಹೂಂ ಅಂದ ಅಷ್ಟೆ. ಆಗ್ಲ್ಯಾ ಈಗ್ಲ್ಯಾ ಆಗಲೆ ಬದಲಾಯಿಸಿದೆ ನೋಡು ಕಾಲ. ನಿನ್ನ ಹಾಗೆ ಹೆಣ್ಣು ನೋಡುವ ಪದ್ಧತಿಯೇ ಇರಲಿಲ್ಲ ಆವಾಗ"

"ಹಾಗೆ ಹೇಳಬೇಡ ತಿಪ್ಪಯ್ಯ. ಈಗಲೂ ತಂದೆ ತಾಯಿಗಳ ಮಾತು ಕೇಳಿಯೇ ಅವರು ಒಪ್ಪಿ ನಿಶ್ಚಯಿಸಿದ ಹೆಣ್ಣನ್ನು ಆಗುವವರು ಅನೇಕ ಮಂದಿ ಇದ್ದರೆ. ಹಾಗೂ ಹೀಗೂ ಕೂಡಾ ಉಂಟು"

"ಹೌದು, ಹಾಗಿದ್ದರೂ ಕಾಲ ನಾಜೋಕು ಆಗ್ತಾ ಇದೇನ್ನೋದಕ್ಕೆ ಹೇಳಿದೆ"

ಈ ಮಾತುಗಳ ನಡುವೆ ಉಪಚಾರ ಮಾಡಿ ಎಲ್ಲರಿಗೂ ತೃಪ್ತಿಯಾಗುವಂತೆ ಬಡಿಸಿದಳು ತ್ರಿಪುರಸುಂದರಿ. ಬೇಡ ಬೇಡವೆಂದರೂ ತನ್ನ ಊಟವಾದ ಮೇಲೆ ಗೌರಮ್ಮ ತ್ರಿಪುರಸುಂದರಿಯನ್ನು ಕೂಡಿಸಿ ಬಡಿಸಿದರು.

ಶ್ರೀಧರಮೂರ್ತಿ, ಸುಬ್ಬರಾಯ, ಜನಾರ್ಧನಯ್ಯ ತಿಪ್ಪಯ್ಯ ಇವರು ಎಲೆ ಅಡಿಕೆ ಹಾಕಿಕೊಂಡು ಮುಂದಿನ ಕೋಣೆಯಲ್ಲಿ ವಿಶ್ರಮಿಸಿಕೊಳ್ಳುತ್ತಿದ್ದರು. ಆ ಮಾತು ಈ ಮಾತು ಹಾಸುಹೊಕ್ಕಾಗಿ ಸುಳಿದು ಹೊತ್ತಾದದ್ದೆ ಗೊತ್ತಾಗಲಿಲ್ಲ. ಈ ಸಂದರ್ಭದಲ್ಲಿ ಜನಾರ್ಧನಯ್ಯನೇ ತನ್ನ ತಂದೆಯ ವಿಷಯವನ್ನು ಮರೆ ಮಾಚದೆ ಹೇಳಿಬಿಟ್ಟ. ಇದನ್ನು ಹೇಳಿದ್ದು ಅವನ ಮನಸ್ಸು ನೆಮ್ಮದಿಯಾಗಿತ್ತು.

''ಅರೆ? ಆಗಲೆ ಮೂರು ಘಂಟೆಯಾಯಿತೆ?" ಎಂದು ಸುಬ್ಬರಾಯ ಆಶ್ಚರ್ಯಪಟ್ಟದ್ದು ರಂಗಮ್ಮ, ಅವಳ ಹಿಂದೆ ಸಿಂಗರಿಸಿಕೊಂಡ ಸುಶೀಲೆಯೂ ಮನೆಗೆ ಬಂದಾಗ. ಅವಲಕ್ಕಿಗೆ ವಗ್ಗರಣೆಹಾಕಿ ಹುರುಳಿ ಹಪ್ಪಳ ಸುಟ್ಟಿದ್ದಳು ತ್ರಿಪುರಸುಂದರಿ.

ನಡುಮನೆಯಲ್ಲಿ ಹಾಸಿದ ಜಮಖಾನೆಯ ಮೇಲೆ ಗಂಡಸರೆಲ್ಲಾ ಬಂದು ಕುಳಿತರು. ಪುಷ್ಕಳ ತಿಂಡಿಯಾಯಿತು. ಜನಾರ್ಧನಯ್ಯನ ಕಣ್ಣು ಅಡಿಗೆ ಮನೆಯ ಕಡೆಗೇ ಇತ್ತು. ಶ್ರೀಧರಮೂರ್ತಿ ಎದ್ದುಹೋಗಿ ರಂಗಮ್ಮನಿಗೆ ಸುಶೀಲೆಯನ್ನು ಕರೆತಂದು ನಡುಮನೆಯಲ್ಲಿ ಕೂಡಿಸುವಂತೆ ಹೇಳಿದ. ತ್ರಿಪುರ ಸುಂದರಿಯೇ ಸುಶೀಲೆಯನ್ನು ಕರೆತಂದು ಕೂಡಿಸಿದಳು. ಮುದುಡಿಕೊಂಡು ಕುಳಿತಾಗ ಜನಾರ್ಧನನ ಕಣ್ಣಿಗೆ ಸೌಂದರ್ಯವೇ ಹೆಣ್ಣುರೂಪ ತಾಳಿ ತನ್ನೆದುರು ಮುದುಡಿ ನಾಚಿಕೆಯಿಂದ ಕುಳಿತ ಅನುಭವವಾಯಿತು.

ತನ್ನ ಪಾಲಿಗೆ ಇಂತಹ ರತಿ ದೊರಕುವಳೆಂದು ಕನಸು ಮನಸಿನಲ್ಲೂ ಜನಾರ್ಧನ ಎಣಿಸಿರಲಿಲ್ಲ. ತಲೆ ತಗ್ಗಿಸಿ ಕುಳಿತ ಸುಶೀಲೆ ತಲೆ ಎತ್ತಿ ನೋಡಲೇ ಇಲ್ಲ. ಬೊಗಸೆಗಣ್ಣನ್ನು ಮುಚ್ಚಿದ್ದ ತುಂಬುರೆಪ್ಪೆ, ಕರಿಯ ಕೇಶರಾಶಿ, ಗುಲಾಬಿ ಕೆನ್ನೆಯ ಚಲುವೆಯನ್ನು ಯಾವ ಕರಾರೂ ತಕರಾರೂ ಇಲ್ಲದೆ ಆಗುವುದೆಂದು ಜನಾರ್ಧನ ಆಗಲೆ ನಿಶ್ಚಯ ಮಾಡಿಕೊಂಡಿದ್ದ.

"ಹಾಡಲಿಕ್ಕೂ ಬರುತ್ತೆ ಸುಶೀಲೆಗೆ" ಎಂದ ಶ್ರೀಧರಮೂರ್ತಿ.

"ಬಾರದಿದ್ದರೂ ಪರವಾಗಿಲ್ಲ" ಎಂದು ಜನಾರ್ಧನ ತನ್ನರಿವಿಲ್ಲದೇ ಹೇಳಿದ್ದ. ಎಲ್ಲರೂ ನಕ್ಕುಬಿಟ್ಟರು. ಈ ಮಾತಿಗೆ ಸುಶೀಲೆಗೂ ನಗುಬಂದು ಮುಖದಲ್ಲಿ ತಿಳಿನಗೆಯ ಪೊರೆ ಮೂಡಿತು.

ಮೆಲ್ಲನೆದ್ದು ಸುಶೀಲೆ ಒಳಕ್ಕೆ ಹೊರಟುಹೋದಳು. ಕೊಂಚಹೊತ್ತು ಯಾರೂ ಏನೂ ಮಾತಾಡಲಿಲ್ಲ. ಸುಬ್ಬರಾಯನೇ ಪ್ರಾರಂಭಿಸಿದ.

"ತಿಪ್ಪಯ್ಯ, ಜಾತಕ ನೋಡಿ ಮಾವನವರು ಏನು ಹೇಳಿದರೂಂತ ಹೇಳ ಲಿಲ್ಲವೇ ನೀನು?"

''ಪ್ರಶಸ್ತವಾಗಿದೆ. ಎರಡು ಜಾತಕಗಳೂ ಸೊಗಸಾಗಿ ಹೊಂದು ತ್ತವೆ. ಮುವತ್ತೆರಡು ಗುಣ ಕೂಡಿಬಂದಿದೆ–ಅಂತ ಹೇಳಿದಮೇಲೆ ಇಲ್ಲಿಗೆ ಬರೋ ಏರ್ಪಾಟುಮಾಡಿದ್ದು'' ಎಂದು ತಿಪ್ಪಯ್ಯ ಹೇಳುವಾಗ ಒಂದು ವಿಷಯ ಹೇಳಿರಲಿಲ್ಲ. ನಾಗರಾಜ ಜೋಯಿಸರು ಲೆಖ್ಖಾಚಾರಹಾಕಿ ನೋಡಿ ದಾಗ ಈ ಕೂಟಕ್ಕೆ ಸಂತಾನಪ್ರಾಪ್ತಿಯಿಲ್ಲ ಎಂದು ಹೇಳಿದ್ದರು. ಅದೇಕೋ ಇದನ್ನು ಹೇಳುವುದು ಸರಿಯಲ್ಲ ಎಂದು ತಿಪ್ಪಯ್ಯನ ಮನಸ್ಸು ಹೇಳುತಿತ್ತು.

"ಸರಿ ಹಾಗಾದರೆ. ಮುಹೂರ್ತ ನೋಡುವುದುತಾನೆ ಉಳಿದಿರುವುದು?" ಎಂದ ಶ್ರೀಧರಮೂರ್ತಿ.

"ಹುಡುಗ ಒಪ್ಪಿದ್ದು ಬಿಟ್ಟಿದ್ದು ಗೊತ್ತಾಗಲಿಲ್ಲವಲ್ಲಾ?" ಎಂದಾಗ ಜನಾರ್ಧನಯ್ಯ ಮೂಕನಂತೆ ಕುಳಿತಿದ್ದ. ಮೌನ ಅಂದರೆ ಸಮ್ಮತ ಅಂತ ಎಲ್ಲರೂ ಅರ್ಥಮಾಡಿಕೊಂಡರು.

ದುಃಖಪೂರಿತ ಕಣ್ಣುಗಳಿಂದ ರಂಗಮ್ಮ ಬಂದು ಕುಳಿತಳು. ಯಜ ಮಾನರ ನೆನಪು ಬಂದಿತ್ತು. ಇದ್ದೊಬ್ಬ ಅಣ್ಣನೂ ಬಂದಿರಲಿಲ್ಲ. ತನ್ನ ಕಡೆ ಗೊಂದು ಗಂಡುಪಿಳ್ಳೆ ನಿಂತು ಮಾತಾಡಲು ಇಲ್ಲವಾಯಿತಲ್ಲಾ ಎಂದು ವ್ಯಥೆ ಪಟ್ಟಳು.

ತಿಪ್ಪಯ್ಯನೇ ಎಲ್ಲಾ ಮಾತೂ ಆಡಿದ. ರಂಗಮ್ಮ ಗೌರಮ್ಮನ ಯಜಮಾನರ ದೇಹಸ್ಥಿತಿಯ ವಿಷಯ ತಿಳಿದು, ಅವರೂ ಬಂದಿದ್ದರೆ ಚೆನ್ನಾ ಗಿತ್ತೆಂದುಕೊಂಡಳು. ಗೌರಮ್ಮನವರು ಹೇಳಿದಂತೆ ಪಿಳ್ಳಂಗೇರಿಯಲ್ಲಿ ರಂಗ ನಾಥಸ್ವಾಮಿ ಸನ್ನಿಧಿಯಲ್ಲಿ ವಿವಾಹ ಮಹೋತ್ಸವ ನಡೆಯತಕ್ಕದೆಂದು ಇತ್ಯರ್ಥವಾಯಿತು. ಗಂಡಿನವರು ಒಂದೆಳೆಸರ, ಒಂದು ಭಾರಿ ಸೀರೆ ಕೊಡುವು ದೆಂದೂ, ಎರಡು ಖರ್ಚೂ ಹೆಣ್ಣಿನವರೇ ವಹಿಸುವುದೆಂದೂ ತಿಪ್ಪಯ್ಯ ಮಾತಾಡಿ ದ್ದಕ್ಕೆ ಎರಡುಕಡೆಯವರ ಸಮ್ಮತಿಯೂ ದೊರಕಿತ್ತು. ಮಾತುಕಥೆಗಳು ಮುಗಿದಾಗ ಸಂಜೆ ಏಳು ಘಂಟೆಯಾಗಿತ್ತು. ಗೌರಮ್ಮನವರು ಸುಶೀಲೆಯನ್ನು

ಕರೆದು ದೇವರ ಮುಂದೆ ಉಡಿ ತುಂಬಿ ಎಲೆ ಅಡಿಕೆಯಲ್ಲಿ ಒಂದು ಖಣದ ತುಂಡಿಟ್ಟು ಕುಂಕುಮ ಹಚ್ಚಿದರು. ಸುಶೀಲೆ ಹಿರಿಯರಿಗೆಲ್ಲಾ ನಮಸ್ಕಾರ ಮಾಡಿದಳು.

ರಂಗಮ್ಮ ಕಡೆಯದಾಗಿ

"ತಂದೆಯಿಲ್ಲದ ಈ ಹುಡುಗೀನ್ನ ನಿಮ್ಮ ಮನೆಗೆ ಕಳಿಸ್ತಾ ಇದ್ದೇನೆ; ನಾನು ಬಡವಿ, ಅನಾಥೆ. ನಾನು ಕಷ್ಟಪಟ್ಟು ಇವಳನ್ನು ದೊಡ್ಡವಳನ್ನಾಗಿ ಮಾಡಿ ಗಂಡನ ಮನೆಗೆ ಕಳಿಸಬೇಕೆಂದಿದ್ದ ಆಸೆ ತಿಪ್ಪಯ್ಯನವರಿಂದ ಕೈಗೂಡಿದೆ. ಯಾವ ಜನ್ಮದ ಋಣಾನುಬಂಧವೋ ನಿಮ್ಮಂಥವರ ಮನೆ ನಮ್ಮ ಸುಶೀಲೆಗೆ ಸಿಕ್ಕಿದೆ. ನಿಶ್ಚಿಂತೆಯಿಂದ ಇನ್ನು ನಾನು ರಾಮಕೃಷ್ಣಾಂತ ಕಾಲ ಹಾಕ್ತೇನೆ" ಎಂದು ಹೇಳಿದಳು. ಗೌರಮ್ಮನವರು "ನಾವಿನ್ನೇನು ಸಿರಿವಂತರೆ ರಂಗಮ್ಮನವರೆ? ನಾವೂ ಬಡವರೆ! ಗಂಡ ಹೆಂಡ್ತಿ ಅನ್ಯೋನ್ಯವಾಗಿದ್ದರೆ ನಮ್ಮ ಕಷ್ಟಕ್ಕೆ ಅದೇ ಪ್ರತಿಫಲ. ಮಕ್ಕಳು ಎಲ್ಲಾದರೂ ಚೆನ್ನಾಗಿದ್ದರೆ ಸಾಕು" ಎಂದು ಮಾತು ಮುಗಿಸಿದರು.

ಲಕ್ಷ್ಮೀನಾರಾಯಣಸ್ವಾಮಿ ಗುಡಿಯಲ್ಲಿ ಶ್ರೀಧರಮೂರ್ತಿ ಅವತ್ತು ವೆಂಕಟೇಶ ಕಲ್ಯಾಣದ ಕಥೆ ಇಡಿಸಿದ್ದ. ಮನೆಮಂದಿ ಎಲ್ಲರೂ ಕಥೆ ಕೇಳಲು ಹೊರಟರು.

ಮರುದಿನ ಗೌರಮ್ಮನವರು ಹೊರಡುವುದಾಗಿ ತಿಳಿಸಿದರು. ಜನಾರ್ಧನಯ್ಯನಿಗೆ ರಜವಿರಲಿಲ್ಲ. ಗೌರಮ್ಮನವರು ಮನೆಯಲ್ಲಿ ಯಜಮಾನರ ದೇಹಸ್ಥಿತಿಯ ಕಾರಣದಿಂದ ಹೋಗಲೇಬೇಕೆಂದು ಹಟ ಹಿಡಿದರು. ಶ್ರೀಧರಮೂರ್ತಿಯ ಒತ್ತಾಯ ನಡೆಯಲಿಲ್ಲ. ತ್ರಿಪುರಸುಂದರಿ ಪಾಯಸ, ಚಿತ್ರಾನ್ನ ಮಾಡಿದ್ದಳು. ರಂಗಮ್ಮ, ಸುಶೀಲೆ ಅಲ್ಲಿಗೇ ಊಟಕ್ಕೆ ಬಂದಿದ್ದರು. ತಿಪ್ಪಯ್ಯ ಕೋರ್ಟಿನ ಕೆಲಸ ಮುಗಿಸಿಕೊಂಡು ಎರಡುದಿನ ಬಿಟ್ಟು ಊರಿಗೆ ಬರುವುದಾಗಿ ಹೇಳಿ ಹೊರಬಿದ್ದ.

ಊಟಮಾಡಿ ಎರಡು ಘಂಟೆ ಮೋಟಾರಿನಲ್ಲಿ ಗೌರಮ್ಮ-ಜನಾರ್ಧನಯ್ಯ ಹೊನ್ನಾಳಿಗೆ ಪ್ರಯಾಣ ಬೆಳಸಿದರು. ಹೊರಟು ನಿಂತಾಗ ಸುಶೀಲೆ ಇಬ್ಬರಿಗೂ ನಮಸ್ಕಾರ ಮಾಡಿದಳು. ಜನಾರ್ಧನಯ್ಯನು, ಸುಬ್ಬರಾಯ, ತಿಪ್ಪಯ್ಯ, ಶ್ರೀಧರಮೂರ್ತಿ, ತ್ರಿಪುರಸುಂದರಿ ಇವರಿಗೆ ನಮಸ್ಕಾರ ಮಾಡಿದ.

ಜನಾರ್ಧನಯ್ಯನಿಗೆ ತನ್ನ ಭಾವಿ ಹೆಂಡತಿಯನ್ನು ಎಷ್ಟು ನೋಡಿದರೂ ಸಾಲದು. ಮೋಟಾರು ಹೊನ್ನಾಳಿಗೆ ಬಹುಬೇಗ ಬಂದಂತೆ ಭಾಸವಾಯಿತು. ಅವನಿಗೆ ಸುಶೀಲೆಯ ರೂಪರೇಖೆಗಳ ವಿನ್ಯಾಸವನ್ನು ನೆನೆಯುತ್ತಾ ಬಂದಾಗ ದಾರಿ ಸವೆದದ್ದು ಗೊತ್ತಾಗುತ್ತದೆಯೆ ?

೬

"ಸಾಹೇಬರು ಇದ್ದಾರೇನಯ್ಯ ಒಳಗೆ?" ಎಂದು ಶ್ರೀಧರಮೂರ್ತಿ ಪೇಟ ಕಟ್ಟಿ ಡವಾಳಿ ಹಾಕಿದ ದಫೆದಾರನನ್ನು ಕೇಳಿದ. ಅವನು ತಲೆ ಆಡಿಸಿ ಕೈಒಡ್ಡಿದ. ತನ್ನ ಹೆಸರು ಬರೆದ ಚೀಟಿ ಅವನ ಕೈಗೆ ಕೊಟ್ಟ. ಒಳಗೆ ಹೋಗಿ ಸ್ವಲ್ಪಹೊತ್ತಿನಲ್ಲಿ ಬಂದು 'ಸಾಹೇಬರು ಬರಹೇಳಿದರು' ಎಂದುಹೇಳಿದ.

ತಲೆಯ ಮೇಲೆ ಪಂಖ ಆಡುತ್ತಿತ್ತು. ತುಂಬು ಮೀಸೆಯ ಸೂಟು ಧಾರಿ ಡೆಪ್ಟಿ ಕಮಿಷನರ್ ಸಾಹೇಬರು ಠೀವಿಯಿಂದ ಕೂತಿದ್ದರು. ಶ್ರೀಧರ ಮೂರ್ತಿ, ಅವನ ಹಿಂದೆ ಸುಬ್ಬರಾಯ ಬಂದದ್ದು ಕಂಡು, ನಗುಮುಖದಿಂದ

"ಬನ್ನಿ ಶ್ರೀಧರಮೂರ್ತಿ. ಇವರೇನೋ ನಿಮ್ಮ ಭಾವನ್ಮೈದ?"

"ಹೌದು ಸಾರ್. ಪೋಸ್ಟ್ ಮೇಸ್ಟ್ರು, ಸಾಹೇಬರು ಎಲ್ಲಾ ಹೇಳಿದ್ದಾರೆಂತ ಕಾಣುತ್ತೆ"

"ಎಲ್ಲಾ ಹೇಳಿದರು. ವೇಕೆನ್ಸಿಗಳೇ ಇಲ್ಲ. ಆದರೂ ನಿಮ್ಮ ಹುಡುಗನಿಗೆ ನಾನು ಇಲ್ಲಾ ಅನ್ನೋಹಾಗೇ ಇಲ್ಲವಾಗಿದೆ ಈಗ"....ಎಂದೆನ್ನುತ್ತಾ ಮೇಜಿನ ಮೇಲಿನ ಘಂಟೆ ಬಾರಿಸಿದರು, ಆಳು ಬಂದು ನಿಂತ. ಪರ್ಸನಲ್ ಕ್ಲಾರ್ಕನ್ನು ಕರೆಯುವಂತೆ ತಿಳಿಸಿದರು. ಕೊಂಚಹೊತ್ತಿನಲ್ಲೇ ಒಂದು ಬಡಕಲು ಆಸಾಮಿ ಪ್ರತ್ಯಕ್ಷವಾಯಿತು. ಅತಿವಿನಯದಿಂದ ಕೈಕಟ್ಟಿ ನಿಂತ ಅವರನ್ನು ಕುರಿತು ಅರ್ಜಿದಾರರ ಫೈಲು ತರುವಂತೆ ತಿಳಿಸಿದರು. ಆತ ತಂದ ಫೈಲಿನಲ್ಲಿ ಕೊಂಚಹೊತ್ತು ತಲ್ಲೀನರಾಗಿ, ಆಮೇಲೆ ಗಂಭೀರವಾಗಿ "ಶ್ರೀಧರ ಮೂರ್ತಿ, ನಿಮ್ಮ ಹುಡುಗ ಅರ್ಜಿ ಕೊಟ್ಟಿಲ್ಲವೆ?"

"ತಂದುಕೊಟ್ಟಿದ್ದೇನೆ ಸಾರ್ ಆಗಲೇ"

"ಎಲ್ಲಿ ಇದರಲ್ಲಿ ಕಾಣೋದೆ ಇಲ್ಲವಲ್ಲಾ? ವೆಂಕಪ್ಪಯ್ಯ, ಅರ್ಜಿಗಳನ್ನೆಲ್ಲಾ ಜೋಡಿಸಿದ್ದೀರಾ?...."

"ಒಂದು ನಿಮಿಷ...." ಎಂದು ವೆಂಕಪ್ಪಯ್ಯ ವಿದ್ಯುತ್ ವೇಗದಲ್ಲಿ ಆ ಹಾಳೆಗಳಲ್ಲಿ ಕೈ ಆಡಿಸಿ ಸುಬ್ಬರಾಯನ ಅರ್ಜಿ ಹುಡುಕಿಕೊಟ್ಟ.

"........, ಸರಿ....ನನ್ನ ಮೇಜಿನ ಮೇಲಿರಲಿ. ನೀವು ಏನೂ ಯೋಚಿಸಬೇಡಿ...."

"ಬಡವರು ಮಹಾಸ್ವಾಮಿ...."

"ನನಗೆ ಗೊತ್ತಿದೆ ಶ್ರೀಧರಮೂರ್ತಿ–ನಿಶ್ಚಿಂತೆಯಾಗಿ ಹೋಗಿ. ನಾನು ಒಪ್ಕೊಳ್ಳೋ ಮನುಷ್ಯನಲ್ಲ–ಒಪ್ಪಿದಮೇಲೆ ದಡ ಕಾಣಿಸೇ ಕಾಣಸ್ತೇನೆ...."

"ತುಂಬಾ ಉಪಕಾರ ಮಾಡಿದ ಹಾಗಾಯ್ತು"

"ಎಲ್ಲಾ ಆ ದೇವರ ದಯ...."

''ನಮಸ್ಕಾರ....ಬರ್ತೀವಿ''

"ನಮಸ್ಕಾರ...."

ಮನೆಗೆ ಬರುತ್ತಿದ್ದಂತೆಯೇ ತ್ರಿಪುರಸುಂದರಿ ''ಹಣ್ಣೋ'', ''ಕಾಯೋ'' ಎಂದೆನ್ನುತ್ತಾ ಎದುರುಗೊಂಡಳು.

"ಮನೆಯಿಂದ ಹೊರಡುವಾಗಲೇ ಲಕ್ಷ್ಮೀನಾರಾಯಣಸ್ವಾಮಿಗೆ ಹಣ್ಣು ಕಾಯಿ ಮಾಡಿಸಿದ ಮುತ್ತೈದೆ ಎದುರಿಗೆ ಸಿಕ್ಕಾಗಲೇ ಹೋದ ಕೆಲಸ ಆಗುತ್ತೆಂದು ಹೇಳಿರಲಿಲ್ಲವೆ ?" ಎಂದ ಶ್ರೀಧರಮೂರ್ತಿ.

"ನಮ್ಮ ದೇವರು ದೊಡ್ಡವನು–ಹಾಗಾದರೆ"

"ಕೆಲಸ ಆಗದಿದ್ದರೆ ನಿನ್ನ ದೇವರು ಸಣ್ಣವನೇನು ?"

"ಹಹ....ಹಾಗೆಲ್ಲಾದರೂ ಉಂಟೆ? ಇಷ್ಟಾಗಿ ನಾನು ದೊಡ್ಡವನು ಚಿಕ್ಕವನು ಎಂದರೆ ಅವನು ಹಾಗೇ ಆಗುತ್ತಾನೆಯೆ ?"

"ಪರವಾಗಿಲ್ಲ ಸುಬ್ರಾಯ, ನಿನ್ನ ತಂಗಿ ವೇದಾಂತಾನೂ ಮಾತಾಡ್ತಾಳೆ"

"ಮತ್ತಿನ್ನೇನು? ನೀನು ಸದಾ ಹರಿಕಥೆ ಮಾಡಿಸು. ಆ ದಾಸರು ದೇವರು ದಿಂಡರನ್ನು ಭಕ್ತಾದಿಗಳ ಕಿವಿಗೆ ತುಂಬಿ ಎಲ್ಲರೂ ವೇದಾಂತದ ಮಾತಾಡೋ ಹಾಗೆ ಮಾಡ್ತಾರೆ"

"ನಾನೇನು ಈಗ ಅಂಥ ವೇದಾಂತದ ಮಾತಾಡಿದ್ದೂಂದ್ರೆ ?"

"ದೇವರ ವಿಷಯವೆಲ್ಲಾ ವೇದಾಂತ ತಾನೆ ?"

''ಅದೇನು ವೇದಾಂತವೋ ನೀವೇನು ಟೀಕೆ ಮಾಡಿದರೂ ಚಿಂತಿಲ್ಲ. ನಮ್ಮ ಸುಬ್ಬರಾಯನಿಗೆ ಕೆಲಸ ಸಿಕ್ಕಿದ್ದು ಮುಖ್ಯ ಬೇಕಾದ್ದು ನನಗೆ''

''ಆರ್ಡರು ಕೈಗೆ ಕೊಟ್ಟರೂಂತ ತಿಳಿದೆಯೇನೆ ? ''

"ಮತ್ತೆ"

"ಪರಿಶೀಲನೆಯಲ್ಲಿದೆ, ಸಹಾನುಭೂತಿಯಿಂದ ನೋಡಲಾಗುತ್ತೆ ಅನ್ನೊ ಉತ್ತರ ಬಂದಿದ್ದು''

"ಅಯ್ಯೊ ಪುಸ್ಯ–ಅಷ್ಟೇನೇ"

"ಆದರೆ, ಸಾಹೇಬರು ಹೇಳಿರೋ ವರಸೆ ನೋಡಿದರೆ ನಾಳೆ ನಾಡಿದ್ದರಲ್ಲೇ ಆರ್ಡರು ಬರಬಹುದೂಂತ ನನ್ನ ನಂಬಿಕೆ''

"ನನಗೆ ಆ ನಂಬಿಕೆ ಇಲ್ಲ ಭಾವ....''

"ಯಾಕೆ ?"

"ಆ ಕ್ಲಾರ್ಕು ವೆಂಕಪ್ಪಯ್ಯ ಇದ್ದಾನೆ ನೋಡು. ಅವನೇನೋ ಕಿತಾಪತಿ ಮಾಡ್ತಾ ಇದ್ದಾನೇಂತ ನನ್ನ ಅನುಮಾನ"

"ಛಿ ಛಿ ಪಾಪ–ಮಕ್ಕಳೊಂದಿಗ ಅವನು ಹಾಗೆ ಮಾಡೋಲ್ಲ. ಅವನೂ ಗೊತ್ತು ಕಣೊ ನನಗೆ. ಇವತ್ತು ನೋಡೋಕೆ ಬನ್ನೀಂತ ಅವನೇ ಹೇಳಿದ್ದು"

''ಹಾಗೇನು ? ಹಾಗಾದರೆ ರೂಪಾಯಲ್ಲಿ ಎಂಟಾಣೆ ಭಾಗ ನಂಬಿಕೆ ಇಡಬಹುದೆ ?"

"ನನಗೇನೋ ಹದಿನೈದಾಣೆ ಭಾಗ ನಂಬಿಕೆ. ನೋಡು ಬೇಕಾದರೆ" ಎಂದು ಹೇಳುವ ಹೊತ್ತಿಗೆ ಸರಿಯಾಗಿ ಲಕ್ಷ್ಮೀನಾರಾಯಣಸ್ವಾಮಿ ಗುಡಿಯ ಘಂಟೆ ಹೊಡೆದದ್ದು ಕೇಳಿಬಂತು. ತ್ರಿಪುರಸುಂದರಿಯ ಮುಖದಲ್ಲಿ ತೃಪ್ತಿ, ಸಂತೋಷಗಳು ತಾಂಡವಾಡುತ್ತಿದ್ದವು.

ಘಂಟೆ ಹೊಡೆದ ಶಕುನ ನಿಜವಾಗಿತ್ತು. ಸುಬ್ಬರಾಯನಿಗೆ ಚಿತ್ರದುರ್ಗ ತಾಲ್ಲೋಕು ಆಫೀಸಿನಲ್ಲಿ ಕೆಲಸವಾದ ಆರ್ಡರು ಎರಡು ವಾರಗಳ ನಂತರ ಬಂದಿತ್ತು. ಶಿವಮೊಗ್ಗ ಡಿಸ್ಟ್ರಿಕ್ಟಿನಲ್ಲಿ ಕೆಲಸಗಳು ಸರಿಯಾದ್ದು ಖಾಲಿ ಇಲ್ಲದ ಪ್ರಯುಕ್ತ ಚಿತ್ರದುರ್ಗದ ಡಿಪ್ಟಿ ಕಮಿಷನ್ನರಿಗೆ ಸುಬ್ಬರಾಯನಿಗಾಗಿ ಬರೆದು ಕೆಲಸ ಕೊಡಿಸಿದ್ದರು. ಈ ವಿಷಯ ತಿಳಿದ ನಾಗರಾಜ ಜೋಯಿಸರು ಸಂತೋಷಪಟ್ಟರು. ರಾಜೀವಿ ಗಂಡನೊಡನೆ ಪುಟ್ಟ ಮನೆಮಾಡಿ ಸಂಸಾರ ಮಾಡುವ ಹೊಂಗನಸು ಕಂಡಳು. ಎರಡನೇ ಮುಟ್ಟು ಕಳೆದು ಹದಿನಾರನೆ ದಿನದ

ನಂತರ ಒಳ್ಳೆ ಮುಹೂರ್ತ ನೋಡಿ ಜೋಯಿಸರು ಲಕ್ಷ್ಮಣನಿಗೆ ಸಿಷೇಕ ಪ್ರಸ್ತದ ವಿಚಾರ ಬರೆದರು. ಲಕ್ಷ್ಮಣ ಈ ವಿಚಾರ ಸುಬ್ಬರಾಯನಿಗೆ ತಿಳಿಸಿದ.

ಲಕ್ಷ್ಮಣನ ಹೆಂಡತಿ ಸುಮಿತ್ರೆಗೆ ಹೊಟ್ಟೆನೋವು ಬರುತ್ತಿತ್ತು. ಯಾವ ವೈದ್ಯಕ್ಕೂ ಅದು ಜಗ್ಗಿರಲಿಲ್ಲ. ಈಚೆಗೆ ಅದರ ಜೊತೆಗೆ ನಾಲ್ಕನೇ ತಿಂಗಳಲ್ಲಿ ಮೈಯಿಳಿದುಹೋಗಿ ಹಾಸಿಗೆ ಹಿಡಿದಿದ್ದಳು. ಆದಕಾರಣ ಲಕ್ಷ್ಮಣ ಊರು ಬಿಟ್ಟು ಬರುವಹಾಗೇ ಇರಲಿಲ್ಲ. ತ್ರಿಪುರಸುಂದರಿಯೇ ಮಕ್ಕಳೊಡನೆ ಸುಬ್ಬ ರಾಯನ ಜೊತೆಗೆ ಹಿರೇಹಳ್ಳಿಗೆ ಹೋಗುವುದೆಂದು ನಿಶ್ಚಯವಾಗಿತ್ತು.

ನಾಗರಾಜ ಜೋಯಿಸರು ಸೊಗಸಾದ ಹಾಸಿಗೆ ಹೊಲಿಸಿದ್ದರು. ದಾವಣಗೆರೆಯಿಂದ ಒಂದು ಜೊತೆ ಒಳ್ಳೆ ಕಂಬಳಿ ತರಿಸಿದ್ದರು. ಒಬ್ಬಳೇ ಮಗಳನ್ನು ಗಂಡನ ಮನೆಗೆ ಕಳಿಸುವುದರಲ್ಲಿ ಇದ್ದದ್ದರಲ್ಲೇ ತಾಪತ್ರಯಪಟ್ಟು ಕೊಂಡು ಅಳಿಯನಿಗೆ ಕೊಡಬೇಕಾದ ಉಡುಗೊರೆಯ ವಸ್ತುಗಳನ್ನು ಕೊಂಡಿ ಟ್ಟಿದ್ದರು. ರಿಂದಮ್ಮನವರ ಸಡಗರ ಹೇಳತೀರದು. ಪ್ರಸ್ತದ ರೂಮಿನಲ್ಲಿಡುವ ಗೋಪುರದ ಲಡ್ಡಿಗೆ, ಖರ್ಜಿಕಾಯಿ, ಗುಳ್ಳೊರಿಗೆ, ಲಡ್ಡಿಗೆ, ಚಕ್ಕಲಿ–ಇತ್ಯಾದಿ ಭಕ್ಷ್ಯಗಳನ್ನು ಮಾಡಿ ಅಣಿಮಾಡಿದ್ದರು.

ಜೋಡೆತ್ತಿನ ಗಾಡಿ ಮನೆಯ ಮುಂದೆ ನಿಂತಾಗ ಹಳ್ಳಿಯ ಹುಡುಗರು, ನೆರೆಹೊರೆಯವರು ಮನೆಯ ಮುಂದೆ ನೆರೆದಿದ್ದರು. ತ್ರಿಪುರಸುಂದರಿಯ ಮಕ್ಕಳಿಬ್ಬರಲ್ಲಿ ಪರಕಾರ ಹಾಕಿಕೊಂಡು ಠಣಕ್ಕೆಂದು ಹಿರಿಯಾಕೆ ಗಾಡಿಯಿಂದ ಹಾರಿದಳು. "ಅಮ್ಮಾ....ನಾನೂ" ಎಂದು ಕಿರಿಯವಳು ರಾಗ ತೆಗೆದಳು. ಸುಬ್ಬರಾಯ ಇಳಿದು ಕಿರಿಯವಳನ್ನು ಇಳಿಸಿದ. ತ್ರಿಪುರಸುಂದರಿ, ಸುಬ್ಬ ರಾಯ, ಮಕ್ಕಳನ್ನು ನಾಗರಾಜ ಜೋಯಿಸರು, ರಿಂದಮ್ಮ ಆದರದಿಂದ ಎದುರು ಗೊಂಡು ಒಳಕ್ಕೆ ಕರೆದೊಯ್ದರು.

ರಾಜೀವಿ ಬಾಗಿಲ ಹಿಂದಿನಿಂದ ಕದ್ದು ಗಂಡನನ್ನು ನೋಡಿ, ಅವರು ಒಳಕ್ಕೆ ಬರುವಹೊತ್ತಿಗೆ ಅಡಿಗೆ ಮನೆ ಸೇರಿಬಿಟ್ಟಿದ್ದಳು.

ಮಂದವಾದ ದೀಪ ಅಲ್ಲಾಡದಂತೆ ಉರಿಯುತ್ತಿತ್ತು. ತಲೆ ತಗ್ಗಿಸಿ ಕೊಂಡು ಅದರ ಬಳಿ ನಿಂತ ರಾಜೀವಿಯ ಮುಖದ ಮೇಲೆ ಆ ನಂದಾ ದೀಪದ ಹೊಂಬೆಳಕು ಚೆಲ್ಲಿ, ನಾಚಿಕೆ, ಗಾಬರಿಗಳು ತುಂಬಿದ ಅವಳ ಚೆಲುವನ್ನು ಸುಬ್ಬರಾಯ ಸವಿಯುತ್ತಿದ್ದ.

ಅವನ ಆಶಾ ಜ್ಯೋತಿ ರಾಜೀವಿಯ ಬೆಳಕೇ ದೀಪವನ್ನು ಬೆಳಗಿಸುತ್ತಿರಬೇಕೆಂದು ಸುಬ್ಬರಾಯನ ಕಲ್ಪನೆ. ಬಳಿ ಸಾರಿ ಅವಳ ಕೈಗಳೆರಡನ್ನೂ ಹೂವಿನಂತೆ ಕೈಯ್ಯಲ್ಲೆತ್ತಿಕೊಂಡು ಮಂಚದಮೇಲೆ ಕೂಡಿಸಿಕೊಂಡ. ರಾಜೀವಿಯ ಹಣೆಯಮೇಲೆ ಬೆವರಿನ ಹನಿ ಸಾಲಿಟ್ಟವು. ತುಂಬು ರೆಪ್ಪೆಯ ಕಣ್ಣು ಮುಚ್ಚಿದಾಕೆ ತೆಗೆಯಲೇ ಇಲ್ಲ. ಸುಬ್ಬರಾಯ ಅವಳ ಗಲ್ಲ ಹಿಡಿದು ಅವಳ ಮುಖವನ್ನೆತ್ತಿದ. ಭಾರವಾಗಿ ಉಸಿರಾಡುತ್ತಿದ್ದ ಅವಳ ಎದೆಯ ಏರಿಳಿತ, ಬಾಳ ಕಡಲು ಹುಣ್ಣಿಮೆಯ ಚಂದ್ರಮನ ದೆಸೆಯಿಂದ ಮೂಡಿದ ಅಲೆಗಳಂತೆ ಭಾಸವಾಯಿತು.

ಮಹರಾಯಿತಿ ಮಾತೇ ಆಡಲೊಲ್ಲಳು. ಸುಬ್ಬರಾಯ ಏನೇನೋ ಮಾತಾಡಿದ. ಅವನಿಗೂ ಮಾತು ಹೊರಡದು; ಉದ್ವೇಗದಿಂದ ಧ್ವನಿ ಭಾರವಾಗಿತ್ತು. ಮಾತಾಡಿಸಬೇಕೆಂಬ ಹಂಬಲದಿಂದ ಏನೋ ಮಾತು ಹೊರಬೀಳುತ್ತಿತ್ತು.

ಒಂದು ನಿಮಿಷ ಅವನ ಚಿತ್ತದಲ್ಲಿ ಸುಶೀಲೆಯ ನೆನಪು ಮಿಂಚಿನಂತೆ ಹೊಳೆದು ಮಾಯವಾಯಿತು. ರಾಜೀವಿ ಸುಶೀಲೆಯಷ್ಟು ರೂಪವತಿಯಲ್ಲ ನಿಜ. ಇವಳ ಅರಿಶಿನ ಗಲ್ಲದಲ್ಲಿ ಮೂಡಿದ ಪತಿ ಪ್ರೇಮದ ಮಾದಕತೆ ಸುಶೀಲೆಯ ಚಂಚಲ ಕಣ್ಣಲ್ಲಿ ಮೂಡೀತೆ! ಸುಶೀಲೆಯ ಕಣ್ಣಲ್ಲಿ ಕೋರೈಸುವ ಬೆಳಕಿದ್ದರೆ, ರಾಜೀವಿಯ ಕಣ್ಣಲ್ಲಿ ಕಾಂತಿಯುಕ್ತ ತೇಜಸ್ಸು.

ಸುಶೀಲೆ–ರಾಜೀವಿ, ಎರಡು ಹೆಣ್ಣುಗಳ ನಡುವೆ ತನ್ನ ಹೃದಯ ಸಿಕ್ಕಿ ಎರಡು ಸುಂದರ ಗುಲಾಬಿಗಳ ಮಧುರ ಮಧುಪರ್ಕವನ್ನು ಸವಿಯಲು ಹೊರಟ ಭ್ರಮರ ಅಲ್ಲಿಂದ ಇಲ್ಲಿಗೆ ಇಲ್ಲಿಂದ ಅಲ್ಲಿಗೆ ಅಲೆದಾಡುವಂತೆ ಸುಬ್ಬರಾಯನ ಚಿತ್ತ ಜೋಕಾಲಿಯಾಡಿತು. ಇದೆಂತಹ ಯೋಚನೆ? ಸುಶೀಲೆಯನ್ನು ಮರೆತು ಮೋಹಿನಿಯಂತೆ ಬಳಿ ಕುಳಿತ ರಾಜೀವಿಯ ಮೈ ನೇವರಿಸುತ್ತಾ ಕಾಡುವ ಮಾಯಾವಿ ಸುಶೀಲೆಯನ್ನು ತನ್ನ ಮನದಿಂದ ಕಿತ್ತೊಗೆಯಲು ಹವಣಿಸಿದ. "ರಾಜೀವಿ" ಎಂದು ಮಧುರವಾಗಿ ಪ್ರೇಮ ತುಂಬಿದ ಮಾತಿನಲ್ಲಿ ಕರೆದ. ಅರೆ ತೆರೆದ ಕಣ್ಣಲ್ಲಿ ಸುಬ್ಬರಾಯನನ್ನು ನೋಡಿದಳು. ಅವಳ ಮುಂಗುರುಳು ನೇವರಿಸಿ ಗಲ್ಲಕ್ಕೆ ಗಲ್ಲ ಹಚ್ಚಿದ.

ಅವನ ತೋಳತೆಕ್ಕೆಯಲ್ಲಿ ಬಂಧಿತಳಾಗಿ ಪಲ್ಲಂಗದಲ್ಲಿ ಹೊರಳಿದಳು ರಾಜೀವಿ.

ನಿದ್ರೆ ಬಂದಂತೆ ಭಾಸವಾಯಿತು ಸುಬ್ಬರಾಯನಿಗೆ. ಕಣ್ಣುಮುಚ್ಚಿ ಮಲಗಿದ. ರಾಜೀವಿಗೆ ನಿದ್ರೆಬಾರದು. ತನ್ನ ಪತಿ ಮಲಗಿದ್ದು ಅವಳಿಗೆ ಧೈರ್ಯ ತಂದುಕೊಟ್ಟಿತು. ನಂದಾದೀಪ ದಪ್ಪವಾಗಿ ಪ್ರಜ್ವಲಿಸುತ್ತಿತ್ತು. ನಿಶ್ಚಿಂತೆಯಾಗಿ ನಿದ್ರಿಸಿದ ಸುಬ್ಬರಾಯನನ್ನು ಆ ಬೆಳಕಿನಲ್ಲಿ ತೃಪ್ತಿಯಾಗುವವರೆಗೆ ದಿಟ್ಟಿಸಿ ನೋಡಿದಳು. ನೀಳವಾದ ಮೂಗು, ಕುಡಿ ಮೀಸೆ, ಎತ್ತರವಾದ ಹಣೆ, ಹರನಾದ ಮೈಕಟ್ಟು ಕಂಡು ಮೆಚ್ಚಿಕೊಂಡಳು. ತನ್ನರಿವಿಲ್ಲದಂತೆ ಕೈಗಳು ಅವನ ಹಣೆಯ ಮೇಲಾಡುತ್ತಿದ್ದವು. ಹಾಗೇ ಅವನ ಎದೆಯಮೇಲೆ ಒರಗಿ ನಿಶ್ಚಿಂತೆಯಾಗಿ ನಿದ್ರೆಹೋದಳು.

ನಾಲ್ಕನೆ ದಿನ ಮಂಗಳವಾರ; ಐದನೇ ದಿನ ಹೊರಡಬಾರದು, ಗುರುವಾರ ಮುಹೂರ್ತ ಚೆನ್ನಾಗಿಲ್ಲ. ಶುಕ್ರವಾರ ಹೆಣ್ಣುಮಗಳನ್ನು ಮನೆಯಿಂದ ಕಳಿಸುವುದೆ?—ಅಂತೂ ಇಂತೂ ಭಾನುವಾರದ ತನಕ ಸುಬ್ಬರಾಯನ ಪ್ರಯಾಣ ಎಳೆಯಿತು.

ಹೊರಡುವುದಕ್ಕೆ ಮುಂಚೆ, ಶುಕ್ರವಾರದ ದಿನ ಹುಣ್ಣಿಮೆ ಬೆಳದಿಂಗಳೂಟ ಏರ್ಪಡಿಸಿದ್ದರು. ನಾಗರಾಜ ಜೋಯಿಸರು ಗಾಡಿಕಟ್ಟಿಸಿ ಚೆಬ್ಬೂರು ತೊರೆಯ-ದಡಕ್ಕೆ ಹೋಗಿದ್ದರು. ಆ ತೊರೆ ಮುಂದೆ ಹರಿದು ತುಂಗಭದ್ರಾ ನದಿಗೆ ಸೇರುತ್ತದೆ. ಬಂಡೆಗಳ ನಡುವೆ ಹರಿಯುವ ಈ ಕಿರುನದಿಯ ದಡದಲ್ಲಿ ತ್ರಿಪುರಸುಂದರಿ, ರಾಜೀವಿ, ಸುಬ್ಬರಾಯ, ಜೋಯಿಸರು ಪೂರ್ಣಚಂದ್ರನ ಹಾಲು ಸುರಿದಂಥ ಬೆಳದಿಂಗಳಲ್ಲಿ ಕುಳಿತಿದ್ದರು. ಬುಟ್ಟಿಯಿಂದ ರಿಂದಮ್ಮ ಬಿಸಿ ಬೇಳೆ ಹುಳಿಯನ್ನದ ಕೊಳಗ ತೆಗೆದರು. ಅಡಿಕೆ ಹಾಳೆಗಳನ್ನು ನೀರಿನಲ್ಲಿ ನೆನಸಿ ಜೋಯಿಸರು ತಂದರು. ತ್ರಿಪುರಸುಂದರಿಯ ಹಾಸ್ಯ ಸುಬ್ಬರಾಯನ-ರಾಜೀವಿಯ ಕಳ್ಳನೋಟ, ಉತ್ಸಾಹದಿಂದ ಸಡಗರದಿಂದ ಉಪಚಾರ ಮಾಡಿ ಬಡಿಸುವ ರಿಂದಮ್ಮನವರ ಅಕರಾಸ್ತಿಯ ನಡುವೆ ಬೆಳದಿಂಗಳೂಟ ನಡೆದಿತ್ತು. ತನ್ನರಸಿಯನ್ನು ತೊರೆಯ ಬಳಿ ಕರೆದೊಯ್ದು ಕೈ ತೊಳೆಸಿ ಕರೆದು ತಂದ ಸುಬ್ಬರಾಯ. ಬೆಳದಿಂಗಳಲ್ಲಿ ಬೆಳಗಿದ ರಾಜೀವಿಯನ್ನು ಕಂಡು

ಪೆಗ್ಗೇ ಹಿಗ್ಗಿದ ಸುಬ್ಬರಾಯ. ಗಾಡಿ ಮತ್ತೆ ಹಿರೇಹಳ್ಳಿ ತಲುಪಿದಾಗ ರಾತ್ರಿ ಹತ್ತು ಘಂಟೆಯಾಗಿತ್ತು.

ಜೋಯಿಸರಿಗೆ, ರಿಂದವ್ಮನಿಗೆ ರಾಜೀವಿ ಕಾಲುಮುಟ್ಟಿ ನಮಸ್ಕರಿಸಿ ದಾಗ ದುಃಖ ಉಕ್ಕೇರಿ ಬಂದಿತ್ತು. ಇದೆಂತಹ ಹಿತಕರವಾದ ನೋವು! ಗಂಡನೊಡನೆ ಹೊರಡುವ ಸಂತೋಷದಲ್ಲಿ, ಅಪ್ಪ ಅಮ್ಮಂದಿರನ್ನು ಅಗಲುವ ವ್ಯಥೆ. ರಿಂದವ್ಮನವರ ಕರುಳು ಕಿತ್ತುಬಂತು; ತಾಯಿ ಕರುಳು ಮಗಳು ಮನೆಯಿಂದ ಹೊರಡುವುದನ್ನು ನೋಡಿ ಅತಿ ವ್ಯಥೆಪಟ್ಟಿತು. ಜೋಯಿಸರ ಕಣ್ಣೂ ಒದ್ದೆಯಾಯಿತು. ಆಚೀಚೆ ಮನೆಯವರೆಲ್ಲಾ ಈ ದೃಶ್ಯ ಕಂಡು ಕಣ್ಣೀರು ಮಿಡಿದರು. ಸುಬ್ಬರಾಯನ ಕಣ್ಣೂ ತೇವಗೊಂಡುವು. ತ್ರಿಪುರಸುಂದ ರಿಯೂ ಸೆರಗು ಕಣ್ಣಿಗೆ ಹಚ್ಚಿದಳು. ಇದೆಲ್ಲಾ ಒಂದು ಕ್ಷಣಮಾತ್ರ. ಜೋಯಿ ಸರು ರಾಜೀವಿಯ ತಲೆ ಸವರಿ "ಗಂಡ ಹೇಳಿದಹಾಗೆ ಕೇಳಿಕೊಂಡು ಹತ್ತು ಜನದ ಕೈಲಿ ಸೈ ಅನ್ನಿಸಿಕೊಳ್ಳೋಹಾಗೆ ಬಾಳಬೇಕು ತಾಯಿ. ಶುಭಮಸ್ತು, ಹೋಗಿಬಾ" ಎಂದು ಹರಸಿದರು. ಉಡಿ ತುಂಬಿಸಿಕೊಂಡು ಹಳದಿಯ ನಿಂಬಾ ವಳಿ ಪತ್ತಲ ಉಟ್ಟ ರಾಜೀವಿ ನಿಜಕ್ಕೂ ಗಂಡನ ಮನೆಗೆ ಹೋಗುವಾಗ ಬಲು ಚೆಲುವಾಗಿ ಕಾಣುತ್ತಿದ್ದಳು. ಮನೆಯ ಮುಂದೆ ಕಟ್ಟಿದ ಹಸು "ಅಂಬಾ" ಎಂದು ಕೂಗಿತು. ರಾಜೀವಿ ಅದರ ಬಳಿ ಬಂದು ಮೈದಡವಿ–"ಹೋಗಿ ಬರ್ತೀನಿ ತುಂಗಾ" ಎಂದಳು. ಕರುವಿನ ಮುಖವೆತ್ತಿ ಮುದ್ದಿಸಿದಳು, ಅದರ ಮೈಮೇಲೆ ಕೈಯಾಡಿಸಿ ಬಂದಳು. ಕರಿಯ ನಾಯಿ ಬಾಲ ಆಡಿಸುತ್ತಾ ನಿಂತಿತ್ತು. "ಬರ್ತೀನಿ ಮಾದಾ" ಎಂದು ನಾಯಿಗೂ ಹೇಳಿದಳು. ಒಮ್ಮೆ ತಿರುಗಿ ಮನೆಯನ್ನೆಲ್ಲಾ ನೋಡಿದಳು. ಕಂಭ ಕಂಭವೂ ಕಣ್ಣೀರು ಮಿಡಿಯು ತ್ತಿರುವಂತೆ ಅವಳಿಗನ್ನಿಸಿತು.

ಹೊಸ ಪಂಚೆ, ಕರಿಯ ಕೋಟು, ಟೋಪಿ, ಮೇಲೆ ಶಲ್ಯ ಹೊದ್ದ ಯುಜ ಮಾನರ ಜೊತೆಗೆ ರಾಜೀವಿ ಗಾಡಿಯಲ್ಲಿ ಕುಳಿತಳು. ಝುಲ್ ಝುಲ್ ಎಂಬ ಸದ್ದಿನೊಡನೆ ಜೋಡೆತ್ತಿನಗಾಡಿ ಹಿರೇಹಳ್ಳಿಯನ್ನು ಬಿಟ್ಟು ಅಮ್ಮೇನಹಳ್ಳಿಯ ಜಾಡು ಹಿಡಿಯಿತು. ಕರಿಯ ನಾಯಿ 'ಮಾದ' ಹಿಂದೆಯೇ ಓಡಿಬಂತು. ಬಹುದೂರದ ತನಕ ಹಿಂಬಾಲಿಸಿತು. ಅಮ್ಮೇನಹಳ್ಳಿಯ ಸೆರಗಿನ ತನಕ ಬಂತು. ಅಮ್ಮೇನಹಳ್ಳಿಯ ನಾಯಿಗಳು ಅದನ್ನು ಕಂಡು ಬೊಗಳಿ ಬೆನ್ನಟ್ಟ

ದಾಗಲೇ ಅದು ದುಃಖಪೂರಿತ ಕಣ್ಣುಗಳಿಂದ ಹಿರೇಹಳ್ಳಿಯ ಕಡೆ ಕಾಲು ಹಾಕಿದ್ದು.

ಸುಮಿತ್ರೆಗೆ ವಿಪರೀತ ಖಾಯಿಲೆಯಾಗಿತ್ತು. ಅವಳ ಶಿಶ್ರೂಷೆಗೆ ಹಿರೇಕೆರೂರಿನಿಂದ ಅವರ ತಾಯಿ ಬಂದಿದ್ದರು. ಲಕ್ಷ್ಮಣ ತಮ್ಮ, ತಮ್ಮನ ಹೆಂಡತಿ, ಹೊಸ ಸೊಸೆ ರಾಜೀವಿ ಇವರನ್ನು ತಲೆ ಬಾಗಿಲಲ್ಲೇ ಎದುರುಗೊಂಡ ತಿಪ್ಪಯ್ಯನವರ ಹೆಂಡತಿಯೂ ಬಂದಿದ್ದರು. ಅವರೂ ತ್ರಿಪುರಸುಂದರಿಯೂ ಸೇರಿ ಗಂಡ ಹೆಂಡತಿಗೆ ನಿವಾಳಿ ತೆಗೆದು ಆರತಿ ಎತ್ತಿ ಮನೆ ತುಂಬಿಸಿಕೊಂಡರು.

ಗಂಡನ ಮನೆಯಲ್ಲಿಯೂ ಹಸುಕರು-ನಾಯಿ ಎಲ್ಲಾ ಇದ್ದದ್ದು ಅವಳಿಗೆ ತೌರೂರಿನಲ್ಲಿನಂತೆ ಇಲ್ಲಿಯೂ ಇರಬಹುದೆಂದು ಅನ್ನಿಸಿತು. ವಾರಗಿತ್ತಿ ಸುಮಿತ್ರೆಯನ್ನು ನೋಡಿದಾಗ ಅವಳಿಗೆ ದುಃಖವಾಯಿತು. ತನ್ನ ಮದುವೆಯಲ್ಲಿ ಕಟ್ಟುಮಸ್ತಾಗಿದ್ದ ಆಳು ಅಸ್ಥಿಪಂಜರವಾಗಿದ್ದಳು. ಸುಮಿತ್ರೆ, ಮಲಗಿದಲ್ಲಿಂದಲೇ ರಾಜೀವಿಯನ್ನು ಸ್ವಾಗತಿಸಿದಳು. ತನ್ನ ಅಸಹಾಯಕ ಪರಿಸ್ಥಿತಿಯಲ್ಲಿ ಏನೂ ಮಾಡಲಾಗದಲ್ಲಾ ಎಂದು ದುಃಖಿಸಿದಳು. "ಆಯಾಸ ಮಾಡ್ಕೊಬೇಡಿ ಅಕ್ಕಾ" ಎಂದು ರಾಜೀವಿ ಸಮಾಧಾನ ಪಡಿಸಿದಳು. ಸುಬ್ಬರಾಯ ಲಕ್ಷ್ಮಣನ ಹತ್ತಿರ ತನ್ನ ಕೆಲಸ ಸಿಕ್ಕಿದ ವಿವರಗಳನ್ನು ಹೇಳಿದ. ಲಕ್ಷ್ಮಣ ಸುಬ್ಬರಾಯನಿಗೆ, ಹೊಲಗಳಿಂದ ತನಗಾದ ನಷ್ಟ, ಮತ್ತೆ ಶಾನುಭೋಗಿಯ ಭವಣೆಗಳನ್ನು ಸವಿಸ್ತಾರವಾಗಿ ಹೇಳಿದ. ಒಟ್ಟಿನಲ್ಲಿ ಅವನ ಅಭಿಪ್ರಾಯ ಮನೆಯ ವಹಿವಾಟಿನಲ್ಲಿ ನಷ್ಟವೇ ಪ್ರಧಾನವಾಗಿದೆ ಎಂದು ಹೇಳುವುದೇ ಆಗಿತ್ತು. ಅವನ ಭಯ, ಊರಿಗೆ ಹೊರಡುವಾಗ ಸುಬ್ಬರಾಯನೆಲ್ಲಿ ಹೆಚ್ಚು ಹಣ ಕೇಳುತ್ತಾನೋ ಎಂಬುದು.

ಕೆಲಸಕ್ಕೆ ಸೇರುವುದಕ್ಕೆ ಇನ್ನೂ ಹದಿನೈದು ದಿನದ ಅವಕಾಶವಿತ್ತು. ಆ ಎಂಟು ದಿನವೂ ರಾಜೀವಿಗೆ ತಮ್ಮ ಹೊಲ ಗದ್ದೆ ತೋರಿಸಿದ-ಊರುಸುತ್ತಿನ ರಮಣೀಯ ಪ್ರಕೃತಿಯ ಸೊಬಗಿನ ಸ್ವೇಚ್ಛೆಯಾಗಿ ಸುತ್ತಿದರು. ಇಷ್ಟಾದರೂ ನಾಚಿಕೆ ಅವಳನ್ನು ಬಿಡಲಿಲ್ಲ.

ತ್ರಿಪುರಸುಂದರಿ ಇನ್ನೂ ಒಂದು ಹದಿನೈದು ದಿನವಿದ್ದು ಹೋಗುವುದೆಂದು ಶಿವಮೊಗ್ಗೆಯಿಂದ ಹೊರಡುವಾಗಲೇ ಶ್ರೀಧರಮೂರ್ತಿಯೊಂದಿಗೆ ಕರಾರಾಗಿತ್ತು. ತವರುಮನೆಗೆ ಅಪುರೂಪಕ್ಕೆ ಬಂದವಳನ್ನು ಲಕ್ಷ್ಮಣನೂ ಅದ

ರಿಸುತ್ತಿದ್ದ. ಸುಮಿತ್ರೆಯು ಖಾಯಿಲೆಯ ದೆಸೆಯಿಂದ ಬರಿಯ ಬಾಯಿ ಉಪಚಾರಮಾಡುತ್ತಿದ್ದುದಲ್ಲದೆ ಮತ್ತೇನೂ ಅವಳಿಂದ ಸಾಗುತ್ತಿರಲಿಲ್ಲ.

ಸುಬ್ಬರಾಯ ಚಿತ್ರದುರ್ಗಕ್ಕೆ ಹೊರಡುವ ಮುನ್ನ ಶಿವಮೊಗ್ಗೆಗೆ ಹೋಗಿ ತನ್ನ ಬಟ್ಟೆಬರೆಗಳನ್ನು ತೆಗೆದುಕೊಂಡು ಬರಬೇಕಾಗಿತ್ತು. ಅಲ್ಲಿ ಮನೆ ಮಾಡಿದ ಮೇಲೇ ರಾಜೀವಿಯನ್ನು ಕರೆಸುವುದು ಸಾಧ್ಯ. ಹೊಸದಾಗಿ ಸಂಸಾರ ಆರಂಭಿಸುವುದಕ್ಕೆ ಪಾತ್ರೆ ಪಡಗ ಹೊಂದಿಸಬೇಕಾಗಿತ್ತು. ನಿಷೇಕದ ಸಮಯದಲ್ಲಿ ಒಂದಷ್ಟು ಪಾತ್ರೆ ನಾಗರಾಜಾಜೋಯಿಸರು ಕೊಟ್ಟಿದ್ದರು. ಅದರ ಜೊತೆಗೆ ಊರಿನಿಂದ ಕೊಂಚ ಸಾಮಾನು ತೆಗೆದುಕೊಂಡು ಹೋಗದಿದ್ದರೆ ನಿರ್ವಾಹವೇ ಇರಲಿಲ್ಲ. ಅವತ್ತು ಮಧ್ಯಾಹ್ನ ಊಟವಾದ ಮೇಲೆ ಲಕ್ಷ್ಮಣ ಹೊರಗಿನ ಹಜಾರದಲ್ಲಿ ಹಾಸಿಗೆಯೊರಗಿ ಚಾಪೆಮೇಲೆ ಕುಳಿತಿದ್ದ. ಸಮೀಪದಲ್ಲೇ ತ್ರಿಪುರಸುಂದರಿ ಮುಂದೆ ಒಂದಿಷ್ಟು ನೆಲಗಡಲೆಕಾಯಿ ಹಾಕಿಕೊಂಡು ಕಾಳು ಬಿಡಿಸಿ ಮೊರಕ್ಕೆ ಹಾಕುತ್ತಿದ್ದಳು. ಅವಳ ಮಕ್ಕಳು ಅಂಗಳದಲ್ಲಿ ಕುಂಟಾಪಿಲ್ಲಿ ಆಡುತ್ತಿದ್ದರು. ಸುಬ್ಬರಾಯ ಊರಿಗೆ ಹೊರಡುವ ಸನ್ನಾಹ ಮಾಡುತ್ತಿದ್ದ. ರಾಜೀವಿ ಅವನಿಗೆ ಸಹಾಯ ಮಾಡುತ್ತಿದ್ದಳು. ಈ ಸಮಯಕ್ಕೆ ಸರಿಯಾಗಿ ತಿಪ್ಪಯ್ಯನ ಸವಾರಿ ಬಂದಿತು.

"ಬಾ ತಿಪ್ಪಯ್ಯ" ಎಂದು ಲಕ್ಷ್ಮಣ ಬಿಚ್ಚಿದ ತನ್ನ ಜುಟ್ಟನ್ನು ಗಂಟು ಹಾಕಿಕೊಳ್ಳುತ್ತಾ ಅವರನ್ನು ಸ್ವಾಗತಿಸಿದ.

"ಹರೇ ರಾಮ, ಹರೇ ರಾಮ–ಆ ಹಹಹ...." ಎಂದು ಕಂಬಕ್ಕೊರಗಿ ಹೆಗಲ ಮೇಲಿನ ಪಾಣಿಪಂಚೆಯಿಂದ ಬೋಳಾದ ತಲೆಯ ಮೇಲಿನ ಬೆವರನ್ನು ಒರಸಿಕೊಂಡ.

"ವಿಪರೀತ ಸೆಖೆ ಮಹರಾಯ"

"ನೋಡಿದರೆ ರಾತ್ರಿ ಮಳೆ ಬರುವ ಹಾಗಿದೆ"

"ಬರಲೇಬೇಕು. ಭರಣಿ ಮಳೆ–ಈಗ ಇಲ್ದೆ ಇದ್ರೆ ಎರಡಾಣೆ ಭಾಗ ಬೆಳೆ ಬರೋಲ್ಲ"

"ತಿಪ್ಪಯ್ಯಾ–ಹೋದಸಲ ನೀನು ಮೆಣಸಿನಕಾಯಿ ಹಾಕಿಸಿದ್ಯ?"

"ಇಲ್ಲ ಮಹರಾಯ–ಆ ರಾಮೇಗೌಡನ ಮಾತು ಕೇಳಿ ಎಳ್ಳು ಬಿತ್ತಿಸಿ ಮಣ್ಣಿಗೆ ಮಣ್ಣು ತಿಂದುಬಿಟ್ಟೆ–ಕಡೆಗೆ ಎಳ್ಳು ನೀರೇ ಆಗತ್ತೇಂತ ಇದ್ದೆ...."

ಈ ಮಾತಾಡುವ ಸಮಯಕ್ಕೆ ಸುಬ್ಬರಾಯ ಬಂದ. "ಸುಬ್ಬರಾಯಾ–ಎಂದು ಊರಿಗೆ ಪ್ರಯಾಣ?"

"ನಾಳೆ ಹೊರಡಲೇಬೇಕು"

"ಚಿತ್ರದುರ್ಗಕ್ಕೇ ಹೋಗ್ತೀಯಾ ?"

"ಇಲ್ಲ ಶಿವಮೊಗ್ಗಾಕ್ಕೆ ಹೋಗಿ ಅಲ್ಲಿಂದ ಹೋಗ್ತೀನಿ"

"ಎಲ್ಲಾ ತಯಾರಾಗ್ತಾ ಇದೇಂತ ಕಾಣುತ್ತೆ"

"ಹೂಂ–ಆಗಬೇಕಲ್ಲಾ"

"ಪಾತ್ರೆಪಡಗ ನೀನೇ ಒಯ್ತೀಯಾ ಜೊತೇಲಿ ?"

"ಇಲ್ಲಾ–ಇವಳು ಬರುವಾಗ ತರ್ತಾಳೆ"

"ಮಾವಯ್ಯ ಎಲ್ಲಾ ಕೊಟ್ಟಿದ್ದಾರೇಂತ ಕಾಣುತ್ತೆ"

"ಏನೋ ಅವರೂ ಕೊಡಲೀ ಅಷ್ಟು ಕೊಟ್ಟಿದ್ದಾರೆ–ಮನೆಯಿಂದಲೂ ಸ್ವಲ್ಪ ತೆಗೆದುಕೊಂಡು ಹೋಗಬೇಕು" ಎಂದು ಹೇಳುತ್ತಾ ಲಕ್ಷ್ಮಣನ ಕಡೆ ನೋಡಿದ. ಅವನು ಮುಖ ಆ ಕಡೆ ತಿರುಗಿಸಿಬಿಟ್ಟ. ಇಂಥ ಸೂಕ್ಷ್ಮ ಪರಿಸ್ಥಿತಿಯಲ್ಲೇ ತಿಪ್ಪಯ್ಯನ ಮಧ್ಯಸ್ಥಿಕೆ ಬೇಕಾಗುತ್ತಿದ್ದುದು. ತಿಪ್ಪಯ್ಯನಿಗೆ ಗೊತ್ತು ಲಕ್ಷ್ಮಣ ಆದಷ್ಟು ಬಿಗಿ ಮುಷ್ಟಿ ಹಿಡಿದು ಮನೆಯಿಂದ ಪಾತ್ರೆ ಒಯ್ಯಲು ಏನಾದರೂ ನೆಪ ಹಾಕುವನೆಂದು.

"ಏನೇನು–ತೆಗೆದುಕೊಂಡು ಹೋಗ್ತಿ ?"

"ಅಣ್ಣಯ್ಯ ಏನೇನು ಕೊಟ್ಟರೆ ಅದೆಲ್ಲಾ"

"ಸುಬ್ಬೂ–ನಂದೇನಿದೆಯಪ್ಪಾ ನಿಮ್ಮ ಅತ್ತಿಗೇನ್ನ ಕೇಳು. ಅವಳು ಹೇಗೆ ಹೇಳಿದರೆ ಹಾಗೆ"

"ಅವರನ್ನೂ ಕೇಳಿದೆ–ಅವರು ನೀನು ಹೇಗೆ ಹೇಳಿದರೆ ಹಾಗೇಂತ ಅಂದರು"

ಲಕ್ಷ್ಮಣನ ಸ್ವಭಾವವೇ ಹಾಗೆ. ಬೇರೊಬ್ಬರ ಮೇಲೆ ಜವಾಬ್ದಾರಿ ಹಾಕಿ ಕೇಳಿದವರನ್ನು ಜಿಜ್ಞಾಸಕ್ಕೆ ಸಿಕ್ಕುಹಾಕಿ ಕೇಳಲೇಬಾರದಾಗಿತ್ತು ಎಂದೆನ್ನಿಸಿಬಿಡುತ್ತಾನೆ. ಸುಬ್ಬರಾಯ ಅಡಕತ್ತರಿಯಲ್ಲಿ ಸಿಕ್ಕಿದ ಗೋಟಡಿಕೆಯಂತಾದ.

ಎರಡು ಕೊಳದಪ್ಪಲೆ, ಒಂದು ಚಿಕ್ಕ ಹಂಡೆ. ಹಾರೆಕೋಲು–ಒನಕೆ, ಅನ್ನದ ತಪ್ಪಲೆ, ನಾಲ್ಕು ಡಬರಿ, ಆರು ಕುಡಿಯುವ ಲೋಟ, ಒಂದು ತಂಬಿಗೆ, ನೀರು ತೋಡುವ ಸಾಧಾರಣ ಕೊಳಗ ಇವಿಷ್ಟನ್ನು ತೆಗೆದಿರಿಸಿದ್ದ. ತಂದೆ ಆನಂದ ರಾಯರು ಬೇಕಾದಷ್ಟು ಪಾತ್ರೆ ಮಾಡಿದ್ದರು. ಲಕ್ಷ್ಮಣನ ಅಡ್ಡಿ–ಅತ್ತಿಗೆಯ ಚಿಕ್ಕಮೋರೆ ಅಡ್ಡಬಾರದಿದ್ದರೆ ಒಂದು ಭಂಡಿ ಪಾತ್ರೆ ಬೇಕಾದರೆ ಕೊಂಡೊಯ್ಯಬಹುದಿತ್ತು. ಅಷ್ಟಾದರೂ ಇನ್ನೂ ಪಾತ್ರೆಗಳು ಅಟ್ಟದಮೇಲೆ ಇದ್ದೇ ಇದ್ದವು.

ಬಹಳ ದಾಕ್ಷಿಣ್ಯದಿಂದ ಕೇವಲ ಬೇಕಾದಷ್ಟನ್ನು ಸುಬ್ಬರಾಯ ತೆಗೆದಿಟ್ಟುಕೊಂಡಿದ್ದ. ಲಕ್ಷ್ಮಣನಿಗೆ ಅದೇ ಸಿಟ್ಟು. "ಅವನಿಗೇನು ನೌಕರಿ ಇದೆ. ಇಪ್ಪತ್ತು ರೂಪಾಯಿ ಸಂಬಳ. ನನಗೇನಿದೆ ಬಿಕನಾಸಿ ವರ್ಷದ ಪೋಟಿಗೆ" ಎಂದು ಹೇಳಿಬಿಟ್ಟ ತಡೆಯಲಾರದೆ. ತಿಪ್ಪಯ್ಯನಿಗೆ ಹಿಡಿಸದಾಯಿತು.

"ಲಕ್ಷ್ಮಣಾ ನೀನು ಹಿರಿಯವ ಹೀಗೆ ಮಾತಾಡಬಾರದು. ಹೊಸದಾಗಿ ಸಂಸಾರ ಪ್ರಾರಂಭಿಸುವಾಗ ನೀನೇ ಹೋಗಿ ಅವನಿಗೆ ಬೇಕಾದ ಪಾತ್ರೆ ಕೊಡಿಸಿ ಮನೆ ಮಾಡಿಸಿಕೊಟ್ಟು ಬರಬೇಕು. ನಿಮ್ಮ ತಂದೆ ಇದ್ದಿದ್ದರೆ ಅವರು ಹಾಗೇ ಮಾಡುತ್ತಿದ್ದರು"

"ನನ್ನ ಕಷ್ಟ ಯಾರೂ ಕೇಳುವವರಿಲ್ಲ ತಿಪ್ಪಯ್ಯ. ಲೋಕಾ ರೂಢಿಯ ಮಾತು ನಾನೂ ಆಡೇನು. ಮಾಡಿ ತೋರಿಸಿದರೆ ಅದರ ಕಷ್ಟ ಗೊತ್ತಾಗೋದು"

"ನಿನಗೇನು ಅಂಥಾ ಕಷ್ಟ ಬಂದಿರೋದು ?"

"ಹೆಂಡ್ತಿಗೆ ಖಾಯಿಲೆ; ಬೆಳೆ ವಿಷಯ; ಕೋರ್ಟು ಖರ್ಚು ಒಂದೆ ಎರಡೇ ? ಎಲ್ಲಾ ನಿನಗೇ ಗೊತ್ತಿದೆ"

"ನಿನ್ನ ತಾಪತ್ರಯಗಳಿಗೂ ಸುಬ್ಬರಾಯ ನಾಲ್ಕು ಪಾತ್ರೆ ಕೊಂಡೊಯ್ಯೋದಕ್ಕೂ ಯಾತಕ್ಕೆ ಗಂಟುಹಾಕುತ್ತಿ ?"

"ಮಾತಿಗೆ ಮಾತು ಬಂತು ಹಾಗೆ ಹೇಳಿದೆ. ಸಧ್ಯ ಅವನಿಗೆ ಬೇಕಾದ್ದು ಒಯ್ಯಲಿ, ನನಗೇನು ? ಯಾರು ಬೇಡಾಂತ ಅಂದವರು ?"

"ನಾನೇನು ಮನೇನೇ ದೋಚಿಕೊಂಡು ಹೋಗ್ತಾ ಇಲ್ಲ ಅಣ್ಣಾ. ನಾನೂ ಹೊಸದಾಗಿ ಮನೆ ಮಾಡುವವನು ನಾಲ್ಕು ಪಾತ್ರೆ ತೊಗೊಂಡು ಹೋಗ್ತೇನೆ"

"ಮಹರಾಯನಹಾಗೆ ಒಯ್ಯಿ. ಯಾರು ಬೇಡಾಂತ ಅಂದವರು ?"

ಎಂದಾಗ ಮನಸ್ಸಿಲ್ಲದ ಮನಸ್ಸಿನಲ್ಲಿ, ದೊಡ್ಡ ಉಪಕಾರ ಮಾಡಿದ ಧೋರಣೆಯ ಧ್ವನಿಯಲ್ಲಿ ಹೇಳಿದ್ದ. ಈ ಪುಟ್ಟ ಪಾತ್ರೆ ಪಡಗಕ್ಕೇ ಹೀಗೆ ಪೀಠಿಕೆ ಹಾಕಿದರೆ ಕೊಂಚ ಹಣ ಬೇಕೆಂದು ಹೇಗೆ ಕೇಳುವುದು ? ಅದಕ್ಕೆ ಅವಕಾಶ ಕೊಡದಿರುವುದಕ್ಕೇ ಈ ರೀತಿಯ ಮಾತು ತೆಗೆದದ್ದೆಂದು ಸುಬ್ಬರಾಯ ಊಹಿಸದಿರಲಿಲ್ಲ. ಏನು ಮಾಡುವುದಕ್ಕೂ ಅವನಿಗೆ ತೋಚಲಿಲ್ಲ. ಈ ಸಮಸ್ಯೆಗೂ ತಿಪ್ಪಯ್ಯನೇ ಸೂತ್ರಧಾರನಾಗಿ ನಿಲ್ಲದೆ ವಿಧಿಯಿರಲಿಲ್ಲ. ಒಂದು ದಿನ ಪ್ರಯಾಣ ಮುಂದುಹೋದರೂ ಚಿಂತೆಯಿಲ್ಲ, ಹಣವಿಲ್ಲದೆ ಹೊರಡುವುದೆಂತು ? ಸಧ್ಯಕ್ಕೆ ಪಾತ್ರೆಗಳು ಸಿಕ್ಕವಲ್ಲಾ ! ಮುಂದಿನದು ತಿಪ್ಪಯ್ಯನೊಡನೆ ಆಮೇಲೆ ಚರ್ಚಿಸುವುದೆಂದು ಸಧ್ಯಕ್ಕೆ ಸುಮ್ಮನಾದ.

ಮಾತು ಬೇರೆಯಕಡೆ ತಿರುಗಲು ಕಾರಣ ತ್ರಿಪುರ ಸುಂದರಿಯ ಅಡ್ಡ ಮಾತೇ ಆಗಿತ್ತು. ಸುಶೀಲೆಯ ಮದುವೆಯ ವಿಷಯ ಅವಳಿಗೆ ಬೇಕಾಗಿತ್ತು.

"ತಿಪ್ಪಯ್ಯ ಮಾವಾ, ಹೊನ್ನಾಳಿಯವರು ಏನು ನಿರ್ಧಾರ ಮಾಡಿದರು ?"

"ಮುಹೂರ್ತ ಮುಂದಿನ ಮಾಘದಲ್ಲೀಂತ ಆಗಿದೆ"

"ಅಂದರೆ....ಆಶ್ವೀಜ, ಕಾರ್ತಿಕ, ಮಾರ್ಘಶಿರ, ಪುಷ್ಯ, ಮಾಘ. ರಾಮ ರಾಮ ಇನ್ನೂ ಐದು ತಿಂಗಳೇ ?"

"ಇದಕ್ಕೆಲ್ಲಾ ನಿಮ್ಮ ಸುಬ್ಬರಾಯನ ಮಾವನೇ ಕಾರಣ"

"ಅವರೇನು ಮಾಡಿದರು ?"

"ಎರಡು ಜಾತಕಗಳ ಪರಿಷ್ಕರಣೆಯಾದಮೇಲೆ ಪ್ರಶಸ್ತವಾದ ಮುಹೂರ್ತ ಸಿಕ್ಕದ್ದು ಮಾಘ ಮಾಸದಲ್ಲೆ. ಅವರೇ ಹೇಳಿದರು, ಈ ಜಾತಕಕ್ಕೆ ಇದೇ ಮುಹೂರ್ತವಾಗಬೇಕೂಂತ. ಅಂದಮೇಲೆ ಯಾರೇನು ಮಾಡತಕ್ಕದಿದೆ ?"

"ಮತ್ತೆ ಶಿವಮೊಗ್ಗಿಗೆ ಹೋಗಿದ್ದೆಯಾ ?"

"ಇಲ್ಲವಮ್ಮ, ಹೊನ್ನಾಳಿಗೆ ಹೋಗಿದ್ದೆ. ಜನಾರ್ಧನಯ್ಯನಿಂದ ವಿಷಯ ತಿಳಿಯಿತು"

"ಏನು ವಿಷಯ ?"

"ರಂಗಮ್ಮನವರು ಮದುವೆಗೆ ಅಣಿಮಾಡಿಕೊಳ್ಳುತ್ತಿರುವುದು"

''ಅಯ್ಯೋ ರಾಮ–ಆರು ತಿಂಗಳಿರುವ ಲಗ್ನಕ್ಕೆ ಈಗಿನಿಂದ ಸಾಮಾನು ಸರಂಜಾಮುವೇ !"

"ಕಳ್ಳೂರು ಕಟ್ಟೆಯಿಂದ ಅವರ ಅಣ್ಣ ಬಂದಿದ್ದನಂತೇ–ಪಿಳ್ಳಂಗೇರಿ ಯಾಕೆ, ಕಳ್ಳೂರು ಕಟ್ಟೇಲಿ ಮಾಡೋಣಾಂತ ಸೂಚಿಸಿದನಂತೆ. ಅರೀದ ಊರು ಬೇಡಾಂತ ರಂಗಮ್ಮ ಅಂದರಂತೆ. ಅಲ್ಲಿಯಾಗಿದ್ದರೆ ಏರ್ಪಾಟಿನ ಅವಾಂತರದಲ್ಲಿ ಸ್ವಲ್ಪ ಕಬಳಿಸೋಣಾಂತ ಅವನ ಯೋಚನೆ ಬಿದ್ದುಹೋದದ್ದು ಅವನಿಗೆ ಸಿಟ್ಟು. ಪಾಪ ರಂಗಮ್ಮ ಏನುಮಾಡಿಯಾರು? ದೇವರು ಮಾಡಿಸಿದ್ದಾಗಲೀಂತ ಪಿಳ್ಳಂ ಗೇರೀಂತಲೆ ನಿಶ್ಚಯ ಮಾಡಿದ್ದಾರೆ"

"ಅಲ್ಲ ಕಣ್ ತಿಪ್ಪಯ್ಯ–ಶಿವಮೊಗ್ಗೀಗೆ ಹೋಗಿಲ್ಲಾಂತಿಯ, ಎಷ್ಟೊಂದು ಸಮಾಚಾರ ಹೇಳ್ತಿಯಲ್ಲಾ ಯಾರು ಹೇಳಿದ್ದು ಇದೆಲ್ಲಾ? ''

"ಜನಾರ್ಧನಾ!"

"ಅವರು ಹೋಗಿದ್ದರೇನು ಮತ್ತೆ ಶಿವಮೊಗ್ಗಿಗೆ"

"ಹೂಂ–ಹೋಗಿ ರಂಗಮ್ಮನೋರ ಹತ್ತಿರ ತನ್ನ ವಿಷಯವೆಲ್ಲಾ ತೋಡಿ ಕೊಂಡು–ತನ್ನ ತಂದೆ ವಿಷಯಾನೂ ಸೂಕ್ಷ್ಮವಾಗಿ ತಿಳಿಸಿದನಂತೆ"

''ರಂಗಮ್ಮ ಏನಂದರಂತೆ ? ''

''ಏನಂತಾರೆ–ನೀವು ಗಂಡ ಹೆಂಡ್ತಿ ಚೆನ್ನಾಗಿರೋದು ಬೇಕು ಅಂತ ಅಂದರಂತೆ''

''ಸಧ್ಯ, ಅದೊಂದು ವಿಷಯ ನೆಮ್ಮದಿಯಾಯ್ತುಂತೀನಿ, ಹೇಳಿದ್ದು''

''ಅಲ್ಲವೇ ಮತ್ತೆ, ಮುಂದೆ ಬಚ್ಚಿಟ್ಟು ಮೋಸಮಾಡಿದರೂನ್ನೋ ಹೆಸರು ಬರಬಾರದೂಂತ ಜನಾರ್ಧನಯ್ಯ ಹಾಗೆ ಮಾಡಿದ್ದೆಂದು ಹೇಳಿದ.''

''ಜನಾರ್ಧನಯ್ಯ ಶಿವಮೊಗ್ಗಿಗೆ ಹೋಗಿಬಂದ ಮರುದಿನವೇ ಒಂದು ಕಾಗದಾ ಹಾಕಿಸಿದ ತನ್ನ ಚಿಕ್ಕಪ್ಪನಿಂದ''

''ಏನಂತ ? '' ಎಂದು ಕಾತುರನಾಗಿ ಕೇಳಿದ ಸುಬ್ಬರಾಯ.

"ಮದುವೆಯಾದಕೂಡಲೆ ನಿಷೇಕ ಪ್ರಸ್ತದ ಶಾಸ್ತ್ರ ಮಾಡಿ ಹುಡುಗಿ ಯನ್ನು ಒಡನೇ ಗಂಡಿನವರ ಜೊತೆ ಕಳಿಸಿಕೊಡಬೇಕೂಂತ"

ಈ ಮಾತಿಗೆ ಎಲ್ಲರೂ ನಕ್ಕರು.

"ಪರವಾಗಿಲ್ಲ ಜನಾರ್ಧನಯ್ಯ...." ಎಂದ ಸುಬ್ಬರಾಯ.

"ಹೂಂ ಸರಿ–ಅಂತೂ ಆರು ತಿಂಗಳಿಗೆ ಮುಂಚೆ ರಂಗಮ್ಮ ಮಗಳ ಮದುವೆಗೆ ತಯಾರಾಗ್ತಾ ಇದ್ದಾರೇನ್ನು"

"ಹರೇ ರಾಮ ರಾಮ. ಅಬ್ಬಬ್ಬ ವಯಸ್ಸಾಯಿತು, ಎದ್ದರೆ ಕೂರೋದು ಕಷ್ಟ–ಕೂತರೆ ಏಳೋದು ಕಷ್ಟ" ಎಂದು ಹೊಟ್ಟೆ ಹೊತ್ತು ಎದ್ದ ತಿಪ್ಪಯ್ಯ. ಲಕ್ಷ್ಮಣ ಪಂಡಿತರ ಹತ್ತಿರ ಹೋಗುವುದಾಗಿ ಹೇಳಿ ಹೊರಬಿದ್ದ.

ತ್ರಿಪುರಸುಂದರಿಯ ಮಗಳು ಒಂದೇಸಮ ಅಳತೊಡಗಿದ್ದು ಅವಳೂ ಮುಂದಿದ್ದ ನೆಲಗಡಲೆಯ ರಾಶಿಯಿಂದ ಮುಕ್ತಳಾದಳು. ರಾಜೀವಿ, ಸುಮಿತ್ರೆ ವಿಪರೀತ ತಲೆನೋವು ಎಂದಿದ್ದರಿಂದ ಅಮೃತಾಂಜನ ತಿಕ್ಕುತ್ತಿದ್ದಳು. ಸುಮಿತ್ರೆ ರಾಜೀವಿಯ ಗುಣ ಮೆಚ್ಚಿಕೊಂಡಿದ್ದಳು. ತನ್ನ ಸ್ವಂತ ತಂಗಿಯಂತೇ ಪ್ರೀತ್ಯಾದರಗಳನ್ನು ತೋರಿಸುತ್ತಿದ್ದ ರಾಜೀವಿ ಮನೆಗೆ ಬಂದ ಹೊಸತರಲ್ಲೇ ತಾನು ಏನೂ ಮಾಡಲಾಗದೆ ಅವಳ ಕೈಲೇ ಎಲ್ಲಾ ಕೆಲಸ ಮಾಡಿಸುವುದಲ್ಲದೆ ತನ್ನ ಸೇವೆಯನ್ನು ಮಾಡುತ್ತಿರುವಳಲ್ಲಾ ಎಂದು ತನ್ನ ಅಸಹಾಯಕ ಪರಿಸ್ಥಿತಿಗೆ ಮರುಗುವಳು.

"ರಾಜೀವಿ–ಸಾಕುಬಿಡು ತಾಯಿ" ಎಂದು ನರಳುತ್ತಲೇ ಹೇಳಿದಳು. ಮಡಿಯುಟ್ಟು ಸುಮಿತ್ರೆಯ ತಾಯಿ ಅಡಿಗೆಗಿಡುವ ಏರ್ಪಾಟಿನಲ್ಲಿದ್ದಳು. ರಾಜೀವಿಗೆ ಏನಾದರೂ ಸಹಾಯ ಸೌಹಾರ್ದದ ಮಾತಾಡಬೇಕಿದ್ದರೆ ವೆಂಕಮ್ಮನಿಗೆ ತಿಳಿಯದಂತೇ ಆಡಬೇಕು. ತನ್ನ ಅಳಿಯ ತನ್ನ ಮಗಳು ಅಲ್ಲದೆ ಬೇರಾರಿಗೂ ಆ ಮನೆಯಲ್ಲಿ ಸ್ಥಳ ಇರದೇ ಇದ್ದರೇ ಅವಳಿಗೆ ತೃಪ್ತಿ. ಬೇರೆ ಯಾರ‍್ಯಾರೋ ಬಂದು ತನ್ನ ಮಗಳ ಮನೆಯಲ್ಲಿ ಕವಳ ಧ್ವಂಸ ಮಾಡುತ್ತಿರುವರಲ್ಲಾ ಎಂದು ಸಂಕಟ ಆ ಪ್ರಾಣಿಗೆ. ಎಲ್ಲರಿಗೂ ಕೇಳುವಂತೆ ಆಡಿಕೊಳ್ಳುವ ಹಾಗಿಲ್ಲ--ಕೂಗುವಂತಿಲ್ಲ ಒಳಗೇ ಸಂಕಟಪಡುವಳು. ಸಮಯ ಸಿಕ್ಕಾಗ ಅವಕಾಶ ದೊರೆತಾಗ ಸುಮಿತ್ರೆಯ ಹತ್ತಿರ ಚುಚ್ಚುವಳು. ಬಿಡಿಸಿ ಬಿಡಿಸಿ ವಿವಿಧ ರೀತಿಯಲ್ಲಿ ಈ ಬಂಧು ಬಾಂಧವರು ಹೇಗೆ ತನ್ನ ಮನೆಯನ್ನು ತೊಳೆಯುತ್ತಿರುವರೆಂದು ವಿವರಿಸುವಳು.

"ಸಾಕು ಬಿಡು" ರಾಜೀವಿ ಎಂದೊಡನೆ ರಾಜೀವಿ ಕೈಲಿದ್ದ ಅಮೃತಾಂಜನ ಡಬ್ಬಿ ಹೊರಸಿನ ಕೆಳಗಿಟ್ಟು ಎದ್ದು ನಿಂತಳು. "ಅಕ್ಕಾ, ಬಿಸಿ ನೀರು ತಂದಿಡಲೇನು?" ಎಂದಳು.

"ಬೇಡ, ಅಮ್ಮ ತಂದಿಡ್ತಾಳೆ. ರಾಜೀವಿ ನನ್ನ ಹತ್ತಿರಲೇ ಕೂತ್ಕೊ"

"ಯಾಕೆ ಅಕ್ಕಾ, ಒಂದು ತರಹಾ ಇದ್ದೀರಿ, ಕಸವಿಸಿ ಆಗತ್ತೆ ?"

"ಇಲ್ಲ ಕಣೆ ನಿನ್ನ ಹತ್ತಿರ ಮಾತಾಡಬೇಕಾಗಿದೆ"

"ಏನು ಆ ಮಾತು, ಅಂತಹ ಗುಟ್ಟೆ ?"

"ಇಲ್ಲ....ನಮ್ಮ ಸುಬ್ಬರಾಯ ನಿಜವಾಗಲೂ ಅದೃಷ್ಟಶಾಲಿ ಕಣೆ"

"ಅಲ್ಲವೇ ಮತ್ತೆ, ನಿಮ್ಮಂತಹ ಅತ್ತಿಗೆ ಸಿಕ್ಕಿರುವಾಗ"

"ಉಹೂಂ–ನನ್ನಂತಹ ಅತ್ತಿಗೆ ಸಿಕ್ಕೂ ಪಾಪ ಆತ ಏನು ಸುಖ ಸುರುಕೊಂಡ? ಅವರಮ್ಮನ ಕಾಲವಹಾಗೆ ಒಂದು ದಿನ ಊಟ ಬಡಿಸಲಿಲ್ಲ, ತಿಂಡಿ ಮಾಡಿಕೊಡಲಿಲ್ಲ. ನಾನು ಚೆನ್ನಾಗಿದ್ದ ಕಾಲದಲ್ಲೂ ಒಳ್ಳೇದೆರಡು ಮಾತು ಕೂಡ ಆಡಲಿಲ್ಲ"

"ಅದ್ಯಾಕೆ ಅಕ್ಕ ಹೀಗೆ ಮಾತಾಡ್ತೀರಿ? ಆಯಾಸ ಮಾಡ್ಕೋಬೇಡಿ"

"ಆಯಾಸವಿಲ್ಲ ರಾಜೀವಿ. ನಿನ್ನಂತಹ ಹೆಂಡ್ತಿ ಸಿಕ್ಕದ್ದು ಅವನ ಪುಣ್ಯ"

ಈ ಮಾತಿಗೆ ರಾಜೀವಿ ನಾಚಿಕೆಯಿಂದ ತಲೆ ತಗ್ಗಿಸಿದಳು. ತನ್ನಿಂದ ತನ್ನ ಗಂಡನಿಗೆ ಪುಣ್ಯ ಬಂದಿದ್ದೆಂದು ಸುಮಿತ್ರೆ ಹೇಳಿದ್ದು ಅವಳನ್ನು ತುಂಬಾ ನಾಚಿಸಿತ್ತು. ಸುಬ್ಬರಾಯನಂಥ ಗಂಡ ದೊರಕಿದ್ದು ತನ್ನ ಪುಣ್ಯವೆಂದು ಭಾವಿಸಿದ ಅವಳಿಗೆ ಸುಮಿತ್ರೆಯ ಈ ಮೆಚ್ಚಿಗೆಯ ಮಾತಿಗೆ ಏನು ಹೇಳಬೇಕೂ ತಿಳಿಯಲಿಲ್ಲ.

"ಸುಮ್ಮನೇ ನನ್ನ ಹೊಗಳುವಿರಿ"

"ನಿಜವಾಗೂ ರಾಜೀವಿ, ಸುಬ್ಬರಾಯ ಪುಣ್ಯವಂತ. ಅಮ್ಮಾ ಅಯ್ಯೋ ........ರಾಜೀವಿ, ಇನ್ನು ಕೊಂಚ ತಲೆ ಒತ್ತುತ್ತೀಯ, ತಲೆ ಸಿಡಿದು ಹೋಗ್ತಾ ಇದೆ"

"ನೀವೇ ಸಾಕೂಂದಿರಿ, ನಾನು ಒತ್ತುತ್ತಲೇ ಇದ್ದೆ"

"ಆ ಹಹಹ....ನೀನು ಮುಟ್ಟಿದ್ದೇ ನನ್ನ ನೋವು ಕಡಿಮೆಯಾಯಿತು. ನೋಡು....ರಾಜೀವಿ, ಸುಬ್ಬರಾಯ ನಾಳೇನೆ ಹೋಗ್ತಾನೇನು ?"

"ಹೂಂ–ಹಾಗೇಂತ ಹೇಳುತ್ತಿದ್ದರು"

"ದುಡ್ಡು ಗಿಡ್ಡು ಬೇಕಾಗಿತ್ತೇನೇ ಅವನಿಗೆ ?"

"ನನಗೇನು ಗೊತ್ತಕ್ಕ, ಗಂಡಸರು ಹಣದ ವಿಚಾರ ನನ್ನ ಹತ್ತಿರ ಹೇಳುತ್ತಾರೆಯೇ ?"

"ಅಮ್ಮ ಏನುಮಾಡ್ತಾ ಇದಾಳೆ ನೋಡ್ಕೊಂಡು ಬಾ"

ರಾಜೀವಿ ಅಡಿಗೆ ಮನೆಯಲ್ಲಿ ಇಣಿಕಿನೋಡಿದಳು. ವೆಂಕಮ್ಮ ಒಲೆ ಮುಂದೆ ಕುಳಿತು ತೂಕಡಿಸುತ್ತಿದ್ದರು. ಮತ್ತೆ ಸುಮಿತ್ರೆ ಮಲಗಿದ್ದ ಕೊಠಡಿಗೆ ಬಂದು

"ಒಲೆ ಮುಂದೆ ಕೂತಿದ್ದಾರೆ" ಎಂದು ಹೇಳಿದಳು.

"ಮಂಚದ ಕೆಳಗಿನ ಬೆತ್ತದ ಬುಟ್ಟಿ ತೆಗೆದುಕೊಡು"

"ಯಾಕೆ ಅಕ್ಕ ?" ಎನ್ನುತ್ತ ಬುಟ್ಟಿ ತೆಗೆದುಕೊಟ್ಟಳು.

"ಹೇಳಿದಷ್ಟು ಕೇಳು ನೀನು" ಎಂದೆನ್ನುತ್ತಾ ಪ್ರಯಾಸಪಟ್ಟುಕೊಂಡು ಕುಳಿತು ಕತ್ತಿನಲ್ಲಿನ ಸರಕ್ಕೆ ತಗುಲಿಸಿದ ಬೀಗದ ಕೈಯಿಂದ ಬೆತ್ತದ ಬುಟ್ಟಿಯ ಬೀಗ ತೆಗೆದು ಅದರಲ್ಲಿಟ್ಟ ಪುಟ್ಟ ಭರಣಿಯಿಂದ ನಾಲ್ಕು ಹತ್ತು ರೂಪಾಯಿನ ನೋಟು ತೆಗೆದಳು. ಮತ್ತೆ ಯಥಾ ಪ್ರಕಾರ ಭರಣಿಯನ್ನು ಬುಟ್ಟಿಯಲ್ಲಿಟ್ಟು ಬೀಗಹಾಕಿ ಮಂಚದ ಕೆಳಕ್ಕೆ ಸರಿಸಲು ರಾಜೀವಿಯ ಕೈಗೆ ಕೊಟ್ಟಳು.

"ಇಕ್ಕೊ, ಇದನ್ನು ಸುಬ್ಬರಾಯನಿಗೆ ಕೊಡು, ಬೇಕಾಗತ್ತೆ ಅವನಿಗೆ" ಎಂದು ನಾಲ್ಕು ನೋಟನ್ನು ರಾಜೀವಿಯ ಕೈಗಿತ್ತಳು. ರಾಜೀವಿಗೆ ಆಶ್ಚರ್ಯ ವಾಯಿತು. ತನ್ನ ಕಣ್ಣನ್ನು ತಾನೇ ನಂಬದಾದಳು. ಇಂತಹ ಅನಿಶ್ಚಿತ ಧನ ಸಹಾಯ ದೇವರೇ ಒದಗಿಸಿದ್ದೆಂದು ನಂಬಿದಳು. ಹಿಂದಿನ ರಾತ್ರಿ ಸುಬ್ಬ ರಾಯ ತನ್ನ ಪ್ರಸ್ತುತ ಪರಿಸ್ಥಿತಿಯ ಪರಿಚಯ ಮಾಡಿಕೊಟ್ಟಿದ್ದ. ಅನಿ ವಾರ್ಯವಾಗಿ ಅಣ್ಣನನ್ನು ಕೇಳಲೇಬೇಕಾಗಿದೆ, ಹೇಗೆ ಕೇಳುವುದು ಎಂದು ಯೋಚಿಸಿದ್ದು ರಾಜೀವಿ ಬಲ್ಲಳು. ಸುಮಿತ್ರೆಯ ಬಗ್ಗೆ ಮತ್ತು ಲಕ್ಷ್ಮಣನ ಬಗ್ಗೆ ಸುಬ್ಬರಾಯ ಆಡಿದ ಮಾತುಗಳಲ್ಲಿ ಬಹುಭಾಗ ಸುಮಿತ್ರೆಗೆ ಅನ್ವಯಿಸು ವುದಿಲ್ಲವೆಂದು ಈಗ ಅವಳಿಗೆ ಅರ್ಥವಾಗುತ್ತಿತ್ತು.

"ಬೇಡ ಅಕ್ಕ, ಅವರು ಭಾವನವರ ಹತ್ತಿರ ಇಸ್ಕೋತೀನೀಂತ ಅಂತಿ ದ್ದರು"

"ಭಾವನವರು ಕೊಟ್ಟರೆ ಅದನ್ನೂ ಇಟ್ಟುಕೊಳ್ಳಲಿ ಹೊಸ ಊರು, ಮನೆ ಮಾಡಬೇಕು. ಕೆಲಸಕ್ಕೆ ಸೇರೋಕೆ ಮುಂಚೆಯೇ ಸಂಬಳ ಕೊಡ್ತಾರೇನು ? ಕೈಲಿ ಹಣ ಇಲ್ದೆ ಇದ್ರೆ ಹ್ಯಾಗೆ ? ನೀನು ಸುಮ್ಮನೆ ಇದನ್ನು ತೊಗೊ"

“ನೀವು ಹೀಗೆ ಹೇಳಿದರೆ ನಾನು ಏನು ಹೇಳಲಿ – ತೆಗೆದುಕೊಳ್ಳದೆ ವಿಧಿಯೇ ಇಲ್ಲ”

‘‘ಇದು ನಿನ್ನ ದುಡ್ಡೂ ಹೌದು ರಾಜೀವಿ. ನಾನು ಹೋದಸಲ ಸುಗ್ಗಿಯಲ್ಲಿ ಸರ ಮಾಡಿಸಿಕೊಂಡೆ. ಅದರಾಚೆ ಸಲ ಬಳೆ ಮಾಡಿಸಿಕೊಂಡೆ. ನೀನು ಮನೆಗೆ ಬಂದಿರಲಿಲ್ಲ. ಈಗ ಇಷ್ಟೂ ನಿನಗೆ ಬೇಡವೇ? ಎಲ್ಲಾ ನಿನ್ನದೆ, ನಾನಿನ್ನೆಷ್ಟುದಿನ ಇದ್ದೇನು?’’

‘‘ಹಾಗೆನ್ನಬೇಡಿ ಅಕ್ಕ. ಒಳ್ಳು ಅನ್ನಿ....” ಎಂದು ಕಣ್ಣಲ್ಲಿ ನೀರು ತಂದುಕೊಂಡಳು ರಾಜೀವಿ. ಸುಮಿತ್ರೆಯ ಕಣ್ಣಲ್ಲೂ ನೀರು ಬಂದಿತ್ತು.

ಸುಮಿತ್ರೆಗೆ ತನ್ನ ಸಂಸಾರದ ಚಿತ್ರ ಕಣ್ಣೆದುರು ಕಟ್ಟಿತು. ಅತ್ತೆ–ಮಾವನವರ ಕಾಲದಲ್ಲಿ ಮನೆ ಇದ್ದ ಸ್ಥಿತಿ, ಮತ್ತೆ ತಾನು ಒಂದು ಕೂಸು ಹೆತ್ತು ಗಂಡನ ಕೈಗೆ ಕೊಡಲಾಗದ ನೋವು. ಅರ್ಧ ಬಸಿರಿನಲ್ಲೇ ಸತ್ತುಹೋದ ಪಿಂಡಗಳನ್ನು ನೆನೆನೆನೆದು ದುಃಖಿಸಿದ ದಿನಗಳು, ಯಮಯಾತನೆಯ ಹೊಟ್ಟೆ ನೋವಿಗೆ ಹೊರಳಿ ನರಳಿದ ಇರುಳುಗಳು, ಅಲೆಯಲೆಯಾಗಿ ನೋವಿನ ಸಾಗರವೇ ಮರುಕಳಿಸಿ ತನ್ನನ್ನು ಅಪ್ಪಳಿಸಿದಂತಾಯಿತು. ತಾನಿನ್ನು ಬದುಕಲಾರದ ಜೀವಶ್ರವ ತನ್ನಿಂದ ಗಂಡನಿಗೆ ಸುಖವಿಲ್ಲ, ಮನೆತನ ನಿಲ್ಲುವ ಗಂಡು ಹೆರದ ಹೇಡಿ ಹೆಣ್ಣು ತಾನು. ಇನ್ನು ತಾನೇನು ಸುಖಪಡಬೇಕಾಗಿದೆ? ಒಂದೆರಡು ದಿನಗಳಲ್ಲೇ ನಸುಗೆಂಪಿನ ಸಂಪಿಗೆಯಂತೆ ಅರಳಿ ಕಳಕಳಿಸುತ್ತಿರುವ ರಾಜೀವಿಯಿಂದ ತಾನು ಸೇರಿದ ಮನೆ ನಿಲ್ಲಲಿ ಎಂದವಳು ಯೋಚಿಸಿದ್ದಳು. ತನ್ನ ತಾಯಿ ಆದಷ್ಟು ಹಿರೇಕೆರೂರಿಗೇ ಸಾಗಿಸುವ ಹೊಂಚು ಹಾಕಿದ್ದು ಅವಳು ಬಲ್ಲಳು. ತನ್ನ ತವರವರು ಬಡವರು; ಅದಕ್ಕೆ ತಾನು ನೆರವು ನೀಡುವುದೂ ಧರ್ಮ. ಆದರೆ ರಾಜೀವಿಯಂಥ ಸರಳ ಹೃದಯಳ, ಮುಗ್ಧ ಪ್ರೇಮದ, ತನ್ನ ಮೈದುನನ ಹೆಂಡತಿಗೆ ಇಲ್ಲದಂತೆ ಮಾಡಿ ತನ್ನ ತವರು ತುಂಬುವುದನ್ನು: ಅವಳು ಒಪ್ಪಲಿಲ್ಲ.

ಇಷ್ಟುದಿನ ತನ್ನ ಸೇವೆ ಮಾಡಿದ್ದಾಳೆ. ಒಂದು ದಿನವೂ ಗೊಣಗಿರಲಿಲ್ಲ. ಸದಾ ನಗುಮುಖದೊಡನೆ ಅಕ್ಕನ ಶುಶ್ರೂಷೆ ಮಾಡಿದ ರಾಜೀವಿಯನ್ನು

ಮೆಚ್ಚಿಕೊಂಡಿದ್ದ ಸುಮಿತ್ರೆ ತಾಯಿಗೆ ತಿಳಿಯದಂತೆ ಅವಳಿಗೆ ಸಹಾಯ ಮಾಡ ಬೇಕೆಂದು ಮುಚ್ಚಿ ನಲವತ್ತು ರೂಪಾಯಿ ಕೊಟ್ಟಿದ್ದಳು.

ಸಹೋದರಿಯರಿಲ್ಲದ ರಾಜೀವಿ ಸುಮಿತ್ರೆಯನ್ನು ಒಡಹುಟ್ಟಿದ ಅಕ್ಕ ನಂತೇ ನೋಡಿಕೊಂಡಳು. ಪ್ರತಿಫಲಾಪೇಕ್ಷೆಯಿಲ್ಲದ ನಿಷ್ಕಳಂಕ ಪ್ರೀತಿಯ ಶಿಶ್ರೂಷೆ ಅವಳದಾಗಿತ್ತು. ಸುಮಿತ್ರೆಯ ಸಮಯ ಸಹಾಯಕ್ಕೆ ಅವಳನ್ನು ಹೇಗೆ ಅಭಿನಂದಿಸಬೇಕೆಂಬುದೇ ಅವಳಿಗೆ ಅರ್ಥವಾಗಲಿಲ್ಲ. ನೋಟುಗಳನ್ನು ಸೊಂಟದಲ್ಲಿ ಸಿಕ್ಕಿಸಿಕೊಂಡಳು.

"ಖಂಡಿತ ಗುಣವಾಗತ್ತೆ ಅಕ್ಕಾ. ಪಥ್ಯ ಸರಿಯಾಗಿ ಮಾಡಬೇಕು, ಪಂಡಿತರ ಔಷಧಿ ಸರಿಯಾಗಿ ತೆಗೆದುಕೊಳ್ಳಿ"

"ನಿನಗೊಂದು ಹುಚ್ಚು ರಾಜೀವಿ–ನನ್ನ ಪ್ರಕೃತಿ ನನಗೆ ಗೊತ್ತಿಲ್ಲವೇ? ರೋಗದಲ್ಲೇ ವರ್ಷಾನು ವರ್ಷ ನರಳಿದೆ. ಹೀಗೇ ನರಳಿ ಒಂದು ದಿನ ಗುಟಕ್ ಅನ್ನುತ್ತೇನೆ"

"ಹಾಗೆ ಅನ್ನಬೇಡೀಂತ ಹೇಳಲಿಲ್ಲವೇ? ನನಗಾಗಿ ಆ ಮಾತು ಆಡ ಕೂಡದು"

"ಹುಚ್ಚು ಹುಡುಗಿ–ಹಾಗೇ ಆಗಲಿ ನಿನ್ನ ತೃಪ್ತಿಗೆ ಹಾಗೆನ್ನೋಲ್ಲ ಆಯಿತೆ?"

"ನನಗಂತೂ ನೀವು ಗುಣಮುಖರಾಗುತ್ತೀರೆಂದೇ ನಂಬಿಕೆ"

ಕಷಾಯದ ಡಬರಿ ಹಿಡಿದು ಈ ಸಮಯಕ್ಕೆ ವೆಂಕಮ್ಮ ಬಂದರು. ಅವರಿಬ್ಬರ ಮಾತೂ ನಿಂತುಹೋಯಿತು. ಕಷಾಯ ಆರಿಸಿ ಲೋಟಾಕ್ಕೆ ಸುರುವಿ ರಾಜೀವಿಯ ಕೈಗೆ ಕೊಟ್ಟರು. ಹೊರಸಿನ ಮೇಲೆ ಅಕ್ಕನಿಗೆ ಒರಗಿ ಕುಳಿತು ಕಷಾಯ ಕುಡಿಸಿದಳು ರಾಜೀವಿ. ಅವಳ ಕೈಯಿಂದ ಕುಡಿದಾಗ ಕಹಿಯಾದ ಕಷಾಯವೂ ಅಮೃತದಂತಿತ್ತು ಸುಮಿತ್ರೆಗೆ.

ಸುಬ್ಬರಾಯ ತಿಪ್ಪಯ್ಯನ ಹತ್ತಿರ ತನಗೆ ಸಧ್ಯಕ್ಕೆ ಆಗಬೇಕಾಗಿದ್ದ ಆರ್ಥಿಕ ಸಹಾಯದ ವಿಷಯ ತೋಡಿಕೊಂಡ. ಲಕ್ಷ್ಮಣ ಕಾಸು ಬಿಚ್ಚುವುದಿಲ್ಲ. ಮುಂದೆ ಅಣ್ಣತಮ್ಮಂದಿರಲ್ಲಿ ವಿರಸ ಹುಟ್ಟಿ ಆಸ್ತಿ ಪಾಲಿನ ಬೃಹದ್ ರೂಪಕ್ಕೆ ಬಂದು ನಿಲ್ಲುವ ಚಿತ್ರದ ಕರಡು ಪ್ರತಿಯ ರೇಖೆ ತಿಪ್ಪಯ್ಯನ ಚಿತ್ತ ಫಲಕದಲ್ಲಿ ಸ್ಪಷ್ಟವಾಗಿ ಕಂಡುಬಂತು. ಕಿರಿಯನಾದ ಸುಬ್ಬರಾಯನಿಗೆ ಮುಂದೆ ದೊಡ್ಡ ಕಿರಿ ಕಿರಿಯೇ ಕಾದಿದೆ ಎಂದು ತಿಪ್ಪಯ್ಯ ಅರಿತ. ತಾನು ಮರುದಿನ

ಲಕ್ಷ್ಮಣನನ್ನು ಕಂಡು ಈ ವಿಚಾರವಾಗಿ ಪ್ರಸ್ತಾಪಿಸಿ ನೋಡುವುದಾಗಿ ಭರವಸೆ ಕೊಟ್ಟಿದ್ದ.

ಆ ರಾತ್ರಿಯೇ ಕಿರುಮನೆಯಲ್ಲಿ ರಾಜೀವಿಯೊಡನೆ ತಿಪ್ಪಯ್ಯ ಹೇಳಿದ ಮಾತು ಹೇಳಿದ. ತನ್ನ ಯಜಮಾನರ ಚಿಂತೆಗೆ ತನ್ನಲ್ಲಿ ಮದ್ದುಂಟೆಂದು ಬಲ್ಲ ರಾಜೀವಿ ತಮಾಷೆ ಮಾಡಿ ಆಶ್ಚರ್ಯಪಡಿಸಬೇಕೆಂದು

"ಕಣ್ಣು ಮುಚ್ಚಿಕೊಳ್ಳಿ" ಎಂದಳು.

"ಯಾತಕ್ಕೇ...."

"ಒಂದು ತಮಾಷೆ–ಕಣ್ಣು ಮುಚ್ಚಿ ಕೈ ಒಡ್ಡಿ"

ರಾಜೀವಿಯ ಮುಖದ ಮೇಲಿನ ತುಂಟು ನಗೆ ನೋಡಿ ಸುಬ್ಬರಾಯ ಕಣ್ಣು ಮುಚ್ಚಿ ಕೈ ಒಡ್ಡಿದ. ರಾಜೀವಿ ತನ್ನ ಉಡಿಗೆ ಕೈಹಾಕಿ ಸುಮಿತ್ರೆ ಕೊಟ್ಟ ನೋಟುಗಳನ್ನು ಸುಬ್ಬರಾಯನ ಬೊಗಸೆಯಲ್ಲಿಟ್ಟಳು. ಸುಬ್ಬರಾಯ ಕಣ್ಣುಬಿಟ್ಟು ನೋಡಿದಾಗ ತನ್ನ ಕಣ್ಣನ್ನೇ ನಂಬದಾದ. ಅರಸುತ್ತಿದ್ದ ಅರಸುಕನ್ಯೆ ತಾನೇ ಬಂದು ಮಾಲೆ ಹಾಕಿದ ರಾಜಕುಮಾರನಂತಾದ. ರಾಜೀವಿಗೆ ಈ ಹಣ ಹೇಗೆ ಬಂತೆಂದು ಡಂಗುಬಡಿದು ಕೂತಿದ್ದ ಸುಬ್ಬರಾಯ. ಬಿಟ್ಟ ಕಣ್ಣಲ್ಲಿ ನಟ್ಟ ದೃಷ್ಟಿಯಲ್ಲಿ ರಾಜೀವಿಯನ್ನು ದಿಟ್ಟಿಸಿದ.

"ಯಾಕೆ–ಆಶ್ಚರ್ಯವೇ ?"

"ಎಲ್ಲಿತ್ತೇ ಈ ದುಡ್ಡು ?"

"ನಮ್ಮ ಅಕ್ಕ ಕೊಟ್ಟರು"

"ಹೌದೆ ?"

"ನಿಮ್ಮಲ್ಲಿ ಸುಳ್ಳು ಹೇಳಲೇನು ?"

"ಬೇಕೂಂತ ಕೇಳಿದೆಯಾ ?"

"ಇಲ್ಲ ಅವರೇ ಕೊಟ್ಟರು"

"ಅದು ಹೇಗೆ ಹೇಳಬಾರದೆ ?"

"ಹೇಳ್ತೀನೆ ಕೊಂಚ ನಿಧಾನಿಸಿ...."

ಎಂದು ಆ ಸಂಜೆ ಸುಮಿತ್ರೆ ಮತ್ತು ತನ್ನ ಮಾತುಕಥೆಗಳನ್ನು ವಿವರವಾಗಿ ವರದಿಯಂತೆ ಒಪ್ಪಿಸಿದಳು ರಾಜೀವಿ. ಸುಮಿತ್ರೆಯ ಸೌಹಾರ್ದದ ಸ್ವಾರ್ಥರಹಿತ ವರ್ತನೆಯನ್ನು ಬಣ್ಣಿಸಿ ಹೇಳಿದಳು. ಒಡಹುಟ್ಟಿದ ಅಕ್ಕನಂತೆ

ಪ್ರೀತಿಯ ಮಾತಾಡಿ ಸುಬ್ಬರಾಯನ ಕಷ್ಟವನ್ನು ಊಹಿಸಿ ಕೊಟ್ಟ ಹಣದ ವಿಷಯ ವಿವರಿಸಿದಳು.

"ನಿಜವಾಗಲೂ ಅತ್ತಿಗೆ ಅಂತಃಕರಣ ಒಳ್ಳೇದು ಕಣೆ"

"ಅದರಲ್ಲಿ ಅನುಮಾನವೇ ಇಲ್ಲ"

"ಅಣ್ಣಯ್ಯನೇ ಒಂದು ತರಹ ಮನುಷ್ಯ-ಮನಸ್ಸಿನಲ್ಲಿ ಏನೋ ಇಟ್ಟು ಕೊಂಡು ಕೊರಗುತ್ತಿದ್ದಂತೆ ಕಾಣುತ್ತೆ....ತಿಪ್ಪಯ್ಯ ನಾಳೆ ಪ್ರಸ್ತಾಪ ಮಾಡ್ತೀನೀಂತ ಹೇಳಿದ್ದಾನೆ....ಏನಾಗುತ್ತೊ ನೋಡಬೇಕು....ರಾಜೀವಿ. ನಾನು ನಾಳೆಯೇ ಹೊರಟುಬಿಡ್ತೀನಿ....ಏನು ಮಾಡೋದೂಂತ ಯೋಚನೆಯಾಗಿತ್ತು. ಯೋಚನೇನ್ನ ನೀನು ಬಗೆಹರಿಸಿದೆ. ಶಿವಮೊಗ್ಗೆಯಿಂದ ನಾಡಿದ್ದು ಹೊರಟು ಚಿತ್ರದುರ್ಗಕ್ಕೆ ರೈಲಿನಲ್ಲಿ ಹೋಗ್ತೇನೆ...."

"ಚಿತ್ರದುರ್ಗಕ್ಕೆ ನೇರವಾಗಿ ರೈಲಿದೆಯೊ ?"

"ಅದೂ ಗೊತ್ತಿಲ್ಲವೇ ನಿನಗೆ? ಶುದ್ಧ ಹಳ್ಳಿ ಹುಡುಗಿ ಕಣೆ ನೀನು. ಶಿವಮೊಗ್ಗಾದಿಂದ ಬೀರೂರು, ಅಲ್ಲಿಂದ ರೈಲು ಬದಲಾಯಿಸಿ ಚಿಕ್ಕಜಾಜೂರಲ್ಲಿ ಇಳಿದು ಚಿತ್ರದುರ್ಗಕ್ಕೆ ಹೋಗಬೇಕು"

"ಎರಡುಕಡೆ ರೈಲು ಬದಲಾಯಿಸಬೇಕು"

"ಯಾಕೆ ನೀನು ಬರಲಿಕ್ಕೆ ಈಗನಿಂದಲೇ ದಾರಿ ಕೇಳುತ್ತಿದ್ದಿಯೇನು?"

"—ಹೂಂ—ನಾನೊಬ್ಬಳೇ ಈ ಪಾಟಿ ಸಾಮಾನು ಸರಂಜಾಮು ಕಟ್ಟಿಕೊಂಡು ಬರಲಾರೆ. ಮನೆಮಾಡಿ ನೀವೇ ರಜ ತೊಗೊಂಡು ಬಂದು ಕರೆದು ಕೊಂಡು ಹೋಗಬೇಕು"

"ನಿಮ್ಮ ತಂದೆ ಕರ್ಕೊಂಡು ಬರ್ತೀನೀಂತ ಹೇಳಿದ್ದಾರೆ"

"ಇದನ್ನ ಯಾವಾಗ ಹೇಳಿದರು, ನನ್ನ ಹತ್ತಿರ ಹೇಳಲೇ ಇಲ್ಲ ?"

"ಹೇಳಲಿಲ್ಲವೆ ? ನಾನೂ ಹೇಳಿರಲಿಲ್ಲ ನೋಡು, ಮನೆ ಮಾಡಿ ಕಾಗದಾ ಹಾಕ್ತೇನೆ, ಅವರೇ ಬರ್ತಾರಂತೆ ನಿನ್ನ ಕರಕೊಂಡು"

"ನಾನು ಮತ್ತೆ ಹಿರೇಹಳ್ಳಿಗೆ ಹೋಗಬೇಕೆ ?"

"ಬೇಡ ಮಹರಾಯ್ತಿ, ಇಲ್ಲಿಗೇ ಬಂದು ಕರೆದುಕೊಂಡು ಬರ್ತಾರೆ. ಆಗಲೇ ಗಂಡನ ಮನೆ ಬಿಟ್ಟಿರಲಾರೆಯೇನು" ಎಂದು ಮೆಲ್ಲಗೆ ಕೆನ್ನೆ ಚಿವುಟಿದ.

"....ಸಾಕು ಸುಮ್ಮನಿರಿ...." ಎಂದು ದೀಪ ಚಿಕ್ಕದುಮಾಡಿ ಮಲಗಿ ಕೊಂಡರು, ಗಲ್ಲಕ್ಕೆ ಗಲ್ಲ ಹಚ್ಚಿ.

ಮರುದಿನ ಸುಬ್ಬರಾಯ ಊರಿಗೆ ಹೊರಡಲು ಸಿದ್ಧನಾದ. ಮುಂಜಾನೆ ಮನೆಬಿಟ್ಟು ಹೊರಟುಹೋದ ಲಕ್ಷ್ಮಣ, ಗಾಡಿ ಸಿದ್ಧವಾಗಿ ಹೊರಟು ನಿಂತಿದ್ದರೂ ಬಂದಿರಲಿಲ್ಲ. ಅಣ್ಣನ ಈ ವರ್ತನೆ ತ್ರಿಪುರಸುಂದರಿಗೆ ಸರಿಬೀಳಲಿಲ್ಲ. ''ಅಪ್ಪ ಅಮ್ಮ ಇದ್ದರೇ ತವರುಮನೆ, ಅವರಿಲ್ಲದ ಮೇಲೆ ಅಕ್ಕರೆ ಅಂತಃಕರಣ ಅವರೊಂದಿಗೇ ಸುಟ್ಟುಹೋಗುವುದೇನೊ! ಅಣ್ಣನದು ಇದೆಂತಹ ವರ್ತನೆ. ನಿನ್ನೆಯೇ ಸುಬ್ಬರಾಯ ಹೊರಡುವುದು ಗೊತ್ತಿದ್ದು ಗೊತ್ತಿದ್ದೂ ಅದ್ಯಾವ ಮಹತ್ಕಾರ್ಯದ ಮೇಲೆ ಮುಂಜಾನೆಯೇ ಹೋಗಬೇಕಿತ್ತು" ಎಂದು ಕೂಗಾಡಿದಳು. ಸುಮಿತ್ರೆಯ ತಾಯಿ ವೆಂಕಮ್ಮನಿಗೆ ತ್ರಿಪುರಸುಂದರಿಯ ಕೂಗಾಟಕ್ಕೆ ಕಣ್ಣು ಕೆಂಪಗಾಯಿತು.

"ಅದೇನು ಕೆಲಸವೋ ಹೇಗೆ ಹೇಳೋಕಾಗತ್ತೆ–ಗಂಡಸರು ವ್ಯವಹಾರದ ವಿಷಯವೆಲ್ಲಾ ಹೇಳಿ ಹೋಗೋಕಾಗುತ್ತೇನು ? "

"ತಮ್ಮ ಊರಿಗೆ ಹೊರಟು ನಿಂತಿದ್ದಾನೆ. ಅವನಿಗೆ ಏನುಬೇಕು, ಬೇಡ, ಹೇಗೆ ಇರ್ತಾನೆ, ಅಲ್ಲಿ ಎಲ್ಲಿರ್ತಾನೆ ಒಂದೂ ವಿಚಾರಿಸದೆ ಹೀಗೆ ಹೊರಡೋದು ಲಕ್ಷಣವೇ ? "

"ದೊಡ್ಡವರ ವಿಷಯವಾಗಿ ಹಾಗೆ ಮಾತಾಡಬಾರದು"

"ಹತ್ತು ಜನದಂತೆ ನಡಾವಳಿ ತಿಳಿಯದ ದೊಡ್ಡೋರು ದೊಡ್ಡೋರೇನು? ಮಕ್ಕಳಿಗೆ ಬುದ್ಧಿಹೇಳಬಹುದು, ದಾರಿಗೆ ತರಬಹುದು. ಮನೆ ಯಜಮಾನನಾಗಿ ತಾನೇ ಹೀಗೆ ಮಾಡಿದರೆ ಬಹಳ ಚೆನ್ನಾಗಿ ಕಾಣುತ್ತೆ! "

"ನೀನು ಸುಮ್ಮನೆ ಇರು ತಿಪ್ಪಕ್ಕ" ಎಂದ ಸುಬ್ಬರಾಯ.

"ಹೀಗೆ ನೀನು ಸುಮ್ಮನೆ ಮೂದೇವಿಯಾಗಿದ್ರೇ ಮುಂದೆ ಓಡೋಕೆ ಮಾರ್ಗ ಕಾಣದೆ ಹೋದದ್ದು. ಅವನದೊಬ್ಬನದೇ ಏನು ಕಾರುಬಾರ–ನೀನೂ ಅವನಷ್ಟೆ ಹಕ್ಕುದಾರ ಈ ಆಸ್ತಿಗೆ. ಬರ್ಲಿ ಮನೆಗೆ ಇವತ್ತು ಅವನು, ನಾನು ನಿಷ್ಠೂರ ಕಟ್ಟಿಕೊಂಡರೂ ಚಿಂತಿಲ್ಲ, ಹೇಳಬೇಕಾದ್ದು ಹೇಳೇಬಿಡ್ತೇನೆ"

"ಸುಮ್ಮನಿರು ಮಹರಾಯ್ತಿ–ನಾನೇ ಎಲ್ಲಾ ಹೇಳ್ತೀನಿ"

ಹೊರಗೆ ಮಾತು ಬಿರುಸಾಗಿ ನಡೆದದ್ದು ಮಲಗಿದ ಸುಮಿತ್ರೆಗೆ ಕಳವಳಕ್ಕೆ ಕಾರಣವಾಯಿತು. ತಾಯಿ ಈ ವ್ಯವಹಾರದಲ್ಲಿ ತಲೆ ಹಾಕಿದ್ದು ಅವಳಿಗೆ ಸರಿಬೀಳಲಿಲ್ಲ. ಇವರೇಕೆ ಹೀಗೆ ವರ್ತಿಸುತ್ತಾರೆ. ತನಗೇನು ಮಕ್ಕಳೇ

ಮರಿಯೇ ? ಮನೆಯ ಕಿರಿಯನ ಅಭ್ಯುದಯಕ್ಕೆ ಎರವಾಗದ ಇವರ ನಡವಳಿಕೆ ಇವಳಿಗೂ ಬೇಸರಪಡಿಸಿತ್ತು. ಏಳಲಾಗದ ಮಾತಾಡಲಾಗದ ನರಳುವ ತನ್ನ ಅವಸ್ಥೆಗೆ ಮತ್ತಷ್ಟು ಕುಗ್ಗಿ ಕೊರಗಿದಳು.

ಹೊರಗೆ ಮಾತಿನ ಬಿಸಿ ಕಡಿಮೆಯಾಯಿತು. ಲಕ್ಷ್ಮಣ ಬಂದಿದ್ದ. ಅಷ್ಟುಹೊತ್ತಿಗೇ ತಿಪ್ಪಯ್ಯ ಬರಹೇಳಿದ್ದರಿಂದ ಹೋಗಿದ್ದುದಾಗಿ ತಿಳಿದುಬಂತು. ತಿಪ್ಪಯ್ಯನಿಗೂ ಇವನಿಗೂ ಏನೇನು ಮಾತುಕಥೆ ನಡೆದಿತ್ತೊ ತಿಳಿಯದು. ಬಂದವನೇ ನೇರವಾಗಿ ಚಿಕ್ಕಮನೆ ಸೇರಿ ಪೆಟ್ಟಿಗೆ ತೆಗೆದು ಐವತ್ತು ರೂಪಾಯಿ ತಂದು ಸುಬ್ಬರಾಯನ ಕೈಗೆ ಕೊಟ್ಟ. ಏನೊಂದು ಮಾತೂ ಆಡಲಿಲ್ಲ. ಮುಖದಲ್ಲಿ ಉದ್ವೇಗ ತಾಂಡವಾಡುತ್ತಿತ್ತು.

"ಹೋಗಿಬರ್ತೀನಿ" ಎಂದು ಹೇಳಿ ನಮಸ್ಕರಿಸಿದಾಗ "ಒಳ್ಳೇದು" ಅಂತ ಕೂಡ ಅನ್ನಲಿಲ್ಲ ಮಹರಾಯ. ವೆಂಕಮ್ಮನೂ ದಪ್ಪ ಮುಖದಲ್ಲೇ ಆಶೀರ್ವದಿಸಿವಳು. ಸುಮಿತ್ರೆ ಮಲಗಿದ್ದ ಕೊಠಡಿಗೆ ಬಂದು ಆಕೆಗೂ ನಮಸ್ಕಾರ ಮಾಡಿದ.

"ಹುಶಾರು—ಆರೋಗ್ಯ ನೋಡಿಕೊಪ್ಪಾ. ವಾರಕೊಮ್ಮೆ ಎಣ್ಣೆ ನೀರು ಹಾಕ್ಕೊ. ಸಿಕ್ಕದ್ದು ತಿನ್ನಬೇಡ. ಬೇಗ ಮನೆಮಾಡಿ ರಾಜೀವೀನ್ನ ಕರೆಸಿಕೊ— ಚೆನ್ನಾಗಿ ಬಾಳು'' ಎಂದು ಬಾಯಿತುಂಬಾ ಹರಸಿದಳು. ಯಜಮಾನರು ಹಣ ಕೊಟ್ಟ ಸಮಾಚಾರ ತಿಳಿದು ಸಂತೋಷಪಟ್ಟಳು. ಸುಬ್ಬರಾಯನಿಗೆ ಅವಳ ಅಂತಃಕರಣದ ಮಾತಿಗೆ ಏನು ಹೇಳಬೇಕೊ ತೋಚದಾಯಿತು.

ಇದೆಲ್ಲವನ್ನೂ ಬಾಗಿಲಬಳಿ ನಿಂತು ನೋಡಿದ ವೆಂಕಮ್ಮನಿಗೆ ಒಡಲಿಗೆ ಉರಿ ಹಚ್ಚಿದಂತೆ ಆಯಿತು. ಮಗಳ ಮೂರ್ಖತನಕ್ಕೆ ಮರುಗಿದಳು.

ಸುಬ್ಬರಾಯ ರಾಜೀವಿಗೆ, ಅತ್ತಿಗೆಗೆ ಸರಿಯಾಗಿ ಆರೈಕೆಮಾಡಿ ನೋಡಿಕೊಳ್ಳುವಂತೆ ಹೇಳಿ, ಒಂದೆರಡು ತಿಂಗಳಲ್ಲೇ ಅವಳನ್ನು ಕರೆಸಿಕೊಳ್ಳುವುದಾಗಿ ತಿಳಿಸಿದ. ತ್ರಿಪುರಸುಂದರಿಗೆ ಚಿತ್ರದುರ್ಗಕ್ಕೆ ಬರುವಂತೆ ಆಹ್ವಾನಿಸಿ ಭಾವನಿಗೆ ಹೇಳುವುದೇನಾದರೂ ಇದೆಯೇ ಎಂದು ವಿಚಾರಿಸಿಕೊಂಡು ಬಂಡಿ ಹತ್ತಿ ಹೊರಟ. ಬಂಡಿ ಮರೆಯಾಗುವವರೆಗೂ ಬಾಗಿಲಲ್ಲಿ ನಿಂತ ರಾಜೀವಿ ಮರೆಯಾದಮೇಲೆ ಕಣ್ಣಂಚಿನ ನೀರು ಒರಸಿಕೊಂಡು ಒಳಕ್ಕೆ ಬಂದಳು.

೭

"ಎಷ್ಟು ಬೇಗ ದಿನಗಳುರುಳುತ್ತವೆ" ಎಂದು ಸುಬ್ಬರಾಯ ಆಶ್ಚರ್ಯ ಪಟ್ಟದ್ದು ಸುಶೀಲೆಯ ಲಗ್ನಪತ್ರಿಕೆ ಕೈಗೆ ಬಂದಾಗ. ಕಚೇರಿಯಿಂದ ಹಿಂದಿರುಗು ವಾಗ ಸಂಜೆ ಐದುವರೆಯಾಗಿತ್ತು. ಚಿತ್ರದುರ್ಗದ ಬೆಟ್ಟದ ನೆರಳು ಇಡೀ ಊರನ್ನೇ ಮುಚ್ಚಿತ್ತು. ಪೇಟವನ್ನು ಹಣೆಯ ಅರ್ಧಕ್ಕೆ ಮುಚ್ಚಿಕೊಂಡು ಸಹೋದ್ಯೋಗಿ ರಾಮಸ್ವಾಮಿ ವಿಠ್ಠಲಸಾ ರವರೊಡನೆ ಅಂದಿನ ದಿನಚರಿಯ ಆಗುಹೋಗುಗಳನ್ನು ಚರ್ಚಿಸುತ್ತಾ ಮನೆಕಡೆ ಹೊರಬಿದ್ದ.

ಅಯ್ಯಣ್ಣನಪೇಟೆ ಬಳಿಯ ಮಠದ ಕೇರಿಯಲ್ಲಿ ಚಿಕ್ಕಮನೆ ಮಾಡಿದ್ದ ಸುಬ್ಬರಾಯ. ಕರಿ ಹಂಚಿನ ಚಿಕ್ಕಮನೆ. ಒಂದಕ್ಕೊಂದು ಹೊಂದಿಕೊಂಡಂತೆ ಆ ವಠಾರದಲ್ಲಿ ಇಂಥವೇ ಹತ್ತಾರು ಮನೆಗಳುಂಟು. ಮನೆಯ ಮುಂದೆ ಮಠದ ಭಾವಿ. ಇಳಿಯುವ ಹಳೇಕಾಲದ ದೊಡ್ಡ ಭಾವಿ. ಸುತ್ತಲೂ ಸೊಂಟದೆತ್ತರಕ್ಕೆ ಗೋಡೆಹಾಕಿ ಕಲ್ಲು ಹಾಸಿದೆ ಆ ಭಾವಿಗೆ. ಮನೆ ತಗ್ಗಾಗಿತ್ತು. ಮನೆಯ ಮುಂದೆ ಒಬ್ಬರು ಕೂರುವಷ್ಟು ಕಲ್ಲುಜಿಂಚು ಹೊರಬಾಗಿಲಿಗೆ ಎಡ ಕ್ಕಿತ್ತು. ಚಿಕ್ಕ ರೂಮು, ಅದು ದಾಟಿದರೆ ಇನ್ನೊಂದು ರೂಮು. ಅದರಲ್ಲಿ ಆಳೆತ್ತರದ ಗೋಡೆಹಾಕಿ ಆಚೆಕಡೆಗೆ ಅಡಿಗೆಮನೆ ಎಂದು ಕರೆದಿದ್ದರು. ಅಡಿಗೆ ಮನೆಯಲ್ಲಿ ಅರ್ಧ ಬಚ್ಚಲಮನೆಯಾಗಿತ್ತು. ಮಣ್ಣು ನೆಲ ವಾರಕ್ಕೊಮ್ಮೆ ಸಗಣಿಹಾಕಿ ಸಾರಿಸದಿದ್ದರೆ ಧೂಳುಮಯವಾಗುತ್ತಿತ್ತು. ಬಂದವರು ಕೂರು ವುದು, ರಾತ್ರಿ ಶಯನ ಎಲ್ಲಾ ಮುಂದಿನ ರೂಮಿನಲ್ಲೇ ಆಗಬೇಕು. ಅಡಿಗೆ ಮನೆಗೂ ಹೊರಗಿನ ಕೊಠಡಿಗೂ ಮಧ್ಯದ ಚಿಕ್ಕ ಆವರಣದಲ್ಲಿ ಊಟ, ಪೆಟ್ಟಿಗೆ ಹಾಸಿಗೆ ಸುರುಳಿ ಇಡುವುದು. ಒಂದು ಮೂಲೆಯ ಗೂಡನ್ನು ದೇವರ ಗೂಡೆಂದು ಕರೆದು ಒಂದು ಪಟ, ನಂದಾದೀಪ ಚಿಕ್ಕ ಮಂದಾಸನದ ಮೇಲಿಟ್ಟು ದೇವರ ಪೂಜೆಗೂ ಅಲ್ಲೇ ಸ್ಥಳಮಾಡಿಕೊಂಡಿದ್ದರು. ಮೂರು ವರೆ ರೂಪಾಯಿ ಬಾಡಿಗೆ ಕೊಡುತ್ತಿದ್ದರು ಆ ಮನೆಗೆ. ಬಂದ ಹೊಸದ ರಲ್ಲಿ ರಾಜೀವಿಯ ತಾಯಿ ಬಂದು ಮನೆಯನ್ನು ಅಚ್ಚುಗಟ್ಟಾಗಿ ಜೋಡಿಸಿ ಕೊಟ್ಟು ಒಂದು ತಿಂಗಳಿದ್ದು ಹೋಗಿದ್ದರು. ರಾಜೀವಿ – ಸುಬ್ಬರಾಯ

ಹೊಸ ಹುರುಪಿನಲ್ಲಿ ಬರುವ ಇಪ್ಪತ್ತು ರೂಪಾಯಿ ಸಂಬಳದಲ್ಲಿ ನೆಮ್ಮದಿಯಾಗೇ ಇದ್ದರು. ಸುಬ್ಬರಾಯ ರಾಜೀವಿಯ ಹುರುಪು ಉತ್ಸಾಹ ಆಸಕ್ತಿ ಪ್ರೀತಿ ಪ್ರೇಮಗಳನ್ನು ಒಂದಲ್ಲ ಒಂದು ಕ್ರಮದಿಂದ ಕಾಣುತ್ತಿದ್ದ. ಗಂಡ ಹೆಂಡಿರು ಅಚ್ಚುಮೆಚ್ಚಾಗಿ ಪುಟ್ಟ ಸಂಸಾರ ಸಾಗಿಸಿದ್ದರು.

ಸುಬ್ಬರಾಯನಿಗೆ ಚಿತ್ರದುರ್ಗ ಬಹುವಾಗಿ ಮೆಚ್ಚಿನ ಊರಾಗಿತ್ತು. ತನ್ನ ಪ್ರೀತಿಯ ಈಜುಗಾರಿಕೆಗೆ ಬೆಟ್ಟದ ಮೇಲಿನ ಗೋಪಾಲಸ್ವಾಮಿ ಹೊಂಡ, ಊರ ಹೊರಗಿನ ವೆಂಕಟರಮಣಸ್ವಾಮಿ ದೇವಸ್ಥಾನದ ಹೊಂಡ ನೆಮ್ಮದಿಯಾಗಿತ್ತು. ಬೆಳಗಿನಜಾವಕ್ಕೇ ಎದ್ದು ಬಟ್ಟೆ ಕಟ್ಟಿಕೊಂಡು ಬೆಟ್ಟಕ್ಕೆ ಹೋಗಿ ಲಕ್ಷಣವಾಗಿ ಬಟ್ಟೆ ಒಗೆದುಕೊಂಡು ಮನಸ್ವಿಯಾಗಿ ನೀರಿನಲ್ಲಿ ಈಜಿ ಸೂರ್ಯ ಹುಟ್ಟುವಹೊತ್ತಿಗೆ ಬೆಟ್ಟ ಇಳಿದು ಬಂದುಬಿಡುವ. ರಾಜೀವಿ ಅಷ್ಟುಹೊತ್ತಿಗೆ ಮನೆ ಮುಂದೆ ಸಾರಿಸಿ ಕಸಮುಸುರೆ ಮಾಡಿಕೊಂಡು ಕಾಫಿ ಮಾಡಿಟ್ಟಿರುತ್ತಿದ್ದಳು. ಅಡಿಗೆಮನೆಯಲ್ಲೇ ಮಣೆ ಹಾಕಿಕೊಂಡು ಇಬ್ಬರೂ ಒಟ್ಟಿಗೇ ಕಾಫಿ ಕುಡಿಯುತ್ತಿದ್ದರು.

ಒಂಭತ್ತು ಘಂಟೆ ಹೊತ್ತಿಗೆ ಸಾಹೇಬರ ಮನೆಗೆಹೋಗಿ ಅವತ್ತಿನ ಟಪಾಲನ್ನು ಒಡೆದು ಅವರು ಹೇಳಿದ ವಿವರಗಳನ್ನು ಗುರ್ತುಹಾಕಿಕೊಂಡು ಬರುವನು. ಹನ್ನೊಂದು ಘಂಟೆಗೆ ರಾಜೀವಿ ರುಚಿಯಾಗಿ ಅಡಿಗೆಮಾಡಿ ಬಡಿಸುವಳು. ಕೋಟು ಪೇಟ ಹಾಕಿ ಚಪ್ಪಲಿ ಧರಿಸಿ ಕಚೇರಿಗೆ ಹೊರಟು ನಿಂತಾಗ ರಾಜೀವಿ ಎಲೆ ಅಡಿಕೆ ಮಡಿಸಿ ಕೊಡುವಳು. ಬಾಯಿ ತುಂಬ ಕೆಂಪು ರಂಗು ಮಾಡಿಕೊಂಡು ಹೊರಟಾಗ ರಾಜೀವಿಗೆ ಮನ್ಮಥನೇ ಕಚೇರಿಗೆ ಹೊರಟು ನಿಂತಂತೆ ಕಾಣುತ್ತಿತ್ತು. ಸುಬ್ಬರಾಯನಿಗೆ ರತಿಯನ್ನು ಬಿಟ್ಟುಕೊಟ್ಟು ಹೋಗುವ ಅನುಭವವಾಗುತ್ತಿತ್ತು.

ಅವತ್ತು ಸಂಜೆ ಮನೆಗೆ ಬಂದವನೇ ರಾಜೀವಿಯ ಕೈಗೆ ಸುಶೀಲೆಯ ಲಗ್ನಪತ್ರಿಕೆ ಕೊಟ್ಟ. ಅದನ್ನೋದಿಕೊಂಡು ಅವಳು "ನೀವು ಹೋಗಲೇ ಬೇಕೇನು ?" ಎಂದಳು.

"ಹೋಗಲೇಬೇಕೂಂತ ನಾನು ನಿಶ್ಚಯ ಮಾಡಿಕೊಂಡಿರಲಿಲ್ಲ. ಈ ಕಾಗದ ನೋಡು"

"ಯಾರದ್ದು ಕಾಗದ ?"

“ಓದಿನೋಡಬಾರದೆ ? ”

“ನೀವೇ ಓದಿ. ನೋಡಿ ಅಕ್ಷರ ತಡವರಿಸಿಕೊಂಡು ನಾನು ಓದಲಾರೆ”

“........ಸರಿ ಇಲ್ಲಿ ತಾ........ಕ್ಷೇಮಾ ಶಿವಮೊಗ್ಗಾ....ಶ್ರೀ ಸುಬ್ಬರಾಯರ ಸಮುಕ್ಷಮುಕ್ಕೆ ರಂಗಮ್ಮನ ಆಶೀರ್ವಾದಗಳು........ಅದಾಗಿ ಉಭಯ ಕುಶ ಲೋಪರಿ ಸಾಂಪ್ರತ’’

‘‘ಮುಖ್ಯವಾದ ವಿಚಾರ ಓದಿ ಹೇಳಬಾರದೇ....’’

“ಏನು ಅವಸರವಪ್ಪ ಇವಳಿಗೆ....ಆಫೀಸಿಂದ ಬಂದವನಿಗೆ ಕಾಫಿ ಗೀಫಿ ಕೊಡ್ತೀಯೋ ಇಲ್ಲವೋ’’

“ಮನೆಗೆ ಬರುತ್ತಿದ್ದ ಹಾಗೇ ಕಾಗದಾ ನೋಡು, ಲಗ್ನ ಪತ್ರಿಕೆ ನೋಡೂಂತ ಅವಾಂತರ ಮಾಡಿದವರು ಯಾರೋ ? ಅದಕ್ಕೆ ಕಾಫಿ ವಿಷಯಕ್ಕೆ ಆಸ್ಪದವೇ ಇರಲಿಲ್ಲ”

“....ಮೊದಲು ಕಾಫಿ ತೊಗೊ ಆಮೇಲೆ ವಿಷಯ ವಿವರಿಸ್ತೀನಿ”

“ಇದು ರಂಗಮ್ಮನೋರ ಅಕ್ಷರವೇ ? ”

“....ಭಾವನ ಪೋಸ್ಟಾಫೀಸಿನ ಅವಸರದ ಬರಹ ಗೊತ್ತಾಗೋದಿಲ್ಲವೇ ? ಹೇಳಿ ಅವನ ಕೈಲಿ ಬರೆಸಿದ್ದಾರೆ”

“ರಂಗಮ್ಮನವರಿಗೆ ಬರಿಯೋಕೆ ಬರೋಲ್ಲವೆ ? ”

“ಓದೂ ಕಾಣರೂ ಬರಹವೂ ಕಾಣರು’’

“ಪಾಪ”

“ನಿನಗೆ ಮಹಾ ಓದೋಕೆ ಬರುತ್ತೊ, ಮಹಾ ವಿದ್ಯಾವಂತೆ ನೀನು ! ”

“ನಾನೇನು ವಿದ್ಯಾವತೀಂತ ಹೇಳಿಕೊಂಡೆನೇನೀಗ ? ಕನ್ನಡ ಲೋಯರ್ ಸೆಕೆಂಡ್ರಿ ಸಾಲದೇ ? ”

“ಸಾಕು ಸಾಕು”

“ಸಾಕು ಸಾಕು–ಎಸ್ ಎಸ್ ಎಲ್ ಸಿಗೆ ಸರಿಯಾದ ಹೆಣ್ಣು. ಸಾಕು ಸಾಕು”

“ಹಹಹ....ಹಾಸ್ಯಮಾಡೇ....ಮಾಡು. ಬರೀ ಮಾತಲ್ಲೇ ಆಯ್ತೋ ಕಾಫಿ ಉಂಟೋ ? ”

"....ಕೊಡ್ತೀನಿ ನೀವು ಒಂದಲ್ಲಾ ಒಂದು ಮಾತು ತೆಗೆದು ಒಳಕ್ಕೆ ಹೋಗೋಕೇ ಬಿಡೋಲ್ಲ''

"ಸದಾ ನೀನು ನನ್ನೆದುರಿಗೇ ಇರಬೇಕೂಂತ ಆಸೆ"

"ಪಾಪ ಅಲ್ವೇ" ಎಂದು ಒಳಕ್ಕೆ ಹೋಗಿ ಬಿಸಿ ಬಿಸಿಯಾದ ಕಾಫಿ ಜೊತೆಗೆ ಎರಡು ಕೋಡುಬಳೆ ತಂದುಕೊಟ್ಟಳು. ಮಧ್ಯಾನ್ಹ ಕೋಡುಬಳೆ ಕರಿದಿಟ್ಟಿದ್ದಳು.

"ಕೋಡುಬಳೆ ಮಾಡ್ತೀನೀಂತ ಹೇಳಲೇ ಇಲ್ಲ ನೀನು!''

"ಪಕ್ಕದಮನೆ ಪದ್ಮಾವತಮ್ಮ ಮಧ್ಯಾಹ್ನ ಬಂದಿದ್ದರು. ಅಕ್ಕಿಹಿಟ್ಟು ಬೀಸುತ್ತಿದ್ದೆ ಆಗ. ಅವರು ತಮ್ಮ ಮನೆಯಲ್ಲಿ ಕೋಡುಬಳೆ ಮಾಡಿ ಬಂದು ದಾಗಿ ಹೇಳಿದರು. ಹೇಗೂ ಶನಿವಾರ ರಾಮದೇವರ ಪೂಜೆಮಾಡಿ ನೇವೇದ್ಯ ಮಾಡಿದ ಕಾಯಿಹೋಳಿತ್ತು. ತುರಿದುಹಾಕಿ ಹಿಟ್ಟುಕಲಸಿ ಒಂದಿಷ್ಟು ಮಾಡಿ ಬಿಟ್ಟೆ''

"ಪರವಾಗಿಲ್ಲಕಣೆ ರುಚಿಯಾಗಿದೆ ಕೋಡುಬಳೆ, ಇನ್ನೆರಡು ಕೊಡು''

"ಇದೇನು ಹುಡುಗರ ಹಾಗೆ ಆಡ್ತೀರಲ್ಲಾ ತಿಂಡಿಗೆ"

"ನಾನು ಹುಡುಗನೇ, ನೀನೊಂದು ಹುಡುಗನ್ನ ಹಡೆದು ಕೊಡುವ ವರೆಗೆ...." ಎಂದು ಅವಳನ್ನು ದಿಟ್ಟಿಸಿ ನೋಡಿದ. ಕೆನ್ನೆಗಳು ಕೆಂಪಗಾಗಿ ತಲೆ ತಗ್ಗಿಸಿ ನಾಚಿ ನಕ್ಕಳು ರಾಜೀವಿ. ಅವಳ ಮುಖದಲ್ಲಿ ಅಪೂರ್ವ ಕಳೆ ಮೂಡಿತ್ತು. ಏನೋ ನೆನಪಾದಂತೆ ಸುಬ್ಬರಾಯ ಕೇಳಿದ.

"ರಾಜೀವಿ ನೀನು ಹೊರಗೆ ಕೂತು ಎಷ್ಟು ದಿನವಾಯಿತು?'' ರಾಜೀವಿ ಮಾತಾಡಲಿಲ್ಲ. ಆಗಲೇ ಹೊರಗಡೆ ಕತ್ತಲು ಕವಿಯತೊಡಗಿತ್ತು. ಒಳ ಗಡೆಯ ಅಡ್ಡಗೋಡೆಯ ಮೇಲಿದ್ದ ಲಾಂದ್ರವನ್ನು ತೆಗೆದು ಅದರ ಚಿಮಣಿ ಯನ್ನು ಒರಸಿ ಗಾಜು ಶುಭ್ರಮಾಡಿ ಎಣ್ಣೆಹಾಕಿ ದೀಪ ಹತ್ತಿಸಿದಳು. ಮಂದ ವಾದ ಆ ಲಾಂದ್ರದ ಬೆಳಕಿನಲ್ಲಿ ಎರಡು ತಿಂಗಳ ಗರ್ಭಿಣಿ ರಾಜೀವಿ ಹೊಂಬಣ್ಣ ಚೆಲ್ಲಿದ ನಸುಗುಲಾಬಿಯಂತೆ ಕಂಗೊಳಿಸಿದಳು. ಸುಬ್ಬರಾಯ ಹಚ್ಚಿಟ್ಟ ಲಾಂದ್ರವನ್ನು ಕೈಗೆತ್ತಿಕೊಂಡು ತೆರೆದ ಮುಂಬಾಗಿಲ ಹಿಂದೆ ಸೂರಿನಿಂದ ನೇತುಬಿದ್ದ ದಾರಕ್ಕೆ ಕಟ್ಟಿ "ರಾಜೀವೀ....ತಿಂಡಿಗೆ ಹಟಮಾಡುವ ಪುಟ್ಟ ಪಾಪನನ್ನು ಕರೆತರಲು ಎಷ್ಟುದಿನಬೇಕೆ?'' ಎಂದು ಅವಳ ಹಿಂದೇ ಮುಂದಿನ

ಕೊಠಡಿಗೆ ಹೋದ. ಅವಳು ತನ್ನ ಕೈಲಿದ್ದ ಇನ್ನೊಂದು ದೀಪವನ್ನು ಅಡ್ಡ ಗೋಡೆಯ ಮೇಲಿಟ್ಟು ಇನ್ನೊಂದು ಕಡ್ಡಿ ಕೊರೆದು ದೇವರ ಗೂಡಿನಲ್ಲಿದ್ದ ದೀಪ ಉರಿಸಿದಳು. ಅವಳ ಮುಖದಲ್ಲಿ ಹೆಮ್ಮೆಯ ಕಳೆ ಕಳಕಳಿಸುತ್ತಿತ್ತು. ಹತ್ತಿರ ಬಂದ ಸುಬ್ಬರಾಯ ಅವಳ ತಲೆ ನೇವರಿಸಿ ಮುಖವನ್ನು ದಿಟ್ಟಿಸಿದ. ತುಂಬುಗಣ್ಣಿನಿಂದ ಅವನನ್ನು ನೋಡಿ ಪಿಸು ಮಾತಿನಲ್ಲಿ ಹೇಳುವಂತೆ ಹೇಳಿದಳು

''ಹೊರಗಾಗಿ ಎರಡು ತಿಂಗಳಾಯಿತು" ಎಂದು.

ಸುಬ್ಬರಾಯ ಟೌಲು ಹೆಗಲಿಗೇರಿಸಿ ಚೀಲ ಹಿಡಿದು ಹೊರಕ್ಕೆ ಹೋದ. ನೇರವಾಗಿ ಸಂತೆ ಬಾಗಿಲು ದಾಟಿಹೋಗಿ ಹೊಳಲ್ಕೆರೆ ರಸ್ತೆಯ ಪಕ್ಕದ ಹಣ್ಣಿನ ಅಂಗಡಿಗಳಿಗೆ ಬಂದ. ಮೂರು ಕಿತ್ತಲೆಹಣ್ಣು, ಒಂದು ದಾಳಿಂಬೆ, ಕೊಂಚ ದ್ರಾಕ್ಷಿ ಕೊಂಡು ಚೀಲಕ್ಕೆ ತುಂಬಿದ. ಸೊಗಸಾದ ಎರಡು ಕುಚ್ಚು ಮಗ ಮಗಿಸುವ ಮಲ್ಲಿಗೆಯ ಹೂವಿನ ಕುಚ್ಚು ಕಟ್ಟಿಸಿಕೊಂಡು ಮನೆಗೆ ಬಂದಾಗ ರಾತ್ರಿ ಎಂಟುಘಂಟೆಯಾಗಿತ್ತು. ರಾಜೀವಿ ಅಡಿಗೆಮನೆಯಲ್ಲಿ ಒಲೆ ಮುಂದೆ ಕುಳಿತಿದ್ದಳು. ''ಲೇ....ಬಂದು ನೋಡಿಲ್ಲಿ" ಎಂದಾಗ ರಾಜೀವಿ ಹೊರಕ್ಕೆ ಬಂದಳು. ಯಜಮಾನರು ಕೈಲಿ ಹಿಡಿದ ಚೀಲವನ್ನು ಅವಳ ಕೈಗೆ ಕೊಡುತ್ತಾ ಹೊರಬಾಗಿಲು ಮುಂದೆ ಮಾಡಿದರು. ಆ ಪುಟ್ಟ ಮನೆಯಲ್ಲಿ ಕೊಂಚ ಬಾಗಿಲು ತೆರೆದಿದ್ದರೆ ಗಂಡ ಹೆಂಡಿರ ಸರಸದ ಮಾತು ಕೂಡ ಬೀದಿಗೆ ಬರುವುದು. ಹೂವು ಹಣ್ಣು ಹೊರಕ್ಕೆ ತೆಗೆದಳು ರಾಜೀವಿ. ತನ್ನ ಬಯಕೆಯನ್ನು ಕೆಲವು ದಿನಗಳ ಕೆಳಗೆ ಹೇಳಿದ್ದಳು. ಯಾವುದೋ ಮಾತಿಗೆ ಬಂದು ದಾಳಿಂಬೆ ಹಣ್ಣು ತಿನ್ನಬೇಕು ಅಂದಿದ್ದಳು. ಸುಬ್ಬರಾಯ ಈ ದಿನ ಹೆಂಡತಿಯ ಈ ಬಯಕೆ ಬರಿಯ ಬಾಯಿ ಚಪಲದ್ದಲ್ಲ, ಬಸಿರು ಹೆಂಗಸಿನ ಬಯಕೆ ಎಂದು ಅದನ್ನು ತೀರಿಸಲು ಕೂಡಲೇ ಹಣ್ಣು ಹೂವು ತಂದಿದ್ದ.

ರಾಜೀವಿ ಏನೊಂದು ಮಾತೂ ಆಡದೆ ದೇವರ ಗೂಡಿಗೆ ಎದುರಾಗಿ ನಿಂತು ಹೂವನ್ನು ಶ್ರೀ ಪಟ್ಟಾಭಿರಾಮ ದೇವರ ಪಟಕ್ಕೆ ಹಾಕಿ ಹಣ್ಣು ದೇವರ ಮುಂದಿಟ್ಟು ಕೈ ಮುಗಿದಳು. ಹೆಂಡತಿಯ ಈ ವರ್ತನೆ ಸುಬ್ಬರಾಯನನ್ನು ಅಚ್ಚರಿಗೊಳಿಸಿತು.

"ಶನಿವಾರ ಬೆಳಿಗ್ಗೆ ಕಾಯಿ ನೇವಿದ್ಯ, ಸಂಜೆ ಹಣ್ಣು ನೇವಿದ್ಯ. ದೇವರ ಸೇವೆ ಹೀಗೇ ನಡೆದರೆ ಸಾಕು"

"ಹಾಗೇ ನಡೆಯಲಿ, ಬೆಳಗಿನ ಕಾಯಿ ಕೋಡುಬಳೆಯಾಯಿತು. ರಾತ್ರಿಯ ಹಣ್ಣು ಏನಾಗುತ್ತದೆ ? "

"ಆಗುವುದೇನು ನನಗೆ ಶನಿವಾರ ರಾತ್ರಿ ಊಟವಿಲ್ಲದ್ದು ತಿಳಿಯದೆ ? ಫಲಹಾರಾ ಅನ್ನೋದು ನಿಜವಾಗಿ ಫಲವನ್ನೇ ತಿಂದಂತಾಗುತ್ತೆ"

"ಇಂಥಾ ಉಪವಾಸ ನಾನು ಎಷ್ಟು ಬೇಕಾದರೂ ಮಾಡಿಯೇನು"

"ಊಟಗೀಟ ಮಾಡ್ತೀರೋ ಬರೀ ಅದು ಇದೂ ಮಾತಲ್ಲೇ ಇರೋಣವೊ ? "

"ಅದೂ ಇದೂ ಮಾತೇಕೆ, ಒಳ್ಳೇ ಶುಭ ವಾರ್ತೆನೇ ಹೇಳಿದ್ದೀಯ. ಸುಶೀಲೆಯ ಲಗ್ನಪತ್ರಿಕೆ ಬಂದದ್ದು ಒಳ್ಳೇ ಸಮಾಚಾರವಲ್ಲವೇ ? ಈ ಗಡಿಬಿಡಿ ಮಾತಲ್ಲಿ ಹಸಿವಾದದ್ದೇ ಮರ್ತುಹೋಗಿತ್ತು. ಎಲೆ ಹಾಕು ರಾಜೀವಿ, ನಿನಗಂತೂ ಊಟವಿಲ್ಲ ಅಡಿಗೆ ಏನುಮಾಡಿದ್ದಿ ? "

"ಬರೀ ಅನ್ನ ಮಾತ್ರ ಮಾಡಿದ್ದೀನಿ ಬೆಳಗಿನ ಹುಳಿ ಮಿಕ್ಕಿದೆ. ಉಪ್ಪಿನ ಕಾಯಿ ಇದೆ. ಮಜ್ಜಿಗೆ–ಇನ್ನೇನು ಬೇಕಾಗಿತ್ತು ?...."

"ರಾಣಿ ಸಾಹೇಬರು ಬಡಿಸುವಾಗ ಏನಿದ್ದರೂ ರುಚಿ ರುಚಿಯಾಗೇ ಇರುತ್ತೆ"

"ರಾಜಕುಮಾರರು ಭೋಜನಕ್ಕೆ ದಯಮಾಡಿಸಬೇಕು"

"ಪರವಾಗಿಲ್ಲ ಮಾತಿನಲ್ಲಿ ಪ್ರವೀಣೆ ಕಣೆ ನೀನು" ಎಂದು ಮೆಲ್ಲಗೆ ಕೆನ್ನೆಗೊಂದು ಏಟು ಕೊಟ್ಟ. "ಥೂ ಹೋಗೀಂದ್ರೆ" ಎಂದು ಅಡಿಗೆ ಮನೆಗೆ ಅಡ್ಡ ಗೋಡೆಯ ಮೇಲಿನ ದೀಪ ಹಿಡಿದು ಹೋದಳು. ಪೆಪ್ಪರಮೆಂಟಿನ ಡಬ್ಬದ ಮೇಲೆ ದೀಪವನ್ನಿಟ್ಟು ಅಲ್ಯೂಮಿನಿಯಂ ತಟ್ಟೆಹಾಕಿ ಮಣೆಹಾಕಿ ಶುಭ್ರವಾಗಿ ತೊಳೆದು ಥಳಥಳಿಸುವ ತಂಬಿಗೆ ಥಾಲಿಯಲ್ಲಿ ನೀರಿಟ್ಟು ಅಡ್ಡ ಸೆರಗು ಕಟ್ಟಿಕೊಂಡು ಅನ್ನ ತೋಡಿಕೊಳ್ಳುವ ಹೊತ್ತಿಗೆ ಸುಬ್ಬರಾಯ ಅಂಗಿಬಿಚ್ಚಿ ಕೈಕಾಲು ತೊಳೆದುಕೊಂಡು ಕುಳಿತು ಬಡಿಸಿದ್ದನ್ನು ಕಬಳಿಸಲು ಸಿದ್ಧನಾಗಿದ್ದ. ರಾಜೀವಿ ಬಡಿಸಿದ ಬಿಸಿ ಬಿಸಿ ಅನ್ನ ಆರಿದ ಹುಳಿ ನಿಜವಾಗಿ ತುಂಬಾ ರುಚಿ

ಯಾಗಿತ್ತು. ಅದಕ್ಕೆ ಕಾರಣ ಗಂಡಹೆಂಡಿರು ಪ್ರೇಮಮಯ ವಾತಾವರಣ ದಲ್ಲಿ ನಡೆಸಿದ ಸಂಭಾಷಣೆಯೇ ಇರಬೇಕು.

"ಅಲ್ಲಾಂದ್ರೆ ಸುಶೀಲೆಯ ಲಗ್ನಪತ್ರಿಕೆ-ರಂಗಮ್ಮನವರ ಕಾಗದಾ ಪೂರ್ತಿ ಓದಲೇ ಇಲ್ಲವಲ್ಲ ನೀವು?"

"ಓದುವುದಕ್ಕೆ ನೀನು ಬಿಟ್ಟರೆತಾನೆ!"

"ನೀವೇ ಯಾವುದೋ ಮಾತು ತೆಗೆದದ್ದು"

"ನೀನೇನೇ....ಯೋಚನೆಮಾಡಿ ಹೇಳು"

"....ನಾನೇ-ಆಯ್ತು. ಈಗಲಾದರೂ ಹೇಳಿ ಕಾಗದದ ತಾತ್ಪರ್ಯಾನ"

"ಮುಂದಿನ ನವಮಿ ಮದುವೆ ಪಿಳ್ಳಂಗೇರೀಲಿ. ಖಂಡಿತ ನಿನ್ನ ಕರೆದು ಕೊಂಡು ಎರಡುದಿನ ಮುಂಚೆ ಬರತಕ್ಕದ್ದು"

"....ಹಾಗಾದರೆ ಬಟ್ಟೆಬರೆ ಕಟ್ಕೋಬೇದು ತಾನೆ?"

"....ನೀನು ಇಲ್ಲೇ ಇರಬೇಕಾಗತ್ತೆ ರಾಜೀವಿ. ರಜವೇ ಕೊಡೋಲ್ಲ. ಹೊಸದಾಗಿ ಕೆಲಸಕ್ಕೆ ಸೇರಿರೋದು ರಜ ಕೇಳೋಕೆ ಭಯ ಕಣೆ. ಸೋಮ ವಾರ ಲಗ್ನ. ಸೋಮವಾರ ಮಂಗಳವಾರ ರಜಾ ತೊಗೊಂಡರೆ ಭಾನುವಾರ ಕೂಡಿಬಂದು ಮೂರುದಿನ ಒಟ್ಟಿಗೇ ರಜ ಆದಹಾಗೆ ಆಗುತ್ತೆ. ಶನಿವಾರ ಸಂಜೆ ಮೇಲಿಗೆ ಹೊರಟರೆ ಸರಿಹೋಗುತ್ತೆ"

"........ಇನ್ನು ಕೊಂಚ ಅನ್ನ ಹಾಕಲೇ?"

"ಸಾಕು ಸಾಕು ಹುಳಿ ಇದೆಯೇನು ಇನ್ನು ಸ್ವಲ್ಪ?"

"ನಾನೂ ಮದುವೆಗೆ ಬರುವವಳು"

"ನಿರ್ಧಾರ ಮಾಡಿಕೊಂಡೇ ಹೇಳೋಹಾಗೆ ಹೇಳ್ತೀಯಲ್ಲಾ"

"ಇನ್ನೊಂಚ ತುಪ್ಪ ಬಡಿಸಲೇ...."

"ಬೇಡ ಬೇಡ ನನ್ನ ತಾಜಾ ಮಾಡಬೇಡ ಗೊತ್ತಾಯ್ತು. ನಾನೊಬ್ಬನೇ ಹೋಗುವವ"

"ಅಯ್ಯೋ ರಾಮ....ಸಧ್ಯ ನೀವೊಬ್ಬರೆ ಹೋಗಿ, ಯಾರು ಬೇಡಾಂ ದವರು........" ಎಂದು ಸಿಟ್ಟಿನಿಂದಲೇ ಹೇಳಿದಳು. ರಾಜೀವಿಗೆ ಮನಸ್ಸು ನೊಂದಿತ್ತು. ಕೋಪ ಬಂದಿತ್ತು. ಮುಖ ದಪ್ಪ ಮಾಡಿಕೊಂಡು ಮಜ್ಜಿಗೆಗೆ ಅನ್ನ ಬಡಿಸಿದಳು. ಮಜ್ಜಿಗೆ ಸುರಿದು ಒಂದು ಹೋಳು ಉಪ್ಪಿನಕಾಯಿ ಎಲೆ

ತುದಿಗೆ ಹಾಕಿ ಪಾತ್ರೆಗಳನ್ನು ಒಲೆಯ ಹತ್ತಿರ ಸರಿಯಾಗಿಟ್ಟು ಬಿದ್ದ ಅಗಳು ತೆಗೆದು ತನ್ನ ಕೆಲಸದಲ್ಲಿ ತೊಡಗಿಬಿಟ್ಟಳು. ಸುಬ್ಬರಾಯನಿಗೆ ಮನಸ್ಸು ಪಿಚ್ಚೆನಿಸಿತು. ಕೊಂಚಹೊತ್ತಿನ ಕೆಳಗೆ ಬಿರಿದ ದಾಳಿಂಬೆಯಂತಹ ಹಲ್ಲು ಬೀರಿ ನಕ್ಕು ಕಂಗೊಳಿಸಿದ ಮುಖಕಮಲ ಕೋಪದಿಂದ ಬುಸುಗುಟ್ಟುತ್ತಿತ್ತು. ರಾಜೀವಿಗೆ ಕೋಪ ಬರುವುದು ಅಪರೂಪ. ತೀರ ಮನಸ್ಸಿಗೆ ವಿರುದ್ಧ ಸಂಗತಿ ನಡೆದರೇ ಹೀಗೆ ಕೋಪಿಸಿಕೊಳ್ಳುವಳು. ಬಂದ ಹೊಸದರಲ್ಲಿ ಒಂದು ಕಾರಣಕ್ಕೆ ಹೀಗೇ ಸಿಟ್ಟುಗೊಂಡು ಗಂಡ ಹೆಂಡಿರು ಮಾತು ಬಿಟ್ಟಿದ್ದರು. ಮೂರು ದಿನ ಅವಳ ಕೋಪ ಶಮನವಾಗಿರಲಿಲ್ಲ. ಸುಬ್ಬರಾಯನೂ ಸೆಟೆದೇ ಇದ್ದ. ಸಾಮಾನು ಬೇಕಾಗಿದ್ದರೆ ರಾಜೀವಿ ಗೋಡೆಗೆ ಹೇಳುವಳು. ಸುಬ್ಬರಾಯ ಗೋಡೆಗೇ ಉತ್ತರ ಕೊಡುವವನಂತೆ ಹೇಳುವ. ಕಡೆಗೆ ಒಂದು ರಾತ್ರಿ ಇಬ್ಬರು ಶಾಮೀಲಾಗಿ ರಾಜಿ ಕರಾರುಮಾಡಿಕೊಂಡಿದ್ದರು. ಆ ದಿನಗಳು ಕಳೆದಮೇಲೆ ಮಾತುಬಿಟ್ಟ ದಿನಗಳನ್ನು ಇಬ್ಬರೂ ನೆನೆನೆನೆದು ನಕ್ಕುಬಿಡುವರು. ಅಂಥದೇ ಪರಿಸ್ಥಿತಿ ಈಗ ಉಂಟಾಗಿತ್ತು.

ಸುಬ್ಬರಾಯ ಸರಬರನೆ ಮಜ್ಜಿಗೆ ಅನ್ನ ಸುರಿದುಕೊಂಡು ಕೈ ತೊಳೆದುಕೊಂಡು ಗೂಡಿನಲ್ಲಿನ ಅಡಿಕೆ ಡಬ್ಬ ವಿಳ್ಳೇದೆಲೆ ಸುಣ್ಣ ಕೈಲಿ ಹಿಡಿದು ಮುಂದಿನ ಕೊಠಡಿಗೆ ಬಂದು ಚಾಪೆ ಮೇಲೆ ಕುಳಿತ. ಅಡಿಕೆ ಪುಡಿ ಅಂಗೈಗೆ ಹಾಕಿಕೊಂಡಾಗ ರಾಜೀವಿ ಸೆರಗಲ್ಲಿ ಕೈ ಒರೆಸಿಕೊಂಡು ಬಂದು ಮೂಲೆಯಲ್ಲಿನ ಹಾಸಿಗೆ ಸುರುಳಿ ಒಂದೊಂದಾಗಿ ಇಳಿಸಿದಳು. ಸುಬ್ಬರಾಯ ಅವಳ ಕೈ ಹಿಡಿದು ಹತ್ತಿರ ಕೂಡಿಸಿಕೊಂಡ. ಮುಖ ಮೇಲೆತ್ತಲೇ ಇಲ್ಲ ರಾಜೀವಿ.

"ದೇವರ ಮುಂದಿನ ಹಣ್ಣು ತರಲಿಲ್ಲವೇಕೆ ? "

"................"

"ಹೂವು ಮುಡಿದುಕೊಳ್ಳುವುದಿಲ್ಲವೇ ? "

"...................ಉಹೂಂ...."

"ಸಧ್ಯ ಎರಡು ಶಬ್ದ ಹೊರಬಿತ್ತಲ್ಲ...."

"ಸಾಕು ನಿಮ್ಮ ಸರಸ. ಊರಿಗೆ ಮಾತ್ರ ಬರಬಾರದು, ನಿಮ್ಮೊಡನೆ ಚಕ್ಕಂದವಾಡೋಕೆ ಸದಾ ಸಿದ್ಧಳಾಗಿರಬೇಕು"

“ಹಾಗೆಂದೆನೇನೆ ನಾನು? ಉಪವಾಸದ ದಿನ ಹಣ್ಣು ತಿನ್ನು. ಹೂವು ಮುಡಿದರೆ ನನ್ನ ಕಣ್ಣಿಗೆ ತಂಪ್ಹೊಂತ ಹಾಗಂದೆ”

“ನನಗೊಂದೂ ಬೇಡ....ನನ್ನ ಕೈ ಬಿಡಿ....”

“ನನ್ನ ಮಾತು ಪೂರ್ತಿ ಕೇಳಿ–ತಮಾಷೆಗೆ ಬರಬೇಡಾಂತ ಅಂದರೆ ನಿಜಾಂತ ತಿಳಿದುಕೊಂಡೆಯಾ” ಎಂದು ಸುಬ್ಬರಾಯ ಒಂದು ಮೆಟ್ಟಿಲು ಕೆಳಗಿಳಿದ. ರಾಜೀವಿಯ ಮುಖ ಒಮ್ಮೆಲೆ ಅರಳಿದ ಮಂದಾರವಾಯಿತು. ಈ ಮಂದಹಾಸ ಮಾಯವಾಗದಂತೆ ಹಾಗೇ ನಗುನಗುತ್ತಿರಬೇಕು ನನ್ನ ಹೃದಯೇಶ್ವರಿ ಎಂದುಕೊಂಡ ಸುಬ್ಬರಾಯ. ಸುಬ್ಬರಾಯ ಸಾಧಾರಣ ಪಟ್ಟಿಗೆ ಜಗ್ಗುವವನಲ್ಲ. ತನ್ನ ಹಟವನ್ನು ಸಾಧಿಸುವ ಚೈತನ್ಯವೇ ಆವನದು. ಪ್ರಸ್ತುತ ರಾಜೀವಿಯ ಪರಿಸ್ಥಿತಿ ಹಾಗಿತ್ತು. ಪಾಪ ಹುಡುಗಿ ಗರ್ಭಿಣಿ ತನ್ನೊಡನೆ ಶಿವಮೊಗ್ಗೆಗೆ ಬರಬೇಕೆಂಬ ಬಯಕೆ. ಕರೆದೊಯ್ದರೇನೀಗ? ಅವಳು ಇಲ್ಲಿದ್ದರೆ ಮನೆಯಲ್ಲಿ ಒಬ್ಬಳೇ ಇರಬೇಕು, ರಾಮಸ್ವಾಮಿಯ ಮನೆ ಯವರು ಬಂದು ಮನೆಯಲ್ಲಿ ಮಲಗಲು ಕೇಳಬೇಕು. ಇದೆಲ್ಲಾ ಪಂಚಾಯಿತಿ, ಅವಳನ್ನೂ ಕರೆದೊಯ್ಯುವುದರಿಂದ ಬಗೆ ಹರಿಯುತ್ತದೆ ಎಂಬ ವಾದಸರ ಣಿಯೂ ಅವನು ಒಂದು ಮೆಟ್ಟಿಲು ಇಳಿಯಲು ಕಾರಣವಾಗಿತ್ತು.

ಸುಬ್ಬರಾಯನೇ ಎದ್ದುಹೋಗಿ ದೇವರ ಮುಂದೆ ಇದ್ದ ಹಣ್ಣಿನ ತಟ್ಟೆ ತಂದ. ದೇವರಿಗೆ ಏರಿಸದ ಅರ್ಧ ಹೂವಿನ ಕುಚ್ಚು ಆ ತಟ್ಟೆಯಲ್ಲಿತ್ತು. ಅತ್ತ ಸುಬ್ಬರಾಯ ಎದ್ದೊಡನೇ ಚಾಪೆಯನ್ನು ಸುತ್ತಿ ಎರಡು ಹಾಸಿಗೆಗಳನ್ನೂ ಕೊಡವಿ ಅಚ್ಚುಗಟ್ಟಾಗಿ ಹಾಸಿದಳು. ಆವಳು ಹಾಸುವವೇಳೆಗೆ ಸುಬ್ಬರಾಯ ಮುಂಬಾಗಿಲನ್ನು ಭದ್ರಪಡಿಸಿ ಒಳಮನೆಯ ದೀಪ ಆರಿಸಿ ಬಂದ. ಹಾಸಿಗೆಯ ಮೇಲೆ ಇಬ್ಬರೂ ಎದುರಬದುರಾಗಿ ಕುಳಿತು ಹಣ್ಣು ತಿಂದರು. ಉಪವಾಸದ ನೆಪದಿಂದ ರಾಜೀವಿಗೆ ಹೆಚ್ಚುಪಾಲು. ಅದಾದಮೇಲೆ ರಾಜೀವಿ ಅಡಿಕೆಪುಡಿ ಅವನ ಅಂಗೈಗೆ ಹಾಕಿ ಎಲೆಗೆ ಸುಣ್ಣ ಹಚ್ಚಿ ಕೊಟ್ಟಳು. ತಾನೂ ಎಲೆ ಅಡಿಕೆ ಹಾಕಿಕೊಂಡಳು.

“ನಾನು ಬರ್ತೀನೆ ಅನ್ನೋಕೆ ಬಲವಾದ ಕಾರಣವಿದೆ”

“ಅದೇನು ಅಂಥಾ ಕಾರಣ?”

"ಒಂದನೇದು, ಸುಶೀಲೆಯನ್ನು ನಾನು ನೋಡಬೇಕು. ನೀವು ಜೀವ ಉಳಿಸಿದ ತಂಗಿಯನ್ನು ನೋಡಬೇಡವೆ?" ಹೀಗೆಂದಾಗ ಸುಬ್ಬರಾಯನ ಮೈಯ್ಯಲ್ಲಿ ಮಿಂಚು ಸುಳಿದಂತಾಯಿತು. ಒದ್ದೆಮುದ್ದೆಯಾದ ಅವಳ ಸುಂದರ ಸ್ವರೂಪವನ್ನು ಕೈಯ್ಯಾರೆ ಎತ್ತಿ ತಂದದ್ದು ನೆನಪಿಗೆ ಬಂತು. ಸ್ವೀಕರಿಸೆಂದು ತೋಳು ಚಾಚಿ ನಿಂತ ಸುರಸುಂದರಿ ಸುಶೀಲೆಯ ಸ್ವರೂಪ ಕಣ್ಣೆದುರು ಬಂದು ನಿಂತಿತು. ಯಾವುದೋ ಶಕ್ತಿಯು ದೌರ್ಬಲ್ಯಕ್ಕೆ, ಈ ಮೋಹಿನಿಯ ಮಾಯಾ ಬಲಕ್ಕೆ ಬಲಿ ಕೊಡದಂತೆ ಕಾಯ್ದಿತ್ತು. ಆ ಶಕ್ತಿಯೇ ರಾಜೀವಿ ಎಂದು ಬೇರೆ ಹೇಳಬೇಕೆ? ಮತ್ತೆ ರಾಜೀವಿಯೇ ಮಾತಾಡತೊಡಗಿದಳು.

"ಎರಡನೇದು, ನಾನು ಒಂದು ತಿಂಗಳು ತವರುಮನೆಗೆ ಹೋಗಿ ಇರ ಬೇಕೆಂದು ಮನಸ್ಸಾಗಿದೆ. ಅಲ್ಲಿಂದ ಅಮ್ಮೀನಹಳ್ಳಿಗೆ ಹೋಗಿ, ಸುಮಿತ್ರಕ್ಕನ್ನ ನೋಡಿಕೊಂಡು ಬರಲೇಬೇಕು"

''ಸರಿ ಸರಿ ಹಾಗೆ ಹೇಳು. ಅದಕ್ಕೇ ಬೇಡಾಂತ ಅಂದದ್ದಕ್ಕೆ ಅಮ್ಮಾ ಅವರಿಗೆ ಕೋಪ ಬಂದದ್ದೂ"

"ಅಲ್ಲಾಂದ್ರೆ ಆರು ತಿಂಗಳಿಗೆ ಬಂತು ಇಲ್ಲಿಗೆ ಬಂದು. ಮೊದಲಸಲ ಬಂದ ವಳು ಒಂದು ತಿಂಗಳಿದ್ದು ಅಮ್ಮನ ಜೊತೆಗೇ ಹೋಗಬೇಕಾಗಿತ್ತು ನ್ಯಾಯ ವಾಗಿ. ಹೋಗಲೀಂತ ಆರು ತಿಂಗಳಿಗ್ದೇನೆ. ಈಗ ಅವಕಾಶ ಸಿಕ್ಕಾಗ ಬಿಡೊ ಕಾಗತ್ತ್ಯೆ...."

''ಸರಿ ಎಲ್ಲಾ ನೀನೇ ಹೇಳ್ತಾ ಇದ್ದೀಯ, ನನ್ನ ಮಾತೇನಿದೆ?"

''ನಾನು ಹೇಳಿದ್ದು ಸಮಂಜಸವಾಗಿದ್ದರೆ ಹೂಂ ಅನ್ನಿ, ಇಲ್ಲವೇ ಬೇಡ ವೆಂದು ಬಿಡಿ. ನಾನು ಇಲ್ಲೇ ಇರಲು ಸಿದ್ಧ''

''....ಇಲ್ಲ ರಾಜೀವಿ ನೀನು ಹೇಳೋದು ಸರಿ. ನನ್ನ ಜೊತೆ ನೀನು ಸದಾ ಇರಬೇಕು. ಇಲ್ಲವಾದರೆ ಯಾವ ಮೋಹಿನಿ ನನ್ನ ಬೆನ್ನುಹತ್ತಿ ಕಾಡಿ ಬಿಡುವಳೋ" ಎಂದು ಹೇಳಿದ. ರಾಜೀವಿ ಎದ್ದು ದೀಪ ಸಣ್ಣಗೆ ಮಾಡಿ ಮಲಗಿದಳು. ಸುಶೀಲೆಯ ನೆನಪು ಬಾರದಿರಲೆಂದೇನೋ ಅಥವ ಮೋಹಿನಿ ಯಾಗಿ ಅವಳು ಬಂದು ಕಾಡುವಳೆಂದೇನೋ, ಮಗುವಿನಂತೆ ಅವಳ ಬಳಿ ಹುದುಗಿ ಮಲಗಿದ ಸುಬ್ಬರಾಯ.

ಮರುದಿನ ಸಾಹೇಬರಿಗೆ ವಿಷಯ ಮನದಟ್ಟಾಗುವಂತೆ ವಿವರಿಸಿ ಎರಡು ದಿನ ಹೆಚ್ಚಿಗೆ ರಜ ಪಡೆದಿದ್ದ. ದೇವರ ದಯದಿಂದ ಸಂಬಳವೂ ಸಮಯಕ್ಕೇ ಬಂದಿತ್ತು. ಈ ಸುದ್ದಿ ತಿಳಿದ ರಾಜೀವಿ ಹಿಗ್ಗಿ ಹೀರೆಕಾಯಿ ಆದಳು. ಊರಿಗೆ ಹೊರಡುವ ದಿನಕ್ಕಾಗಿ ಕಾದಿದ್ದಳು. ಬಟ್ಟೆಬರೆಗಳನ್ನೂ ಒಗೆದು ಮಡಿ ಮಾಡಿ ಎಲ್ಲಾ ಸಿದ್ಧತೆಯನ್ನೂ ಮಾಡಿಕೊಂಡು ತಯಾರಾಗಿದ್ದಳು. ಬರುವ ವಿಷಯ ಕುರಿತು ಶ್ರೀಧರಮೂರ್ತಿಗೆ, ರಂಗಮ್ಮನಿಗೆ ಮತ್ತು ಮಾವ ನಾಗರಾಜ ಜೋಯಿಸರಿಗೆ ಸುಬ್ಬರಾಯ ಪತ್ರ ಬರೆದು ಹಾಕಿದ್ದ. ತ್ರಿಪುರಸುಂದರಿಯ ಮಕ್ಕಳಿಗಾಗಿ ಕೋಡುಬಳೆ, ಚಕ್ಕಲಿ ಕರಿದು ಕಟ್ಟಿಟ್ಟಳು ರಾಜೀವಿ. ಸುಬ್ಬರಾಯ ವಿಠ್ಠಲಸಾನ ಬಳಿ ಹತ್ತು ರೂಪಾಯಿ ಸಾಲ ತೆಗೆದುಕೊಂಡು ಬಾಡಿಗೆ, ಹಾಲು ಮೊಸರಿನವರಿಗೆ ಕೊಟ್ಟು ಇಪ್ಪತ್ತು ರೂಪಾಯಿ ಕೈಯ್ಯಲ್ಲಿಟ್ಟುಕೊಂಡು ಶಿವಮೊಗ್ಗಿಗೆ ಹೆಂಡತಿಯೊಡನೆ ಹೊರಟ.

ಪಕ್ಕದ ಮನೆಯಲ್ಲೇ ರಾಮಸ್ವಾಮಿ ಇದ್ದದ್ದು. ಮನೆಯಕಡೆ ನಿಗಾ ಇರುವಂತೆ ಅವರ ಮನೆಯಲ್ಲಿ ತಿಳಿಸಿ ಇದ್ದ ಒಂದೆರಡು ಬೆಳ್ಳಿ ಪಾತ್ರೆಗಳನ್ನು ತಮ್ಮ ಟ್ರಂಕಿಗೆ ಹಾಕಿಕೊಂಡು ಚಿಕ್ಕ ಹಾಸಿಗೆ ಕಟ್ಟಿಕೊಂಡು ಉತ್ಸಾಹದಿಂದ ಹೊರಟಿದ್ದರು ಸುಬ್ಬರಾಯ ದಂಪತಿಗಳು.

ರೈಲಿನಲ್ಲಿ ಮಲಗಲೇ ಇಲ್ಲ. ಚಿಕ್ಕ ಜಾಜೂರು, ಬೀರೂರು ಎರಡು ಕಡೆ ಬದಲಾಯಿಸಬೇಕಾಗಿದ್ದರಿಂದ ಇಬ್ಬರಿಗೂ ನಿದ್ರೆಗೆ ಅವಕಾಶವೇ ಸಿಕ್ಕಲಿಲ್ಲ. ಶಿವಮೊಗ್ಗ ಸಿಕ್ಕುವವೇಳೆಗೆ ರಾಜೀವಿಗೆ ಬೇಸರವೇ ಬಂದಿತ್ತು. ರೈಲು ಶಿವಮೊಗ್ಗ ತಲುಪಿದಾಗ ಮುಂಜಾನೆ ಎಂಟು ಘಂಟೆಯಾಗಿತ್ತು.

೮

"ಸುಬ್ರಾಯ್ ಮಾವ ಬಂದ........'' ಎಂದು ತ್ರಿಪುರಸುಂದರಿಯ ಮಕ್ಕಳು ಕೂಗಿಕೊಂಡು ಚಪ್ಪಾಳೆ ತಟ್ಟಿ ಕುಣಿದವು. ಸುಬ್ಬರಾಯ ಕಿರಿಯವಳನ್ನು ಎತ್ತಿಕೊಂಡು ಒಳಕ್ಕೆ ಹೋದ. ಕೊಂಚ ಹಿಂದೆ ಕೂಲಿಯವನ ಜೊತೆ ಸಾಮಾನಿನ ಜೊತೆ ರಾಜೀವಿ ಬಂದಳು. ತ್ರಿಪುರಸುಂದರಿಯ ಸಡಗರ ಹೇಳತೀರದು. ಶ್ರೀಧರಮೂರ್ತಿ ಪ್ರಯಾಸಪಟ್ಟು ಎರಡುದಿನ ರಜ ಪಡೆದಿದ್ದ. ರಂಗಮ್ಮ, ಅವಳ ಅಣ್ಣ ಅತ್ತಿಗೆ ಎಲ್ಲರೂ ಆಗಲೇ ಪಿಳ್ಳಂಗೇರಿಗೆ ಹೋಗಿದ್ದರು. ಬೀಗರು ಭಾನುವಾರ ಸಂಜೆ ಬರುವವರಿದ್ದರು. ತಿಪ್ಪಯ್ಯನವರು ಬೀಗರ ಜೊತೆ ಬರುತ್ತಾರೊ ಇಲ್ಲ ನೇರವಾಗಿ ಇಲ್ಲಿಗೇ ಬರುತ್ತಾರೊ ಅನುಮಾನವಾಗಿತ್ತು. ಅಂತೂ ಖಂಡಿತ ಬರುತ್ತಾರೆ ಅನ್ನುವುದು ಗೊತ್ತು.

ತ್ರಿಪುರಸುಂದರಿ ರಾಜೀವಿಯನ್ನು ದಿಟ್ಟಿಸಿ ನೋಡಿ ಗುಟ್ಟಾಗಿ ಕೇಳಿದಳು "ಎಷ್ಟು ತಿಂಗಳೇ ?" ಎಂದು. ಬೆರಳುಗಳೆರಡನ್ನು ಆಡಿಸುತ್ತಾ ನಾಚಿಕೆಯಿಂದ ತಲೆ ತಗ್ಗಿಸಿದಳು. ತನ್ನ ತವರುಮನೆ ವಂಶೋದ್ಧಾರಕನ ತಾಯಿಯಾಗುವಳೆಂದು ಹಿಗ್ಗಿ ಅವಳನ್ನು ತಬ್ಬಿಕೊಂಡೇಬಿಟ್ಟಳು ತ್ರಿಪುರಸುಂದರಿ.

ತ್ರಿಪುರಸುಂದರಿಯ ಸ್ವಭಾವವೇ ಹಾಗೆ. ತನ್ನವರೆನ್ನುವ ಅಭಿಮಾನ ವಿಪರೀತ. ಪ್ರೀತಿಯಿಂದ ಅಕರಾಸ್ತಿಯಿಂದ ಎಷ್ಟು ಉಪಚಾರ ಮಾಡಿದರೂ ಸಾಲದು ಅವಳಿಗೆ. ಮೊದಲಿಂದಲೂ ಸುಬ್ಬರಾಯನೆಂದರೆ ಪಂಚಪ್ರಾಣ ಅವಳಿಗೆ. ಅಣ್ಣ ಲಕ್ಷ್ಮಣ ಫೀಸು ಕಳಿಸದ ಅನೇಕ ದಿನಗಳಲ್ಲಿ ಶ್ರೀಧರಮೂರ್ತಿಗೆ ಹೇಳಿ ಕೊಡಿಸಿದ್ದಳು. ತಾಯಿಗಿರುವ ಅಪ್ರತಿಮ ವಾತ್ಸಲ್ಯವನ್ನು ಸುಬ್ಬರಾಯ ಅವಳಲ್ಲಿ ಕಂಡುಕೊಂಡಿದ್ದ.

ರಾಜೀವಿ ಬುಟ್ಟಿ ಬಿಚ್ಚಿ ಹುಡುಗರಿಗೆ ಕೋಡುಬಳೆ ಚಕ್ಕಲಿ ಹಂಚಿದಳು. ಸುಬ್ಬರಾಯ ಶ್ರೀಧರಮೂರ್ತಿಯನ್ನು ವಿಚಾರಿಸಿದ. ತನ್ನ ಸ್ನೇಹಿತ ವೆಂಕಟೇಶನ ವಿಚಾರ ಕೇಳಿದ. ಒಂದೇ ಎರಡೇ, ಶಿವಮೊಗ್ಗೆಯ ಅನೇಕ ವಿಚಾರ ಅವನಿಗೆ ಬೇಕಾಗಿತ್ತು. ಒಂದು ವಿಷಯವನ್ನೂ ಹೇಳದೆ—

"ಮುಖ ಕೈಕಾಲು ತೊಳೆದುಕೊಂಡು ಮೊದಲು ಕಾಫಿ ಕುಡಿ ಮಹರಾಯ, ಆಮೇಲೆ ಊರನ್ನೇ ಸುತ್ತಿ ಬರುವಂತೆ'' ಎಂದಳು ತ್ರಿಪುರಸುಂದರಿ. ಬಚ್ಚಲ ಮನೆಗೆ ಹೋಗಿ ಶುಭ್ರವಾಗಿ ಮುಖ ತೊಳೆದು ಬಂದಮೇಲೆ ರೈಲು ಪ್ರಯಾಣದ ಜಡರು ಕೊಂಚ ಇಳಿಯಿತು. ರಾಜೀವಿ ಮೈಯೇ ತೊಳೆದುಕೊಂಡುಬಿಟ್ಟಳು.

''ರಂಗಮ್ಮ ಅವರೆಲ್ಲ ಯಾವತ್ತು ಊರುಬಿಟ್ಟಿದ್ದು? ''

''ನಿನ್ನೆ ದಿನ–ಅವರ ಅಣ್ಣ ಮೊದಲೇ ಹೋಗಿದ್ದ"

''ಅಣ್ಣ ಹೇಗೆ ಸರಿಯಾಗಿದ್ದಾನೋ''

''ಅಣ್ಣನದು ಯಾವಾಗಲೂ ತಕರಾರೇ ಇಲ್ಲವಪ್ಪ. ಇದ್ದದ್ದೇ ಅತ್ತಿಗೆಮ್ಮನದು. ಶೀರ ಅಷ್ಟು ಹೆಂಡ್ತಿ ಮಾತು ಕೇಳುವವರನ್ನ ನಾನು ನೋಡಿರಲಿಲ್ಲ ತೆಗಿ....''

''ಹಾದೆ!........" ಎಂದೆನ್ನುತ್ತಾ ಎದುರಿನ ಕಾಫಿಯಲ್ಲಿ ಕೋಡುಬಳೆ ಅದ್ದಿ ತಿನ್ನತೊಡಗಿದ ಸುಬ್ಬರಾಯ.

"ಹೂಂ ಅಂತೀನಿ. ಗಾಡಿ ಹತ್ತಬೇಕಾದರೆ ಇಳಿಬೇಕಾದರೆ ಯಾವ ಬಟ್ಟೆ ಹಾಕ್ಕಬೇಕು, ಕ್ರಾಪು ಹೇಗೆ ಬಾಚಬೇಕು, ಯಾವ ಕೆಲಸ ಮಾಡಬೇಕು ಒಂದೆ ಎರಡೆ ಪ್ರತಿಯೊಂದಕ್ಕೂ ಹೆಂಡತಿಯೇ ಹೇಳಬೇಕು"

"ನಾಳೆ ನಮ್ಮ ಸುಶೀಲೆ ಗಂಡನೂ ಹಾಗೇ ಆಗ್ತಾನೇನೋ" ಎಂದ ಸುಬ್ಬರಾಯ.

''ಎಷ್ಟಾದರೂ ಶೀರ ಇಂಥ ಗಂಡನನ್ನು ನಾನು ನೋಡಿರಲಿಲ್ಲವಪ್ಪ"

"ಒಡವೆ ಏನು ಮಾಡಿಸಿದ್ದಾರೆ? " ಎಂದಳು ರಾಜಮ್ಮ.

"ಏನು ಮಾಡಸ್ತಾರೆ, ಒಂದೆಳೆ ಚೈನುಸರ, ಒಂದು ಜೊತೆ ಬಳೆ''

"ಗಂಡಿನವರು ? "

''ಅದೇನೋಪ್ಪ, ನಾಳೆ ಹೋದ ಮೇಲೆ ಗೊತ್ತಾಗಬೇಕು''

"ನಾನು ಒಂದು ಸುತ್ತು ಊರು ಅಲೆದು ವೆಂಕಟೇಶನ್ನ ನೋಡ್ಕೊಂಡು ಬರ್ತೀನೆ'' ಎಂದು ಸುಬ್ಬರಾಯ ಎದ್ದ.

"ಬೇಗ ಬಾ. ಅವರೂ ಆಫೀಸಿನಿಂದ ಬೇಗ ಬರ್ತೀನಂತ ಅಂದಿದ್ದಾರೆ. ಮೂರು ಘಂಟೆಗೆ ಗಾಡಿ ಬರುತ್ತೆ''

"ಇವತ್ತೇ ಹೊರಡೋದೆ?"

''ನಾಡಿದ್ದು ಲಗ್ನ ಮುಹೂರ್ತ ಇಟ್ಕೊಂಡು ಬೀಗರ ಹಾಗೆ ಲಗ್ನದ ಹೊತ್ತಿಗೆ ಹೋದರೆ ಆಗುತ್ತದೆಯೇ?''

"ಸರಿ ಬೇಗ ಬಂದುಬಿಡ್ತೀನಿ'' ಎಂದು ಹೊರಟ.

ನೇರವಾಗಿ ದುರ್ಗಿ ಗುಡಿ ಬಡಾವಣೆಗೆ ಹೋಗಿ ವೆಂಕಟೇಶನ ಮನೆಗೇ ಮೊದಲು ಹೋದ. ಅವನು ಇರಲಿಲ್ಲ. ಅವನ ತಂದೆಯವರು ಭೇಟಿ ಯಾದರು. "ಬಾಪ್ಪಾ ಸುಬ್ಬರಾಯ" ಎಂದು ಒಳಕ್ಕೆ ಕರೆದೊಯ್ದರು. "ಎಲ್ಲಾ ಕ್ಷೇಮವೇಪ್ಪಾ, ಹೇಗಿದೆ ನಿನ್ನ ಕೆಲಸ....?"

"ಈಗೀಗ ಕೆಲಸ ಗೊತ್ತಾಗ್ತಾ ಇದೆ. ಎಲ್ಲಾ ಚೆನ್ನಾಗಿದ್ದಾರೆ. ವೆಂಕಟೇಶ ಎಲ್ಲಿ ಹೋಗಿದ್ದಾನೆ?"

"ಅವನು ಇಲ್ಲಿಲ್ಲ ಈಗ, ನಿನಗೆ ಗೊತ್ತಿಲ್ಲವೇ? ಹೊಸದುರ್ಗದಲ್ಲಿದ್ದಾನೆ"

"ನನಗೆ ಗೊತ್ತೇ ಇಲ್ಲ, ಕಾಗದಾನಾದ್ರೂ ಹಾಕಲಿಲ್ಲ ಅವನು"

"ನೀನು ಕಾಗದ ಬರೆದಿದ್ದೆಯಾ?"

"ಇಲ್ಲ"

"ಸರಿ ಮತ್ತೆ ಅವನೂ ಬರೆದಿಲ್ಲ. ಅಲ್ಲಿ ಮಿಡಲ್ ಸ್ಕೂಲ್ ಮೇಸ್ಟ್ರಾಗಿದ್ದಾನೆ. ಅವನ ಮದುವೆಯು ನಿಶ್ಚಯವಾಗಿದೆ"

''ಹೌದಾ! ಯಾವ ಊರು ಹೆಣ್ಣು?"

"ಇದೇ ಊರು, ನಮ್ಮ ಪೈಕೀನೇ"

"ಯಾರು ನಿಮ್ಮ ಪೈಕಿ ಅಂದರೆ!"

"ಅವನ ಅಕ್ಕನ ಮಗಳನ್ನು ಕೊಟ್ಟು....ನಮ್ಮ ನಮ್ಮಲ್ಲೇ ಸಂಬಂಧ ಬೆಳೆಸೋದಕ್ಕಿಂತ ಪರಮ ಸುಖ ಇನ್ನೊಂದಿಲ್ಲ. ಹೊರಗಿನ ಹೆಣ್ಣುಮಕ್ಕಳು ಬಂದರೆ ಒಂದಲ್ಲಾ ಒಂದು ಕಾರಣದಿಂದ ಅತ್ತೆ ಸೊಸೆಯ ಮನಸ್ತಾಪಕ್ಕೆ ಪ್ರಾರಂಭವಾಗತ್ತೆ. ಅಲ್ಲಿಂದ ತಂದೆ ಮಗನವರೆಗೂ ಈ ಮನಸ್ತಾಪ ಹರಡುತ್ತೆ ಅಲ್ಲವೇ.... ಮಗ ಅವನ ಹೆಂಡತಿ ಮಾತು ಕೇಳಿಕೊಂಡು ತಂದೆ ಮೇಲೆ ತಿರುಗಿ ಬೀಳ್ತಾನೆ. ಇನ್ನು ತಂದೆ ತನ್ನ ಹೆಂಡ್ತಿ ಮಾತು ಕೇಳದಿದ್ದರೆ ಹೇಗೆ? ಈ ಮನೆಯ ಒಳಜಗಳಗಳಿಗೆ ಅವರವರ ಹೆಂಡಿರುಗಳ ಮಾತಿಗೆ ಕಿವಿ ಕೊಡುವುದೇ ಮುಖ್ಯ ಕಾರಣ. ಹೌದೋ ಅಲ್ಲವೋ ನಾನು ಹೇಳೋದು?"

"ಸರಿಯೇ ವಯೋವೃದ್ಧರು ನಿಮ್ಮ ಅನುಭವದ ಮುಂದೆ ನಾನೇನು ಹೇಳಲಿ...." ಎಂದು ಅವರ ವಾದ ಸರಣಿಗೆ ಸುಬ್ಬರಾಯ ನಕ್ಕ.

"ನೀನು ಈ ವಿಷಯಗಳನ್ನ ತಿಳಿದಿರಬೇಕು. ನಗೇ ವಿಚಾರವಲ್ಲ ಇದು ಸುಬ್ಬರಾಯ. ನನ್ನ ಹಿರೇ ಮಗನಿಗೆ ತಿಳಿಯದ ಕಡೆ ಸಂಬಂಧ ಮಾಡಿ ಮಣ್ಣಿಗೆ ಮಣ್ಣು ತಿಂದುಬಿಟ್ಟೆ"

"ಎಲ್ಲರೂ ಹೀಗೇ ಇರ್‍ತಾರೆಯೇ...."

"....ನಿಜ ಎಲ್ಲರ ಮನೆ ಹೆಣ್ಣುಮಕ್ಕಳೂ ಹೀಗಿರೋಲ್ಲ. ಅದು ಅವರ ಮನೆತನ, ಬೆಳೆದ ಮನೆಯಲ್ಲಿನ ವಾತಾವರಣ, ತಂದೆ ತಾಯಿಗಳ ಗುಣವನ್ನು ಅವಲಂಬಿಸುತ್ತೆ. ಹೀಗೆ ಮನೆಯ ಒಗ್ಗಟ್ಟಿಗೆ ಸುಖ ವಾತಾವರಣದ ವಿಷಯ ದಲ್ಲಿ ಇದು ಒಳ್ಳೇ ಹುಡುಗಿ ಇರಬಹುದೆಂದು ಅರಿಯದ ಕಡೆಯಿಂದ ಹೆಣ್ಣು ತಂದು ಕುದುರೆ ಜೂಜಿನ ಹಾಗೆ ಆಡುವುದು ಸಾಧ್ಯವೇ ? ನಮ್ಮಪ್ಪಾ ನಾನು ಕೈಸುಟ್ಟುಕೊಂಡವನು, ಗಂಡುಹುಡುಗರನ್ನು ಸಾಕಿ ಬೆಳೆಸಿ ದೊಡ್ಡವರನ್ನು ಮಾಡಿ ಹದ್ದಿನ ಬಾಯಿ ಕೊಡೂದು ನನ್ನಿಂದ ಸಾಧ್ಯವಿಲ್ಲ...."

"ಅನುಭವದ ಮಾತಿನ ಮುಂದೆ ನಾನೇನು ಹೇಳಲಿ ?"

"ಏನೂ ಹೇಳಬೇಡ. ನಿನಗೆ ಗಂಡುಮಗುವಾದರೆ ನೋಡಿ ಒಳ್ಳೇಕಡೆ ಹೆಣ್ಣು ತಂದುಕೋ. ದೊಡ್ಡೋರು ಅನ್ನೊ ಅಹಂಭಾವದ ಮನೆ ಹೆಣ್ಣು ತರ ಬೇಡ. ಅತ್ತೆ ಮಾವನಿಗೆ ಮರ್ಯಾದೆ ಕೊಡದ ಮನೆಯವರೇ ಇವರು ಎಂದು ಕೂಲಂಕುಷವಾಗಿ ವಿಚಾರಮಾಡಿ ಸಂಬಂಧ ಬೆಳಸು. ಹುಷಾರಿ, ಹೆಣ್ಣು ತರು ವಾಗ ಪರಮ ಹುಷಾರಿಯಿಂದ ಇರು"

"ಲೇ ಅನ್ನೋಕೆ ಅವಳೇ ಇಲ್ಲ ಮಗನ ಹೆಸರು ಮಹದೇವ ಅಂತ ಅಂದ ಹಾಗಾಯ್ತು. ಇನ್ನೂ ಈಗ ತಾನೆ ಮದುವೆಯಾಗಿ ಸಂಸಾರ ಹೂಡಿದ್ದೀನಿ, ಮುಂದೆ ಆಗಬಹುದಾದ ಗಂಡು ಹುಡುಗನಿಗೆ ಹೆಣ್ಣು ಹುಡುಕುವ ವಿಚಾರ ಹೇಳ್ತಾ ಇದ್ದೀರಲ್ಲಾ?"

"....ಯಾಕೆ ಹೇಳಬಾರದೇನು? ನಮ್ಮ ಅನುಭವ ನಿಮಗೆ ದಾರಿ ತೋರಿಸ ಬೇಡವೆ. ನಮ್ಮ ದಾರಿಯಲ್ಲಿನ ಮುಳ್ಳು ನಿಮಗೂ ಎಟಕಬೇಕೇನು? ಮುಳ್ಳಿರು ವುದು ಹಿಂದೆ ಬರುವವರಿಗೆ ಹೇಳುವುದು ಮುಂದೆ ನಡೆದವರ ಕರ್ತವ್ಯವಲ್ಲವೆ?"

"ನಿಮ್ಮ ಮಾತು ನಿಜ.... ವೆಂಕಟೇಶನ ವಿಳಾಸವೇನು ?"

"ಸ್ಕೂಲ್ ಟೀಚರ್, ಗೌರ್ನಮೆಂಟ್ ಮಿಡಲ್ ಸ್ಕೂಲ್, ಹೊಸದುರ್ಗ ಚಿತ್ರದುರ್ಗ ಜಿಲ್ಲೆ ಅಂತ ಬರೆದರೆ ಸಾಕು"

"ಎಷ್ಟು ದಿನ ಆಯ್ತು ಅವನು ಕೆಲಸಕ್ಕೆ ಸೇರಿ ?"

"ನೀನು ಈ ಊರು ಬಿಟ್ಟು ಹೋದ ಒಂದು ತಿಂಗಳಿಗೆಲ್ಲಾ ಅವನಿಗೂ ಆರ್ಡರು ಬಂತು"

"ನಾನು ಇನ್ನು ಹೊರಡಲೇ ?"

"ಒಳ್ಳೇದಪ್ಪಾ. ಈಗೇನು ರಜದಮೇಲೆ ಬಂದಿದ್ದೆಯಾ ?"

"ಹೂಂ ನಮ್ಮ ಪೈಕಿಯವರದೇ ಒಂದು ಲಗ್ನವಿತ್ತು"

"ಯಾರು ನಿಮ್ಮ ಪೈಕೀಂದ್ರೆ ?"

"ನಿಮಗೆ ಗೊತ್ತಿರಲಿಕ್ಕಿಲ್ಲ, ದೊಡ್ಡ ಬ್ರಾಹ್ಮಣರ ಕೇರೀಲಿ ರಂಗಮ್ಮ ನೋರೂಂತ. ಅವರ ಮಗಳ ಲಗ್ನಾ"

"ಹುಡುಗಿ ಹೆಸರು ?"

"ಸುಶೀಲ ಅಂತ" ಈ ಹೆಸರು ಹೇಳುವಾಗ ಹೃದಯ ನಡುಗಿತು.

"ಅದೇ ನೀನು ನದಿಯಿಂದ ಹೊರಕ್ಕೆ ಎತ್ತಿಹಾಕಿದ ಹುಡುಗಿಯಲ್ಲವೇ?"

"ಹಾಂ ಹೌದು ಹೌದು. ಅದೇ ಹುಡುಗಿ....ನಾನು ಹೊರಡಲೇ ?"

"ಸರಿ....ಹೋಗಿಬಿಟ್ಟು ಬಾಪ್ಪ. ವೆಂಕಟೇಶನಿಗೆ ಕಾಗದ ಬರಿತೀನಿ ನಾಳೆ, ನೀನು ಬಂದ ವಿಷಯಾನು ಬರಿತೀನಿ."

"ನಮಸ್ಕಾರ"

"ಶುಭಮಸ್ತು"

ಸುಬ್ಬರಾಯ ಹೊರಟುಬಂದ. ವೆಂಕಟೇಶನಿಗೆ ಕೆಲಸ ಸಿಕ್ಕ ವಿಷಯ ಕೇಳಿ ಅವನ ಮನಸ್ಸು ಹಗುರವಾಗಿತ್ತು. ಅವನ ಮದುವೆಯ ವಿಚಾರವಾಗಿ ಅವನು ಮನಸ್ಸಿನಲ್ಲಿ ಗುಣಾಕಾರ ಹಾಕುತ್ತಿದ್ದ. ವೆಂಕಟೇಶನ ತಂದೆಯವರು ಹೆಣ್ಣು ಹುಡುಕುವ ವಿಚಾರವಾಗಿ ಮಾಡಿದ ಸಲಹೆಯ ಬಗ್ಗೆಯೂ ಅವನ ಮನಸ್ಸು ಹರಿಬಿಟ್ಟಿತ್ತು. ನಿಜವಾಗಿ ಅವರು ಇಷ್ಟು ವಿಷಯ ತನ್ನೊಡನೆ ತೋಡಿಕೊಳ್ಳುವಾಗ ಅವರು ಪಟ್ಟ ಕಟು ಅನುಭವವೇ ಇದಕ್ಕೆ ಕಾರಣ ವಾಗಿತ್ತು. ಇನ್ನೊಬ್ಬನೊಡನಲ್ಲಿ ತಮಗೆ ಸಿಕ್ಕುವ ಸ್ನೇಹಿತರುಗಳು, ನೆಂಟರು, ವೆಂಕಟೇಶನ ಮಿತ್ರರು, ಯಾರಾದರೂ ಸರಿ ಹೆಣ್ಣುತರುವ ವಿಚಾರವಾಗಿ

ಬೋಧನೆ ಮಾಡುವರು. ಯಾವ ಮಹರಾಯಿತಿ ಸೊಸೆ ಅವರನ್ನು ಹೀಗೆ ಆಡುವಂತೆ ಮಾಡಿತ್ತೋ! ತಮ್ಮ ಅನುಭವದ ಉಪಯೋಗ ಹತ್ತು ಜನ ಪಡೆಯಲಿ ಎಂದು ಅವರು ಹೇಳಿದ್ದು ಅವರ ವ್ಯಥೆಯ ಆಳವನ್ನು ತಿಳಿಸು ತ್ತಿತ್ತು.

ಈ ಎಲ್ಲ ವಿಚಾರ ಮಥನದಲ್ಲಿ ಮನದ ಮುಂದೆ ಸಹಜವಾಗಿ ಸುಶೀಲೆ ಸೊಸೆಯಾಗುತ್ತಿರುವಳೆಂಬುದು ಮುಂದೆ ಬಂತು. ಗೌರಮ್ಮನವರಿಗೆ ರಂಗಣ್ಣ ನವರಿಗೆ ಅಚ್ಚು ಮೆಚ್ಚಿನ ಸೊಸೆಯಾಗಿ ಜನಾರ್ಧನಯ್ಯನಿಗೆ ಯೋಗ್ಯವಾಗಿ ಸುಶೀಲೆ ಇರಬಲ್ಲಳೆ—ಎಂದು ಅವನ ಯೋಚನೆ ನಡೆದಿತ್ತು.

ತನ್ನೊಡನೆ ಸುಶೀಲೆ ವರ್ತಿಸಿದ ರೀತಿ ಮದುವೆಯಾದ ಮೇಲೆ ಮಾಯ ವಾಗುವುದೆ? ತಾನೇಕೆ ಅವಳ ವಿಚಾರವಾಗಿ ಇಷ್ಟು ತಲೆ ಕೆಡಿಸಿಕೊಳ್ಳುವಷ್ಟು ಯೋಚಿಸಬೇಕು? ಇದು ಧರ್ಮವೇ? ಈ ಎಲ್ಲ ಪ್ರಶ್ನೆಗಳು ಅವನನ್ನು ಮುತ್ತಿ ಕಾಡಿದವು. ಯೋಚಿಸುತ್ತಲೇ ಮನೆ ಸೇರಿದಾಗ ಮನೆಯ ಮುಂದೆ ಜೋಡೆ ತ್ತಿನ ಕಮಾನುಗಾಡಿ ನಿಂತಿತ್ತು. ತ್ರಿಪುರಸುಂದರಿಯ ಮಕ್ಕಳು ಆಗಲೇ ಅದ ರಲ್ಲಿ ಜಾಗ ಹಿಡಿದು ಕುಳಿತಿದ್ದರು. ಗಾಡಿಯವನು ಸಾಮಾನು ಹೇರುತ್ತಿದ್ದ.

ಶ್ರೀಧರಮೂರ್ತಿ ಊಟಕ್ಕಾಗಿ ಕಾದಿದ್ದ. ತ್ರಿಪುರಸುಂದರಿ ಎಲೆಹಾಕಿ ಉಪ್ಪು ಬಡಿಸಿದ್ದಳು. ''ಎಷ್ಟುಹೊತ್ತು ಮಹರಾಯ ಬರೋದು? ಆಗಲೆ ಒಂದು ಘಂಟೆ ಆಯ್ತು" ಎಂದ ಶ್ರೀಧರಮೂರ್ತಿ.

"ವೆಂಕಟೇಶನ ಮನೆಗೆ ಹೋಗಿದ್ದೆ, ಹೊತ್ತಾಯ್ತು"

"ಅಲ್ಲಿಗೆ ಹೋಗೋಕೆ ಮುಂಚೆ ಪೋಸ್ಟಾಫೀಸಿಗೆ ಬಂದಿದ್ದರೆ ನಾನೇ ಹೇಳುತ್ತಿದ್ದೆ ಅವನು ಈ ಊರಲ್ಲಿ ಇಲ್ಲಾಂತ"

"ಅವರ ಅಪ್ಪ ಇದ್ದರು ಮನೆಯಲ್ಲಿ, ಅವರು ಬಿಡಲೇ ಇಲ್ಲ. ಮಾತಾಡ್ತಾ ಕೂತುಬಿಟ್ಟರು"

"ಸರಿ, ಅವರ ಕೈಗೆ ಸಿಕ್ಕರೆ ತೀರೇಹೋಯ್ತು. ಯಾರು ಸಿಕ್ಕರೆ ಅವರ ಹತ್ತಿರ ಸೊಸೇರನ್ನ ಹುಡುಕೋದರ ಮೇಲೆ ಲಕ್ಚರ್ರಿಗೆ ಪ್ರಾರಂಭಿಸಿಬಿಡ್ತಾರೆ"

"ನೀ ಹೇಳಿದ್ದು ನಿಜ. ನನಗೂ ಅದೇ ವಿಚಾರ ಹೇಳಿದರು"

''ನನಗೆ ಗೊತ್ತಿಲ್ಲವೇ?"

"ಸರಿ, ನೀವು ಇನ್ನು ಲಕ್ಚರ್ರಿಗೆ ನಿಂತುಬಿಟ್ರೊ ಏನು? ಊಟಕ್ಕೆ ಏಳ ಬಾರದೋ" ಎಂದು ತ್ರಿಪುರಸುಂದರಿ ರಾಗ ತೆಗೆದು ಕೂಗಿದಳು. ತೆಪ್ಪನೆ ಎಲ್ಲರೂ ಎಲೆಮುಂದೆ ಕುಳಿತರು. ಎಲ್ಲರಿಗೂ ತ್ರಿಪುರಸುಂದರಿಯೇ ಬಡಿಸಿದಳು. ಬಹಳ ಬಲವಂತ ಮಾಡಿ ರಾಜೀವಿಯನ್ನೂ ಊಟಕ್ಕೆ ಕೂಡಿಸಬೇಕಾಯಿತು.

ಎಲ್ಲರ ಊಟ ಮುಗಿದು ಎಲೆ ಅಡಿಕೆ ಹಾಕಿಕೊಂಡು ಗಾಡಿಯನ್ನು ಹತ್ತಬೇಕಾದರೆ ಮೂರು ಘಂಟೆಗೇ ಬಂದಿತ್ತು. ಗಾಡಿ ಪಿಳ್ಳಂಗೇರಿಕಡೆ ಸಾಗಿತು.

ಹಿಂಬದಿಯಲ್ಲಿ ರಾಜೀವಿ, ಸುಬ್ಬರಾಯ ಕುಳಿತು ಮಲೆನಾಡ ಸೊಬಗನ್ನು ಅನುಭವಿಸುತ್ತಾ ಇದ್ದರು. ಚಿತ್ರದುರ್ಗದ ಬಯಲು ಬೆಟ್ಟಗಳಿಗೂ ಗಿಡಮರಗಳು ತುಂಬಿದ ಈ ನಿಸರ್ಗ ಸೌಂದರ್ಯಕ್ಕೂ ಹೋಲಿಸಿ ನೋಡುತ್ತಿದ್ದರು. ಸುಬ್ಬರಾಯ ಮಾತಾಡುತ್ತಿದ್ದರೂ ಮನಸ್ಸು ವೆಂಕಟೇಶನ ತಂದೆಯ ಮಾತಿನಕಡೆ ಇತ್ತು.

ವೆಂಕಟೇಶ ಸುಬ್ಬರಾಯ ಇವರುಗಳು ಮದುವೆಯ ವಿಷಯವಾಗಿ ಅನೇಕ ಸಂಜೆಗಳು ಮಳಲ ದಂಡೆಯಮೇಲೆ ಕುಳಿತು ಮಾತಾಡಿದ್ದರು. ಸಂಬಂಧಿಗಳ ಹೆಣ್ಣನ್ನು ಮಾಡಿಕೊಳ್ಳುವುದರಲ್ಲಿ ತನ್ನದೇ ವಿಚಾರಧಾರೆಯಲ್ಲಿ ವೆಂಕಟೇಶ ಹೇಳಿದ್ದ. ಬೇರೆಕಡೆಯಲ್ಲಿನ ಹೆಣ್ಣನ್ನು ಕೈಹಿಡಿದರೇ ಜೀವನದಲ್ಲಿ ಸೊಗಸು. ನಿತ್ಯ ನೋಡಿದ, ಜೊತೆಗೆ ಬೆಳೆದ ಹೆಣ್ಣನ್ನು ಮದುವೆಯಾದರೆ ಜೀವನದಲ್ಲಿ ಹೊಸತನವಿರುವುದಿಲ್ಲ. ಮನೆಯಲ್ಲಿ ಬೆಳೆದ ಹುಡುಗಿಯನ್ನು ಸದಾ ನೋಡುತ್ತಿರುವುದರಿಂದ ರತಿಯಂತೆ ರೂಪವತಿಯಾಗಿದ್ದರೂ ಆ ರೂಪದಲ್ಲಿ ದಿನಂಪ್ರತಿಯ ಸಂದರ್ಶನದಿಂದ ಕಣ್ಣಿಗೆ ಹೊಸತನವೇ ಕಾಣುವುದಿಲ್ಲ. ಅದೇ ಬೇರೆ ಹುಡುಗಿಯರು ಅಷ್ಟೊಂದು ರೂಪವತಿಯರಲ್ಲದಿದ್ದರೂ ಹೊಸದಾಗಿ ನೋಡಿದಾಗ ಸುರಸುಂದರಿಯರಂತೆ ಕಂಗೊಳಿಸುತ್ತಾರೆ. ಮನೆಯಂಗಳದ ಮಲ್ಲಿಗೆಗಿಂತ ಇನ್ನೊಬ್ಬರ ಉದ್ಯಾನದ ದಾಸವಾಳವೇ ಪರಿಮಳಯುತವಾಗಿರುವಂತೆ ಕಾಣುವುದು. ಏನೆಂದರೂ ನಾನು ಅಕ್ಕನ ಮಗಳನ್ನು ಒಪ್ಪೋಲ್ಲ ಎನ್ನುತ್ತಿದ್ದ ವೆಂಕಟೇಶ ಈಗ ಹೇಗೆ ಒಪ್ಪಿದ? ವೆಂಕಟೇಶನ ಅಕ್ಕನ ಮಗಳು ಸುಂದರವಾಗೇ ಇದ್ದಳು. ತಂದೆಯ ಬಲವಂತಕ್ಕೆ ಒಪ್ಪಿರಬಹುದೆ? ಅಥವ ಅವನ ತಂದೆಯವರು ಆ ಹುಡುಗಿಯನ್ನಲ್ಲದೆ ಬೇರಾರನ್ನೂ ಆಗಗೊಡುವುದಿಲ್ಲವೆಂದು ಹಟ ಹಿಡಿದು ಮುಹೂರ್ತವನ್ನೂ ನಿಶ್ಚಯಿಸಿರ

ಬಹುದೆ? ಈ ರೀತಿಯ ಸಮಸ್ಯೆಗಳನ್ನು ಕುರಿತು ಸುಬ್ಬರಾಯನ ಮನಸ್ಸು ಹರಿಯುತ್ತಿತ್ತು. ರಾಜೀವಿಯ ಮಾತುಗಳಿಗೆ ಯಾವುದೋ ಲೋಕದಿಂದ ಉತ್ತರ ಕೊಟ್ಟಂತೆ "ಹೌದು", "ಹೂಂ", "ಇಲ್ಲ" ಎಂದು ಉತ್ತರಿಸುತ್ತಿದ್ದ. ಗಾಡಿ ಸಾಗಿತ್ತು.

ಗಾಡಿ ಪಿಳ್ಳಂಗೇರಿ ಸೇರಿದಾಗ ಸಂಜೆಯಾಗಿತ್ತು. ಹೆಣ್ಣಿನ ಕಡೆಯವರ ಬಿಡಾರದಲ್ಲಿಯೇ ತ್ರಿಪುರಸುಂದರಿ, ಶ್ರೀಧರಮೂರ್ತಿ, ಸುಬ್ಬರಾಯ, ರಾಜೀವಿ ಇವರುಗಳು ಇಳಿದುಕೊಂಡರು. ಸುಶೀಲೆ ರಾಜೀವಿಯ ಪರಿಚಯವಾದ ಮೇಲೆ ಕೆಲವೇ ಕ್ಷಣದಲ್ಲಿ ಅನೇಕ ವರ್ಷಗಳ ಗೆಳತಿಯರಂತೆ ಅವರು ವರ್ತಿಸ ತೊಡಗಿದರು. ಸುಶೀಲೆ ಸುಬ್ಬರಾಯನನ್ನು ನೋಡಿ ಮುಗುಳು ನಗೆ ಸೂಸಿ ದಳು. ರಂಗಮ್ಮ ಎಲ್ಲರನ್ನೂ ವಿಚಾರಿಸಿಕೊಂಡಳು. ಹಚ್ಚಿದವಲಕ್ಕಿ ಚಹಾದ ಹಂಚುವಿಕೆ ನಡೆಯಿತು. ರಂಗಮ್ಮ ಅಣ್ಣನ ಹೆಂಡತಿಯೇ ಎಲ್ಲರಿಗೂ ಹಂಚಿದಳು.

ಮರುದಿನದ ಅಡಿಗೆ ವ್ಯವಸ್ಥೆ, ಸಾಮಾನು ಸರಂಜಾಮುದ ವ್ಯವಸ್ಥೆ, ಆ ಮೇಲೆ ಎದುರುಗೊಳ್ಳುವುದರಿಂದ ಮನೆ ತುಂಬಿಸಿಕೊಳ್ಳುವವರೆಗಿನ ಎಲ್ಲ ವಿಷಯಗಳನ್ನೂ ಕುರಿತು ಹೆಂಗಸರಲ್ಲಿ ಮಾತುಕತೆಯಾಯಿತು. ಕೋಳಾಯಿ ಯಿಲ್ಲದ್ದು ನೀರನ್ನು ಸೇದಬೇಕಾಗಿತ್ತು. ಕಳ್ಳೂರು ಕಟ್ಟೆಯಿಂದ ಅದಕ್ಕಾಗೇ ಇಬ್ಬರು ಧಾಂಡಿಗರನ್ನು ಕರೆತಂದಿದ್ದ ರಂಗಮ್ಮನ ಅಣ್ಣ.

ರಾತ್ರಿ ಮಲಗಿದ್ದು ಸರಿ ರಾತ್ರಿಯಾಗಿದ್ದರೂ ಮುಂಜಾನೆ ಅಷ್ಟು ಹೊತ್ತಿಗೇ ರಂಗಮ್ಮ ಎದ್ದು ಸುಶೀಲೆಗೆ ಎಣ್ಣೆಶಾಸ್ತ್ರ ಮಾಡಿ ನೀರು ಹಾಕಿದಳು. ಸುಬ್ಬರಾಯ ಬೆಳಗಿನ ಜಾವದ ಅರೆನಿದ್ರೆಯಲ್ಲಿದ್ದ. ಹೆಂಗಸರ ಗುಜಗುಜ ಮಾತು, ಹೊರಗೆ ಪಕ್ಷಿಗಳ ಕೂಗು, ಈ ಮಧ್ಯೆ ಪಿಳ್ಳಂಗೇರಿಯ ನಾಗಸ್ವರ ವಿದ್ವಾನನ ವಾಲಗದ ವೈಖರಿಯನಾದ ಇವೆಲ್ಲ ಶಬ್ದಗಳ ಮಿಶ್ರಣದಲ್ಲಿ ಯಾವುದೋ ಕಿನ್ನರ ಲೋಕದ ಕನಸು ಕಾಣುತ್ತಿದ್ದ. ತುಂಬುರೆಪ್ಪೆಯ ಅರ ಶಿನ ಗಲ್ಲದ ಬಿಳಿಯ ಪತ್ತಲ ಉಟ್ಟ ಹೆಣ್ಣೊಂದು ಆಕಾಶದಲ್ಲಿ ತೇಲಿಹೋಗು ತ್ತಿತ್ತು. ಹಾಗೇ ಆ ಹೆಣ್ಣು ಸುತ್ತಿ ಸುತ್ತಿ ಮಹಡಿಯ ಮೇಲೆ ನಿಂತ ತನ್ನ ಬಳಿಗೇ ಬಂದಿಳಿಯಿತು; ದೇವಲೋಕದ ಕನ್ಯೆ ಧಾವಿಸಿ ಬಂದಿಳಿದಂತಾಯಿತು.

ಎಲ್ಲಿರಲಿ ಯಾರ ಬಳಿಯಿರಲಿ ನೀನೇ ಎನ್ನ ಪ್ರೇಮದ ಮೂರ್ತಿ, ನೀನೇ ಎನ್ನ ಆರಾಧ್ಯದೈವ, ನೀನೇ ಎನ್ನ ಜೀವದ ಬೆಳಕು........ಎಂದು ಹೇಳಿ ಸುಬ್ಬರಾಯನನ್ನು ತಬ್ಬಿಕೊಂಡಳು; ಕೆನ್ನೆಗೆ ಕೆನ್ನೆ ಹಚ್ಚಿದಳು....ಸುಬ್ಬರಾಯನಿಗೆ ಏನು ಮಾತಾಡಲೂ ಆಗದೆ 'ಬೇಡ, ನನಗೊಬ್ಬ ರತಿಯುಂಟು. ಈ ವ್ಯಾಮೋಹ ನಿನ್ನ ಕೈಹಿಡಿದವನಿಗೆ ದ್ರೋಹ ಬಗೆದಂತೆ' ಎಂದು ಚೀರಿ ಹೇಳಲು ಕೂಗಿದನು. ಧ್ವನಿಯೇ ಹೊರಡದೆ ಗಂಟಲೇ ಭಾರವಾಯಿತು. ಇನ್ನೊಂದು ಹೆಣ್ಣು ಕೊರಗುತ್ತ ನಿಂತಿತ್ತು. ಹಾರಿಬಂದ ತಾರೆಯಂತಹ ಹೆಣ್ಣನ್ನು ದೂಡಲು ಮಾಡಿದ ಕೈಯ್ಯನ್ನು ಯಾರೋ ಹಿಡಿದೆಳೆದು ಎಚ್ಚಿಸಿದಂತಾಯಿತು........

"ಏಳಿ ಏಳಿ. ಎಷ್ಟುಹೊತ್ತು ಮಲಗುವುದು" ಎಂದು ಕೂಗಿದ್ದು ಕೇಳಿಸಿತು. ರಾಜೀವಿ ಕೂಗಿದ್ದು ಸುಬ್ಬರಾಯನಿಗೆ ಎಚ್ಚರವಾಯಿತು. ತಾನು ಕಂಡದ್ದು ವಿಚಿತ್ರ ಕನಸು ಎಂದು ಆಗ ಅವನಿಗೆ ಗೊತ್ತಾಯಿತು. ಕದಡಿದ ಕನಸು ನಿಜವಾಗಿ ನಡೆದ ಸಂಗತಿಯಂತೆ ಅವನ ಮನದಲ್ಲಿ ಮೂಡಿತು. ಮೋಹಿನಿಯಂತೆ ತೇಲಿ ಬಂದು ತನ್ನನ್ನು ತಬ್ಬಿದ ತರುಣಿಯ ಮುಖ ಯಾರನ್ನೊ ಹೋಲುತ್ತಿತ್ತು. ಯಾರು! ಯಾರು! ಕೊರಗುತ್ತ ಅನತಿ ದೂರದಲ್ಲಿ ನಿಂತವಳು ರಾಜೀವಿಯೆಂದು ಗೊತ್ತಾಗಿತ್ತು. ಮಾಯಾವಿ ಯಾರು? ಎಂದು ಕನಸನ್ನು ನೆನೆಯುತ್ತಿದ್ದಂತೆ ಎಣ್ಣೆ ನೀರು ಹಾಕಿಕೊಂಡು ತಲೆಯನ್ನು ಎಳೆಬಿಸಿಲಲ್ಲಿ ಆರಿಸುತ್ತಾ ನಿಂತ ಸುಶೀಲೆಯ ಸುಂದರ ರೂಪು ಅವನಿಗೆ ಕಿಟಕಿಯಿಂದ ಗೋಚರಿಸಿತು.

"ಏಳಬಾರದೇಂದ್ರೇ....ಕಾಫಿ ಆರಿಹೋಗತ್ತೆ" ಎಂದು ಪೀಡಿಸಿದಳು ರಾಜೀವಿ. ಎಲ್ಲರೂ ಎದ್ದಿದ್ದಾರೆ, ಮದುವೆ ಸಂಭ್ರಮದಲ್ಲಿ ಇವರು ಸೋಮಾರಿಯಂತೆ ಮಲಗಿದ್ದು ರಾಜೀವಿಗೆ ಹಿಡಿಸಲಿಲ್ಲ. ಹೊರಗೆ ನಿಂತ ಸುಶೀಲೆಯನ್ನೇ ಕಿಟಕಿಯಿಂದ ನೋಡುತ್ತಾ ಎದ್ದ ಸುಬ್ಬರಾಯ. ವಾಲಗದ ಸದ್ದು ನಿಂತಿತು. ತ್ರಿಪುರಸುಂದರಿಯ ಮಕ್ಕಳಿಬ್ಬರೂ ಜರತಾರಿಯ ಪರಕಾರ ಹಾಕಿಕೊಂಡು ಕೈಯ್ಯಲ್ಲಿ ಚಕ್ಕಲಿ ಹಿಡಿದು ಚಪ್ಪರದ ಕಂಬ ಹಿಡಿದು ಸುತ್ತುತ್ತಿದ್ದರು. ಮುಖ ತೊಳೆದು ಕಾಫಿ ಲೋಟ ಹಿಡಿದು ಹೊರಕ್ಕೆ ಬಂದಾಗ ಸುಶೀಲೆ ತಲೆ ಆರಿಸುತ್ತ ನಿಂತೇ ಇದ್ದಳು.

"ತಂಗೀ, ಈ ಲೋಟ ಒಳಗೆ ಕೊಡವ್ವ" ಎಂದು ತ್ರಿಪುರಸುಂದರಿಯ ಮಗಳ ಕೈಗೆ ಕಾಫಿ ಲೋಟ ಕೊಟ್ಟಾಗ ಸುಶೀಲೆ ಇವನನ್ನು ನೋಡಿದಳು. ಅರಿಶಿನ ಗಲ್ಲದ ಮದವಣಗಿತ್ತಿಯಾದ ಸುಶೀಲೆಯ ಮುಖದಲ್ಲಿ ವಿಲಕ್ಷಣ ಶಾಂತಿ ಬೆಳಗುತ್ತಿತ್ತು. ಸಾವಿರ ಸಂಗತಿ ಕುರಿತು ಅವನೊಡನೆ ಮಾತಾಡಬೇಕೆಂದು ಮನಸ್ಸು. ಆಡಲು ಸ್ವರವೇ ಹೊರಡದೆ ಹೋಗಿತ್ತು.

"ಅಂತೂ ಬಂದಿರಲ್ಲಾ !"

"ಬರದಿದ್ದರೆ ನಿನಗೆ ಕೋಪ ಬರುತ್ತಲ್ಲಾ !"

"ಮತ್ತೆ, ನನ್ನ ಮದುವೆಗೂ ನೀವು ಬಾರದಿದ್ದರೆ ಕೋಪಬರದೆ ಸುಮ್ಮ ನಿರುತ್ತಿತ್ತೆ........ಚಿತ್ರದುರ್ಗ ಚೆನ್ನಾಗಿದೆಯೆ ?"

"ಸೊಗಸಾಗಿದೆ. ಬೆಟ್ಟ ಗುಡ್ಡ, ಕೋಟೆ ಕೊತ್ತಲು, ನೋಡಬೇಕಾದ ಸ್ಥಳ. ಸುಶೀಲ, ನೀನು ನಿನ್ನ ಯಜಮಾನರು, ಒಮ್ಮೆ ಬಂದು ಹೋಗ ಬೇಕು."

"...............ಆಗಲಿ"

ಸುಶೀಲೆ ನಾಚಿಕೆಯಿಂದ ತಲೆ ತಗ್ಗಿಸಿದಳು. ಈ ಹೊತ್ತಿಗೆ ಯಾವುದೋ ಸಡಗರದಲ್ಲಿ ತೊಡಗಿದ ರಾಜೀವಿ ಹೊರಗೆ ಬಂದಳು. ಯಜಮಾನರು ಸುಶೀಲೆ ಯೊಡನೆ ಏನೋ ಹೇಳುತ್ತಿದ್ದರು.

"ಸುಶೀಲಾ ಹಸೀ ಮೈಯಿ ಕಣೆ ನಿಂದು. ಬಿಸಿಲಲ್ಲಿ ಒಣಗಬೇಡ" ಎಂದಳು ರಾಜೀವಿ.

"ಹೌದು ಹೌದು–ಹಸೀ ಮೈಯಿ"

"ಮೈಯಿ ಒಣಗಿಹೋಗಲಿ. ಆಮೇಲೆ ಜನಾರ್ಧನಯ್ಯನವರು ಬಂದು ಈ ಹುಡುಗಿಯನ್ನಲ್ಲ ನಾನು ನೋಡಿದ್ದು ಎಂದು ತಕರಾರು ಮಾಡಲಿ. ಆ ಮೇಲೆ ಯಾರು ಅವರನ್ನ ಸಮಾಧಾನ ಮಾಡೋರು ? ನಡಿ, ಒಳಗೆ ನಿಮ್ಮಮ್ಮ ಕರೀತಿದ್ದಾರೆ" ಎಂದು ರಾಜೀವಿ ಹಾಸ್ಯ ಮಾಡಿದಳು.

"ಹಹ....ಥೂ ಹೋಗಕ್ಕ" ಎಂದು ಒಳಕ್ಕೆ ನಡದೇಬಿಟ್ಟಳು ಸುಶೀಲ. ರಾಜೀವಿ ಗಂಡನನ್ನು ನೋಡಿ "ಕಾಫಿ ಆಯಿತೆ ?" ಎಂದು ವಿಚಾರಿಸಿದಳು.

"ನೀನೇ ಕೊಟ್ಟೆಯಲ್ಲೇ ! ತಿಂಡಿಗಿಂಡಿ ಏನಾದರೂ ಉಂಟೋ ?"

"ಇಲ್ಲದೇ ಉಂಟೇ ? ಅಲ್ಲಾಂದ್ರೆ, ಸುಶೀಲೆ ಮುಖದಲ್ಲಿ ಎಂಥಾ ಕಳೆ ಬಂದಿದೆ ನೋಡಿದಿರ ? ಬಹಳ ಚಲುವೆ ! "

"ಮದುವೆ, ಮದುಮಗಳು ಸಹಜವೇ"

"ನೀವು ಹೇಳುತ್ತಿದ್ದಿರಲ್ಲಾ ಸುಶೀಲೆ ತುಂಬಾ ಚೆನ್ನಾಗಿದ್ದಾಳೆ ಅಂತ ನಾನು ನಂಬಿರಲಿಲ್ಲ. ನಿಜಕ್ಕೂ ಎಷ್ಟು ಮುದ್ದಾಗಿದ್ದಾಳೆ ಸುಶೀಲ.—ಜನಾರ್ದನಯ್ಯ ಪುಣ್ಯವಂತ" ಎಂದು ಹೇಳುತ್ತಾ ಒಳಕ್ಕೆ ಹೋಗಿ ಎಲೆಯಲ್ಲಿ ಹಚ್ಚಿದವಲಕ್ಕಿ, ಚಕ್ಕಲಿ, ಒಂದು ಬೇಸನ್ನು ಉಂಡೆ ಇಟ್ಟು, ಒಂದು ಲೋಟ ನೀರು ತಂದಳು. ಎದುರಿಗೆ ಹಿಡಿದರೂ ಕೈ ನೀಡಲೇ ಇಲ್ಲ ಸುಬ್ಬರಾಯ. "ಎಷ್ಟು ಸುಂದರಿ ಸುಶೀಲೆ" ಎಂದು ಕನಸಿನ ಕನ್ಯೆಯ ನೆನಪು ಮಾಡಿಕೊಂಡು ನಿಂತವನಿಗೆ ರಾಜೀವಿ ಬಂದು ನಿಂತದ್ದೇ ಗೊತ್ತಾಗಲಿಲ್ಲ. "ಹಿಡಿಯಿರೀಂದ್ರೇ" ಎಂದಾಗಲೇ ಈ ಲೋಕಕ್ಕೆ ಅವನು ಇಳಿದದ್ದು. ಅವಳು ಕೊಟ್ಟ ತಿಂಡಿ ಕಾಫಿ ತೆಗೆದುಕೊಂಡು ನೋಡೆಗೆ ಆತು ಕುಕ್ಕುರುಗಾಲಲ್ಲಿ ಕುಳಿತು ತಿನ್ನ ತೊಡಗಿದ. ತಿಪ್ಪಯ್ಯನವರ ಸವಾರಿ ಬಂತು. "ಬಾ ತಿಪ್ಪಯ್ಯ, ನಿನ್ನೇನೆ ಬರ್ತೀಯಾಂತ ಇದ್ದೆ" ಎಂದು ಸುಬ್ಬರಾಯ ಆಹ್ವಾನಿಸಿದ. ತಿಪ್ಪಯ್ಯ ಬಂದ ಸುದ್ದಿ ಕೇಳಿ ಶ್ರೀಧರಮೂರ್ತಿ, ತ್ರಿಪುರಸುಂದರಿ, ರಂಗಮ್ಮ ಮಾಡುತ್ತಿದ್ದ ಕೆಲಸ ಅಲ್ಲಿಗೇ ಬಿಟ್ಟು ಹೊರಕ್ಕೆ ಬಂದರು. ಎಲ್ಲರೂ ತಿಪ್ಪಯ್ಯನನ್ನು ಉಪಚರಿಸುವವರೇ.

"ಬೀಗರು ಎಷ್ಟುಹೊತ್ತಿಗೆ ಬರಬಹುದು ?" ಎಂದಳು ರಂಗಮ್ಮ.

"ಬೆಳಗಿನ ಮೋಟಾರಲ್ಲೆ ಶಿವಮೊಗ್ಗಿಗೆ ಒಟ್ಟಿಗೇ ಬಂದೆವು. ಮಧ್ಯಾಹ್ನದ ಊಟ ಅಲ್ಲಿಯೇ ತೀರಿಸಿಕೊಂಡು ಮೂರು ಘಂಟೆ ಹೊತ್ತಿಗೆ ಬರಬಹುದು"

"ನೀನು ಬೀಗರ ಜೊತೆ ಬರ್ತೀಯಾಂತ ಇದ್ದೆ"

"ಹಾಗೇ ಮಾಡೋಣಾಂತ ಇದ್ದೆ. ಆಮೇಲೆ ಯೋಚನೆಮಾಡಿ ಮುಂಚೆ ಹೋಗೋದೆ ವಾಸೀಂತ ಕಾಲುಬಿಟ್ಟೆ"

"ನಡೆದೆ ಬಂದೆಯಾ"

"ಇಲ್ಲ, ನೀನು ಪ್ರತ್ಯೇಕ ಮೋಟಾರು ಕಳಿಸಿದ್ದೆಯಲ್ಲಾ ಅದರಲ್ಲಿ ಬಂದೆ" ಎಂದು ನಗೆಯಾಡಿದ. ಸುಬ್ಬರಾಯ ಇದ್ದ ರೂಮಿನಲ್ಲೇ ಪೇಟ, ಕೋಟು, ಧೋತ್ರದ ಗಂಟು ತೆಗೆದಿಟ್ಟ. ಪಂಚೆ ಮೇಲಕ್ಕೆ ಕಟ್ಟಿ ಧೂಳಾದ ಕಾಲನ್ನು

ತ್ರಿಪುರಸುಂದರಿ ಕೊಟ್ಟ ನೀರಿನಿಂದ ತೊಳೆದುಕೊಂಡು ಬರುವವೇಳೆಗೆ ರಂಗಮ್ಮ, ಹಚ್ಚಿದವಲಕ್ಕಿ, ಚಕ್ಕುಲಿ ಬೆಸನ್ ಕಾಫಿ ಒಂದು ಲೋಟ ನೀರು ತಂದು ಸುಬ್ಬ ರಾಯನ ಪಕ್ಕದಲ್ಲಿ ಮಣೆಹಾಕಿ ಅವರ ಮುಂದಿಟ್ಟಿದ್ದರು. ತಿನ್ನುತ್ತಿದ್ದಂತೆ ಮತ್ತೆ ಮಾತಿಗೆ ಪ್ರಾರಂಭವಾಯಿತು.

''ಅಣ್ಣ ಅತ್ತಿಗೆ ಹೇಗಿದ್ದಾರೆ, ಅಣ್ಣ ಚೆನ್ನಾಗೇ ಇರಬಹುದು. ಅತ್ತಿಗೆ ಆರೋಗ್ಯ ಹೇಗಿದೆ?" ಎಂದ ಸುಬ್ಬರಾಯ.

''ಹಾಗೇ ಇದೆಯಪ್ಪ. ಯಾವ ಔಷಧೀಗೂ ಅದು ಜಗ್ತಾ ಖಾಯಿಲೆ ಯಲ್ಲ. ದಿನದಿನಕ್ಕೆ ಸವೀತಿದ್ದಾಳೆ ಪ್ರಾಣಿ"

''ಶಿವಮೊಗ್ಗ ದೊಡ್ಡ ಆಸ್ಪತ್ರೆಗೆ ತಂದು ತೋರಿಸಿದ್ದರೆ ಚೆನ್ನಾಗಿರು ತ್ತಿತ್ತು. ಆಗಲೇ ನಾನು ಹೇಳಿದೆ, ಅವನೆಲ್ಲಿ ಕೇಳ್ತಾನೆ?"

''ಆ ಪಂಡಿತ ಒಬ್ಬ ಗಂಟು ಬಿದ್ದಿದ್ದಾನೆ. ಗುಟಿಕ ಭಸ್ಮ ಅರ್ಕ ಕರ್ಪೂರ ಸಿಂಧೂರಾಂತ ಔಷಧಿ ಜೊತೆ ತಾಯಿತ ಮಂತ್ರ ತಂತ್ರ ಕೂಡ ಅವನೇ ಮಾಡ್ತಾನೆ. ನನಗಂತು ಅವನಲ್ಲಿ ನಂಬಿಕೇನೆ ಇಲ್ಲ. ಇಂಗ್ಲೀಷ್ ಡಾಕ್ಟರಿಗೆ ತೋರಿಸೂಂತ ನಾನೂ ಹೇಳಿದೆ, ಊಹೂಂ ಕೇಳಲಿಲ್ಲ"

''ಅತ್ತೆಯವರು ಅಲ್ಲೆ ಇದ್ದಾರೋ?''

''ಆ ಮಹರಾಯಿತಿಯಿಂದಲೇ ಅರ್ಧ ಅವಳ ಖಾಯಿಲೆ ಹೆಚ್ಚಿದ್ದು. ಒಂದಕ್ಕೂ ಹತ್ತಿಗುಡೋಲ್ಲ ಹರಿಗುಡೋಲ್ಲ, ತನ್ನದೇ ತನಗೆ. ತನಗೆ ತಿಳಿಯೋಲ್ಲ ತಿಳಿದವರ ಮಾತು ಕೇಳೋಲ್ಲ. ತನ್ನ ಮಾತೇ ಸಾಧಿಸಬೇಕು. ಹೀಗಾಗಿ ಲಕ್ಷ್ಮಣ ಪಾಪ ನರಂ ಆಗಿ ಹೋಗಿದ್ದಾನೆ"

"ಮದುವೆ ಮುಗಿಸಿಕೊಂಡು ಊರುಕಡೆ ಹೋಗಿ ನೋಡಿಕೊಂಡು ಬರ ಬೇಕು"

''ಇನ್ನೇನು ರಂಗಮ್ಮನವರೇ, ಎಲ್ಲಾ ಏರ್ಪಾಟು ನಡೆದಿದೇಂತ ಕಾಣುತ್ತೆ. ನನ್ನಿಂದ ಏನಾಗಬೇಕಿದ್ದರೂ ನಿಸ್ಸಂಕೋಚವಾಗಿ ಹೇಳಿ''

"ನಿಮ್ಮಿಂದಾದ ನಿಸ್ಸಂಕೋಚ ಸಹಾಯದ ಫಲವೇ ಸುಶೀಲೆಯ ಲಗ್ನ ವಲ್ಲವೇ? ಅದೊಂದೇ ಸಾಕು; ದೇವರ ದಯದಿಂದ ದೊಡ್ಡ ಕಾರ್ಯ ಸುಸೂತ್ರ ನಡೆದುಹೋದರೆ ಸಾಕು. ನಿಮ್ಮಂಥವರ ಹರಕೆಯಿಂದ ಅದೂ ನಡೆಯುತ್ತೆ ಅನ್ನೊ ನಂಬಿಕೆ"

“ನಡಸ್ತಾನೆ–ಪಿಳ್ಳಂಗೇರಿ ರಂಗನಾಥಸ್ವಾಮಿ ಸನ್ನಿಧಾನದಲ್ಲಿ ಸುಗಮ ವಾಗಿ ನಡೆಯುತ್ತೆ. ನೀವೇನೂ ಯೋಚನೆ ಮಾಡಬೇಡಿ” ಎಂದು ಹೇಳುತ್ತಾ ತಿಂದು ಮುಗಿದ ಎಲೆಯನ್ನು ಮಡಿಸಿ ಕೈಯ್ಯಲ್ಲಿ ಹಿಡಿದು ಹೊರಕ್ಕೆ ಎಸೆಯಲು ಎದ್ದ ತಿಪ್ಪಯ್ಯ.

ಬೀಗರ ಗಾಡಿ ಬಂದುವು. ಕೊಂಚ ದೂರದಿಂದಲೇ ವಾಲಗದವರು ಮರ್ಯಾದೆಯಿಂದ ಕರೆತಂದಿದ್ದರು. ಜನಾರ್ಧನಯ್ಯ ಜರತಾರಿ ರುಮಾಲು, ಸರ್ಜ ಕೋಟು, ಮೇಲೆ ವಲ್ಲಿ ರೇಷ್ಮೆ ಅಂಚಿನ ಪಂಚೆ ಧಾರಿಯಾಗಿ ಠೀವಿ ಯಿಂದ ಇಳಿದ. ರಂಗಣ್ಣನವರನ್ನು ಗೌರಮ್ಮನವರೇ ಕೈಕೊಟ್ಟು ಇಳಿಸಿ ಕೊಂಡರು. ಕೆಮ್ಮುತ್ತಲೇ ಇಳಿದರು. ಕರಿಯ ಕೋಟು, ಕಾಲಿಗೆ ಚಡಾವು, ಕೆಂಪು ಹಳೇಕಾಲದ ರುಮಾಲು, ಅಂಗವಸ್ತ್ರದೊಡನೆ ಬೀಗರಕಡೆಯ ಹಿರಿಯ ರಾಗಿ ಇಳಿದರು ರಂಗಣ್ಣನವರು. ಗೌರಮ್ಮನ ತಂಗಿ, ಅವಳ ಗಂಡ, ಮತ್ತೆ ಜನಾರ್ಧನಯ್ಯನ ಮತ್ತಿಬ್ಬರು ನೆಂಟರು ಹೀಗೆ ಬೀಗರ ಸಂಖ್ಯೆ ಹತ್ತುಮಂದಿ ಇದ್ದರು.

ಬೀಗರಿಗೆ ಉಪಚಾರವಾಗಿ ಚಹ ಅವಲಕ್ಕಿಯ ಸರಬರಾಜಾದ ಮೇಲೆ ಸಂಜೆ ಎಂಟುಘಂಟೆ ಹೊತ್ತಿಗೆ ವರಪೂಜೆಯ ಅಣಿ ನಡೆಯಿತು. ಹನುಮಂತ ದೇವರ ಗುಡಿಯಲ್ಲಿ ವರಪೂಜೆ ನಡೆಯಿತು. ಹೆಂಗಳೆಯರು ಸಡಗರದಿಂದ ಹೊಸಸೀರೆಗಳಿಂದ ಅಲಂಕೃತರಾಗಿ ಮೆರೆದರು.

ಈ ಸಂದರ್ಭದಲ್ಲಿ ಅತಿ ಉತ್ಸಾಹದಿಂದ ಓಡಾಡುತ್ತಿದ್ದ ತ್ರಿಪುರಸುಂದರಿ ಒಮ್ಮೆಲೇ ನಿರುತ್ಸಾಹಳಾದಳು. ಕಣ್ಣಲ್ಲಿ ನೀರೇ ಕಾಣಿಸಿಕೊಂಡಿತು. ತಮ್ಮ ಬಿಡಾರದ ಮನೆಯ ಮೂಲೆಯಲ್ಲಿ ನಿಂತಳು. ಅರಿಶಿನ ಕುಂಕುಮ ಮುತ್ತೈದೆ ಯರಿಗೆ ಕೊಡಬೇಕಾಗಿತ್ತು. ರಂಗಮ್ಮ ತ್ರಿಪುರಸುಂದರಿಯನ್ನು ಹುಡುಕೀ ಹುಡುಕಿದಳು. ವರಪೂಜೆ ಮುಗಿಸಿಕೊಂಡು ಹಿಂದಿರುಗಿದಾಗ ತ್ರಿಪುರಸುಂದರಿ ಮುಖ ಚಿಕ್ಕದುಮಾಡಿಕೊಂಡು ನಿಂತಿದ್ದಳು. ಉತ್ಸಾಹ ಭಂಗವಾಗಿತ್ತು, ಆಸೆ ನಿರಾಶೆಯಾಗಿತ್ತು. “ಏನಕ್ಕ” ಎಂದು ರಾಜೀವಿ ವಿಚಾರಿಸಿದಾಗ ಎರಡೇ ಶಬ್ದ ಅವಳ ಬಾಯಿಂದ ಹೊರಟದ್ದು “ಮುಟ್ಟು”. ಮದುವೆಯ ಮನೆಯಲ್ಲಿ ಓಡಾ ಡುವ ಉತ್ಸಾಹದಿಂದ ಸಡಗರದಿಂದ ಕೆಲಸಮಾಡಿ ಸುಶೀಲೆಯ ಲಗ್ನ ಸಂಭ್ರಮ

ದಿಂದ ನಡೆಸಿಕೊಡಬೇಕೆಂಬ ಹಂಬಲ ಈ ಹಾಳು ''ಮುಟ್ಟಿ''ನಿಂದ ನಿಂತು ಹೋದದ್ದು ನಿಜಕ್ಕೂ ಅವಳನ್ನು ತುಂಬಾ ನಿರಾಶಳನ್ನಾಗಿ ಮಾಡಿತ್ತು.

''ಎಲ್ಲಿ ಕಾದಿರುತ್ತೋ ಈ ಹಾಳು ಮುಟ್ಟು, ದರಬಂದು ಕೆಲಸಕ್ಕೂ ಹೀಗೇನೆ ನೋಡು" ಎಂದು ತನ್ನ ಅಸಹಾಯ ಪರಿಸ್ಥಿತಿಗೆ ಪ್ರಕೃತಿ ನಿಯಮ ವನ್ನೇ ಶಪಿಸಿದಳು.

"ಅಂತೂ ಮದುವೆ ಮುಗಿಯೋಕೂ ನಿಮ್ಮ ನೀರಿಗೂ ನೇರ" ಎನ್ನುತ್ತ ಕೋಣೆಯಲ್ಲಿ ಇವಳಿಗೆ ಸ್ಥಳಮಾಡಿ ಕೊಟ್ಟಳು ರಾಜೀವಿ. ರಂಗಮ್ಮ ಈ ವಿಷಯ ಕೇಳಿ "ಅಯ್ಯೋ ಹುಡುಗೀ" ಎಂದಳು. ಸುಶೀಲೆ, ತನ್ನನ್ನು ಪೀಡಿಸಿ ಕಾಡಿಸಿ ಗಂಡನ ಹೆಸರು ಹೇಳಿಸುವೆನೆಂದು ಸವಾಲು ಹಾಕಿದ ತ್ರಿಪುರಸುಂದರಿ ಹಾಗೆ ಮಾಡಲು ಸಾಧ್ಯವಿಲ್ಲವೆಂದು ಸಮಾಧಾನ ಹೊಂದಿದಳು. ಆದರೂ ಹಾಗೇ ಮಾಡಲು ಆಗಲೇ ಪ್ರಾರಂಭಿಸಿದ ರಾಜೀವಿಯ ಧಾಳಿಯನ್ನವಳು ಎದುರಿಸಲೇಬೇಕಿತ್ತು.

ವರಪೂಜೆ ಮರುದಿನ ಕಾಶಿಯಾತ್ರೆ, ಆ ಮೇಲೆ ಗೋಧೂಳಿ ಲಗ್ನದಲ್ಲಿ ಧಾರೆ ಮುಹೂರ್ತ ನಡೆಯುವುದಿತ್ತು. ರಂಗಣ್ಣನವರು ಗೌರಮ್ಮನವರೇ ನಾಂದಿ ಇಟ್ಟುಕೊಂಡು ಹಸೆಮಣೆ ಮೇಲೆ ಕೂತಿದ್ದರು. ಅಂತರಪಟ ಹಿಡಿದು ಅಕ್ಕಿ ಕಾಳು ಬೀಳುವ ಸಮಯಕ್ಕೆ ಒಂದು ಕಮಾನುಗಾಡಿ ಬಂತು. ಅದರಿಂದ ವಯಸ್ಸಾದ ಕೆಂಪನೆಯ ಬಿಳಿಯ ಗಿರಿಜಾ ಮೀಸೆಯುಳ್ಳ ವ್ಯಕ್ತಿ ಜೊತೆಗೆ ವಯಸ್ಸಾದ ಸ್ಫುರದ್ರೂಪಿ ಹೆಂಗಸೂ ಇಳಿದು ಮದುವೆ ಮಂಟಪದ ಬಳಿ ಬಂದು ಇಬ್ಬರೂ ಆಶಿರ್ವಾದಮಾಡಿ ದಂಪತಿಗಳ ತಲೆಯ ಮೇಲೆ ಅಕ್ಕಿ ಕಾಳು ಹಾಕಿ ದರು.

ರಂಗಣ್ಣನಿಗೆ ಆಶ್ಚರ್ಯವಾಯಿತು. ಗೌರಮ್ಮನಿಗೆ ಏನೂ ತೋಚದಾ ಯಿತು. ಜನಾರ್ಧನಯ್ಯ ಬಗ್ಗಿಸಿದ ತಲೆ ಎತ್ತಲಿಲ್ಲ. ಶ್ರೀಧರಮೂರ್ತಿ, ಸುಬ್ಬ ರಾಯ ಇವರಿಗೆ ಒಂದೂ ಅರ್ಥವಾಗಲಿಲ್ಲ. ಪುರೋಹಿತರು ತಮ್ಮ ಪಾಡಿಗೆ ತಾವು ಮಂತ್ರ ಹೇಳುತ್ತಲೇ ಇದ್ದರು. ಆಗತಕ್ಕ ಸಂಪ್ರದಾಯಗಳು ಮುಗಿದು ಗಂಡಹೆಂಡಿರಿಗೆ ಸೆರಗಿಗೆ ಗಂಟುಹಾಕಿ ದೇವಸ್ಥಾನಕ್ಕೆ ಕರೆದೊಯ್ದು ನಮಸ್ಕರಿಸಿ ದರು. ಬಾಸಿಂಗ ಕಟ್ಟಿಕೊಂಡು ಗಲ್ಲದ ತುಂಬ ಅರಿಶಿನ ಬಳಿದುಕೊಂಡ ಸುಶೀಲೆ ತುಂಬಾ ಚಲುವಾಗಿ ಕಂಗೊಳಿಸಿದಳು. ಸುಬ್ಬರಾಯನ ಕಣ್ಣು ತಣಿ

ಯಿತು. ಜನಾರ್ಧನಯ್ಯ ಹಿಗ್ಗಿ ಹೀರೇಕಾಯಿ ಆಗಿದ್ದ. ಇಂಥಾ ಸನ್ನಿವೇಶ ಈ ಅಪರಿಚಿತ ಹೆಣ್ಣುಗಂಡು ವ್ಯಕ್ತಿಗಳ ಆಗಮನದಿಂದ ಗಂಭೀರ ವಾತಾವರಣ ತಾಳಿದ್ದು ಶ್ರೀಧರಮೂರ್ತಿ, ರಂಗಮ್ಮ ಇವರಲ್ಲಿ ಕುತೂಹಲವನ್ನು ಕೆರಳಿಸಿತು.

ರಂಗಣ್ಣ ಹೊರಕ್ಕೆ ಬಂದು "ಅಂತೂ ಬಂದೆಯಲ್ಲ ಮುಹೂರ್ತದ ಹೊತ್ತಿಗಾದರೂ" ಎಂದು ಬಂದ ವ್ಯಕ್ತಿಯನ್ನು ಕೇಳಿದರು.

"ಜನಾರ್ಧನನ್ನ, ಅವನ ಹೆಂಡತೀನ್ನ ಕರಿ" ಎಂದಿತು ಆ ವ್ಯಕ್ತಿ. ರಂಗಣ್ಣ ಹಾಗೇ ಮಾಡಿದರು. ಜನಾರ್ಧನ ಸುಶೀಲೆಯೊಡನೆ ಬಂದು ತಂದೆಯ ಕಾಲಿಗೆರಗಿದ. ಸುಶೀಲೆಯು ನಮಸ್ಕರಿಸಿದಳು. ಬಂದ ವ್ಯಕ್ತಿ ಜನಾರ್ಧನನ ತಂದೆ. ಆ ಹೆಂಗಸು ಗೌಳಿಗರ ನಂಜಿ.

ಗೌಳಿಗರ ನಂಜಿ ವಯಸ್ಸಾಗಿದ್ದರೂ ಯೌವ್ವನದ ದಿನಗಳಲ್ಲಿ ಗಟ್ಟಿಮುಟ್ಟಾದ ಸುರಸುಂದರಿಯಾಗಿದ್ದಳೆಂದು ಧಾರಾಳವಾಗಿ ಹೇಳಬಹುದಾಗಿತ್ತು. ಜನಾರ್ಧನಯ್ಯನ ತಂದೆ ಕೂಡ ರಂಗಣ್ಣನವರಿಗಿಂತ ಚಿಕ್ಕವರಾಗೇ ಕಾಣುತ್ತಿದ್ದರು. ಕಿವಿಯಲ್ಲಿನ ಕೆಂಪು ಹರಳಿನ ಹತ್ತುಖಡಕು, ಅವರ ಕೆಂಪು ಗುಂಡು ಮುಖ ನೀಳ ನಾಶಿಕ ತುಂಬು ಮೀಸೆಯ ವ್ಯಕ್ತಿತ್ವಕ್ಕೆ ಕುಂದಣವಿಟ್ಟಂತೆ ಶೋಭಿಸುತ್ತಿತ್ತು.

ರಂಗಮ್ಮ ಇತರ ಪರಿವಾರ ಎಲ್ಲರೂ ಈ ದೃಶ್ಯ ನೋಡಿ ಆಶ್ಚರ್ಯಪಟ್ಟರು. ರಂಗಣ್ಣ ತನ್ನ ಅಣ್ಣನನ್ನು ನಿರೀಕ್ಷಿಸಿಯೇ ಇರಲಿಲ್ಲ. ಜನಾರ್ಧನನಿಗಂತೂ ಬಾಯೇ ಕಟ್ಟಿ ಒಂದು ತರಹ ಗಾಬರಿಗೊಳಗಾಗಿದ್ದ. ಯಾರ ಬಾಯಲ್ಲೂ ಮಾತೇ ಹೊರಡದು. ಕಡೆಗೆ ಮೌನವನ್ನು ಮುರಿದದ್ದು ನಂಜಿಯೆ.

"ಇವರು ಬರಾಕಿಲ್ಲಾಂತ್ಲೆ ಅಂದ್ರು–ಅದ್ಯಾಕ ಹಿಂಗ ಆಡ್ತಿರ–ಇದ್ದೋನೊಬ್ಬ ಮಗನ ಲಗ್ನಕ್ಕೂ ಬರಲ್ಲಾಂತ ನಿಂತ್ರೆ ಆಯ್ತುದಾ, ನೀವು ಬರಾಕೆಬೇಕು ನನ್ನ ಮಗೀಗೆ ತಲೆಮ್ಯಾಕೆ ಅಕ್ಕಿಕಾಳು ಆಕಲೇಬೇಕು ಎಂದ್ಹೇಳಿ ಜುಲುಮಿಂದ ಎಳಕೊಂಡು ಬಂದಂಗಾಗೈತೇಳು....ಜನ್ನಪ್ಪಾ ಇಸ್ವಾಸ ಈಗನಾರ ತೋರ್ಸಾಕಿಲ್ವೆ–ಎಂಡ್ತಿ ಲಕ್ಸ್ಮಿ ಆಗ್ಯಾಳೆ–ಸಂದಾಕೆ ಬಾಳೇವು ಮಾಡಿಕೊಂಡಿರು....."

ಎಂದು ಹೇಳಿ ಕೈಲಿದ್ದ ಕಾಗದವ ಪಟ್ಟಣದಿಂದ ಝಗಝಗಿಸುವ ಒಂದು ಜೊತೆ ಬಂಗಾರದ ಬಳೆ ತೆಗೆದು ಅರಿಶಿನ ಕುಂಕುಮ ತರಿಸಿ ಎಲೆ ಅಡಿಕೆ ತರಿಸಿ

ನಂಜಿಯೇ ಸುಶೀಲೆಗೆ ಕುಂಕುಮ ಹಚ್ಚಿ ಎಲೆ ಅಡಿಕೆಯಲ್ಲಿ ಬಳೆಯಿಟ್ಟು ಉಡಿ ತುಂಬಿದಳು. ಇಡೀ ಮದುವೆ ಮನೆಯೇ ಇದಕ್ಕೆ ಚಕಿತಪಟ್ಟಿತು.

ಜನಾರ್ಧನಯ್ಯನಿಗೆ ನಂಜಿಯ ಮೇಲಿದ್ದ ಜಿಗುಪ್ಸೆ ತಾತ್ಸಾರಭಾವ ಮಾಯವಾಯಿತು. ತಾಯಿಯಂತೇ ಕಂಗೊಳಿಸಿದಳು ನಂಜಿ ಅವನ ಕಣ್ಣಿಗೆ. ಗಂಭೀರವಾಗಿ ನಿಂತ ತಂದೆಯ ಬಗ್ಗೆ ಅವನ ಅಭಿಪ್ರಾಯ ಬದಲಿಸಬೇಕಾದ ಸಂದರ್ಭ ಬಂತು. ಋಣಾನುಬಂಧ, ಗಂಟುಬಿದ್ದ ಈ ನೆಂಟು ಸಮಾಜದ ದೃಷ್ಟಿಯಿಂದ ಅನ್ಯಾಯವೆಂದು ಪರಿಗಣಿಸಿದ್ದರೂ, ಸುಸಂಸ್ಕೃತ ಸುಂದರ ಮತ್ತು ಕೂಡಿಕೆಯ ಗಂಡನಾದರೂ ತಾಳಿ ಕಟ್ಟಿಸಿಕೊಂಡವಳಿಗಿಂತ ನೂರ್ಮಡಿ ವಿಶ್ವಾಸ ಸಂತೋಷ ದೊರಕಿಸಿಕೊಡಬಲ್ಲ ಹೆಣ್ಣು ನಂಜಿ ಎಂದು ತಿಳಿದಾಗ ಎಂಥವರೂ ಇದು ಅಕ್ರಮ ಕೂಟ, ದೋಷಪೂರಿತ ನ್ಯಾಯಬಾಹಿರ ಸಂಸಾರ ವೆಂದು ಹೇಳುವಂತೇ ಇರಲಿಲ್ಲ.

ಜನಾರ್ಧನಯ್ಯನಿಗೆ ಒಂದು ಜೊತೆ ಪಂಚೆ ತಂದಿದ್ದಳು ನಂಜಿ. ಅದನ್ನೂ ಓದಿಸಿದಳು. ಇನ್ನೊಂದು ಸಾಧಾರಣ ಸೀರೆಯನ್ನು ಹೊಟ್ಟೆ ತಣ್ಣಗೆ ಮಾಡಿದ ಸೀರೆ ಕೊಡಬೇಕಾದ ಸಂದರ್ಭದಲ್ಲಿ ಬೀಗಿತ್ತಿಗೆ ಓದಿಸಿದಳು.

ನಂಜಿ ಅಪರಂಜಿ. ಅವಳಿಗೆ ಹಣಕ್ಕೇನೇನೂ ಕೊರತೆ ಇರಲಿಲ್ಲ. ಇನ್ನೂರು ಕುರಿ ಇದ್ದವು, ಜನಾರ್ಧನಯ್ಯನ ತಂದೆಯನ್ನು ನೆಮ್ಮದಿಯಾಗಿಟ್ಟು ಕೊಂಡಿದ್ದಳು. ಅವಳ ಒಲುವಿನ ಬಲೆಗೆ ಬಲಿಯಾದ ಜನಾರ್ಧನಯ್ಯನ ತಂದೆ ತೊಳಲಬೇಕಾದ್ದೇ ಇರಲಿಲ್ಲ. ನಂಜಿಯ ಹೆಬ್ಬಯಕೆ ಜನಾರ್ಧನು ತನ್ನನ್ನು ತಾಯಿಯಂತೆ ಕಾಣಬೇಕು, ತನ್ನ ಪ್ರಿಯತಮನ ಪ್ರತಿಬಿಂಬ ತನಗೆ ಆತ್ಮೀ ಯತೆಯನ್ನು ತುಂಬಿ ತರಬೇಕೆಂಬುದೇ ಆಗಿತ್ತು.

ಈಗ ಮದುವೆಯ ಸಮಯಕ್ಕೆ ಹೋಗಲೇಬೇಕೆಂದು ಹಟ ಹಿಡಿದು ಪ್ರಿಯತಮನೊಡನೆ ಬಂದಿದ್ದಳು. ಬಳೆ, ಪಂಚೆ ಓದಿಸಿದ್ದು ಅವಳ ಮನಸ್ಸಿಗೆ ನೆಮ್ಮದಿ ಕೊಟ್ಟಿತ್ತು. ಜನಾರ್ಧನನ ತಂದೆ ಒಂದು ಮಾತೂ ಆಡಲಿಲ್ಲ. ಬೀಗರ ಬಿಡಾರದಲ್ಲಿ ಇಬ್ಬರೂ ಹೋಗಿ ಕುಳಿತರು. ಅದೇ ರಾತ್ರಿ ಬೇಡಬೇಡವೆಂದರೂ ಇಬ್ಬರೂ ಹೊರಟುಹೋದರು.

ಮರುದಿನವೇ ಮನೆ ತುಂಬಿಸಿಕೊಳ್ಳುವ ಶಾಸ್ತ್ರ ನಡೆಯಿತು. ಮಗಳನ್ನು ಮನೆ ತುಂಬಿಸಿ ಕೊಡುವಾಗ ರಂಗಮ್ಮನಿಗೆ ಕರುಳು ಕಿತ್ತು ಬಂತು. ನೀರುಗಣ್ಣಿನಿಂದ ಶಾಸ್ತ್ರ ವಿಧಿ ನಡೆಯಿತು. ಸುಶೀಲೆಯ ಕಣ್ಣಲ್ಲೂ ನೀರು ಕಾಣಿಸಿತು. ಅದೇಕೋ ಜನಾರ್ಧನ ಕೂಡ ಕಣ್ಣೊರಸಿಕೊಂಡ. ತಮ್ಮ ಮನೆಯಂಗಳದಿ ಬೆಳೆದೊಂದ ಮಲ್ಲಿಗೆಯನ್ನು ಗೌರಮ್ಮನವರ ಮನೆ ಅಂಗಳಕ್ಕೆ ಬಿಡುವಾಗ ಹೆತ್ತೊಡಲು ಚುರುಕ್ ಅನ್ನದಿರಲು ಸಾಧ್ಯವೆ?

ಮದುವೆಗೆ ಬಂದವರು ಕಡೆಯ ಕಳ್ಳೂಟವಾದಮೇಲೆ ಒಬ್ಬೊಬ್ಬರಾಗಿ ರಾಗಿ ಹೊರಟರು. ಮದುವೆಯಾದೊಡನೇ ಹೆಂಡತಿಯನ್ನೂ ಮನೆಗೇ ಕರೆದೊಯ್ಯುವುದೆಂದು ನಿರ್ಧರಿಸಿದ್ದ ಕಾರ್ಯಕ್ರಮದಲ್ಲಿ ಕೊಂಚ ಬದಲಾವಣೆಯಾಗಿತ್ತು. ಎರಡು ತಿಂಗಳ ನಂತರ ಹುಡುಗಿಯನ್ನು ಹೊನ್ನಾಳಿಗೇ ಕರೆತಂದು ಬಿಡುವುದೆಂದು ನಿರ್ಧಾರವಾಗಿತ್ತು. ಆದ್ದರಿಂದ ಬೀಗರನ್ನು ಕಳಿಸಿಕೊಡುವ ಸಮಾರಂಭವೂ ನಡೆದುಹೋಯಿತು. ಜನಾರ್ಧನನಿಗೆ ಎಷ್ಟುಸಲ ಹೆಂಡತಿ ಮುಖ ನೋಡಿದರೂ ಸಾಲದು. ಗೌರಮ್ಮನವರಿಗೆ ಸೊಸೆಯನ್ನು ಎಷ್ಟು ಮೆಚ್ಚಿಕೊಂಡರೂ ಸಾಲದು. ಹೊರಟು ನಿಂತ ಬೀಗರಿಗೆ ಗಂಡ ಹೆಂಡಿರು ನಮಸ್ಕಾರ ಮಾಡಿದರು. ಧಡಧಡನೆ ಗೆಜ್ಜೆಯ ಸದ್ದಿನೊಡನೆ ವಾಲುತ್ತಾ ಹೊರಟ ಗಾಡಿಯಲ್ಲಿ ಕುಳಿತು ಜನಾರ್ಧನ ತಾಯಿಯ ಹಿಂದೆ ಅವಿತ ಸುಶೀಲೆಯನ್ನು ಮರೆಯಾಗುವತನಕ ನೋಡುತ್ತಲಿದ್ದ.

ಮದುವೆಯ ಸಮಾರಂಭ ಸುಗಮವಾಗಿ ನಡೆದುದಕ್ಕೆ ಸುಬ್ಬರಾಯು, ಶ್ರೀಧರಮೂರ್ತಿ, ತಿಪ್ಪಯ್ಯ ಇವರನ್ನು ಎಷ್ಟು ಹೊಗಳಿದರೂ ರಂಗಮ್ಮನಿಗೆ ತೃಪ್ತಿಯಿಲ್ಲ. ಮರುದಿನ ಮುಂಜಾನೆಯೇ ಸಾಮಾನು ಸರಂಜಾಮು ಕಟ್ಟಿದಳು. ಅಷ್ಟುಹೊತ್ತಿಗೇ ತ್ರಿಪುರಸುಂದರಿ ನದಿಗೆ ಹೋಗಿ ಮಿಂದು ಒಳಕ್ಕೆ ಬಂದಳು.

"ದಣಿದಿದ್ದೀ ಕಣೇ ಮದುವೆ ಕೆಲಸ ಮಾಡೀ, ಕಾಫಿ ಅವಲಕ್ಕಿ ತೊಗೋ" ಎಂದು ಶ್ರೀಧರಮೂರ್ತಿ ತ್ರಿಪುರಸುಂದರಿಯನ್ನು ಟೀಕಿಸಿದ.

"ಒಳಗಿದ್ದಿದ್ದರೆ ನಾನು ದಣಿದೇ ದಣೀತಿದ್ದೆ"

"ರಂಗಮ್ಮನೋರೇ, ಇನ್ನೇನಿದೆ ಸಾಮಾನುಗಳು ಎಲ್ಲಾ ಒಂದುಸಲ ನೋಡಿ. ನಾವೆಲ್ಲಾ ಇನ್ನು ಆರಾಂ ತೊಗೊಳ್ಳುವವರು, ಇನ್ನುಳಿದ ಕೆಲಸ

ವೆಲ್ಲಾ ಇವಳೇ ಮಾಡಬೇಕು. ಮೂರು ದಿವಸ ಕೂತು ಮದುವೆ ಊಟ ಹೊಡೆದ ಹಾಗಲ್ಲ...."

"ಹೌದು, ಭಾವ ಹೇಳೋದು ನಿಜ" ಎಂದ ಸುಬ್ಬರಾಯ.

"ಸುಮ್ಮನಿರಬಾರದೇನ್ರಪ್ಪಾ ಯಾಕೆ ಅವಳನ್ನ ಗೋಳುಹುಯ್ತೀರಿ" ಎಂದು ತ್ರಿಪುರಸುಂದರಿಯ ಕಡೆ ವಕಾಲತ್ತು ವಹಿಸಿದಳು ರಂಗಮ್ಮ. ಇದೇ ಸುಸಮಯವೆಂದು ರಾಜೀವಿಯೂ ಸುಶೀಲೆಯೂ ರಂಗಮ್ಮನ ಅತ್ತಿಗೆಯೂ ಎಲ್ಲರೂ ಗಂಡಸರನ್ನೇ ಟೀಕಿಸಿದರು.

"ಹೌದು ಹೌದು, ನೀವೇ ಎಲ್ಲಾ ಕೆಲಸ ಮಾಡಿದವರು ಪಾಪ...."

"ಬರೀ ಹರಟೆ, ಹೊತ್ತಿಂದ್ಹೊತ್ತಿಗೆ ತಿಂಡಿ, ಇದರಲ್ಲೇ ಕಾಲ ಕಳೆದಿರಿ"

"ಇಸ್ಪೀಟು ಆಡುವುದಕ್ಕೇ ಹೊತ್ತು ಸಾಲಲಿಲ್ಲ; ಇನ್ನು ಮದುವೆ ಕೆಲಸಕ್ಕೆ ಬಿಡುವೆಲ್ಲಿ ?"

"ಹೋ ಹೋ....ಸಾಕು ಸಾಕು. ಸುಬ್ಬರಾಯಾ, ಗಾಡಿ ತಯಾರಾಯ್ತೇನೊ ನೋಡು. ತ್ರಿಪುರಸುಂದರಿಗೆ ಒಂದು ಮಾತು ಅಂದದ್ದಕ್ಕೆ ಹೆಂಗಸರ ಗುಂಪೇ ನಮಗೆ ಇದಿರಾಗಿ ವಾದಿಸೋಕೆ ಪ್ರಾರಂಭವಾಯ್ತಲ್ಲಾ....ಏನು ಒಗ್ಗಟ್ಟು ಈ ಜಾತಿಗೆ...."

"ಟೀಕಿಸೋದೊಂದೇ ನಿಮ್ಮ ಜಾತಿಗೆ ಗೊತ್ತಿರೋದು" ಎಂದು ಅಣಗಿಸುವಂತೆ ಹೇಳಿದಳು ತ್ರಿಪುರಸುಂದರಿ. "ಸರಿ ನೀಹೇಳಿದ್ದು" ಎಂದ ತಿಪ್ಪಯ್ಯ. ಸುಸ್ವಾದ ಶ್ರೀಧರಮೂರ್ತಿ ಮಾತೇ ಆಡದೆ ಹೊರಡುವುದಕ್ಕೆ ಆತುರಪಡಿಸಿದ. ಎರಡು ಗಾಡಿಯಲ್ಲಿ ಒಂದರಲ್ಲಿ ಸಾಮಾನು ಇನ್ನೊಂದರಲ್ಲಿ ಜನ ಕುಳಿತರು. ಸಾಮಾನು ಹಾಕಿದ ಗಾಡಿಯಲ್ಲಿ ಹಿಂದುಗಡೆ ತಿಪ್ಪಯ್ಯ, ಶ್ರೀಧರಮೂರ್ತಿ ಜಾಗ ಮಾಡಿಕೊಂಡು ಕುಳಿತಿದ್ದರು.

ಮುಂದಿನ ಗಾಡಿಯಲ್ಲಿ ರಾಜೀವಿ ಅವಳ ಪಕ್ಕದಲ್ಲಿ ಸುಶೀಲ. ಸುಬ್ಬರಾಯ ನಡೆದೇ ಬರುತ್ತೇನೆಂದು ಹೊರಟು ಅರ್ಧ ದಾರಿಯಲ್ಲಿ ಗಾಡಿಯಲ್ಲಿ ರಾಜೀವಿಯ ಎದುರಿಗೆ ಕುಳಿತ.

ಸುಶೀಲೆ ತುಂಬುಗಣ್ಣನ್ನು ಹಾಯಿಸಿ ಮುಖದಲ್ಲಿ ಮಂದಹಾಸ ಬೀರಿ ಸುಬ್ಬರಾಯನನ್ನು ನೋಡಿದಳು. ನೋಟಕ್ಕೆ ಸುಬ್ಬರಾಯ ತಲ್ಲಣಿಸಿಹೋದ. ಇಕ್ಕಟ್ಟಾದ ಸ್ಥಳದಿಂದ ಸರಿಪಡಿಸಿಕೂಡುವ ನೆಪದಲ್ಲಿ ಸುಶೀಲೆಯ ಮೈಯ್ಯೊಮ್ಮೆ

ಸುಬ್ಬರಾಯನಿಗೆ ಸ್ಪರ್ಶವಾದಾಗ ವಿದ್ಯುತ್ ಸಂಚಾರವಾದಂತಾಯಿತು. ಗಾಡಿ ಸರಿಯಿಲ್ಲವೆಂದೂ ನಡೆದೆ ಬರುವೆನೆಂದೂ ಇಳಿದುಬಿಟ್ಟ.

ಪಾಪ ರಾಜೀವಿ ಮುಗ್ಧಳಂತೆ ಕುಳಿತಿದ್ದಳು. ತನ್ನಿನಯನ ಹೃದ ಯಾಂತರಾಳದ ಅವಾಂತರವನ್ನರಿಯದ ರಾಜೀವಿ ಸುಬ್ಬರಾಯನನ್ನು ಏನೇನೋ ಕೇಳುತ್ತಾ ಹೊರಟಿದ್ದಳು. ಬಿಳ್ಳಂಗೇರಿಗೆ ಬರುವಾಗಲೂ ಹೀಗೇ ಕೇಳಿದ್ದಳು. ಹೋಗುವಾಗ ಬರುವಾಗ ಸುಬ್ಬರಾಯನ ಸ್ಥಿತಿ ಒಂದೇಸಮ ಇತ್ತು. ಸುಶೀಲೆ ಗೃಹಿಣಿಯಾಗಿದ್ದಾಳೆ. ಅವಳು ಜನಾರ್ಧನಯ್ಯನ ಅರ್ಧಾಂಗಿ ಎಂಬುದು ಕೂಡ ಅವನಿಗೆ ಈ ಮುಹೂರ್ತದಲ್ಲಿ ಅರ್ಥವಾಗುವಂತಿರಲಿಲ್ಲ.

ಅದೇ ಯೋಚನೆ–ಮೋಹಿನಿಯ ಮೋಡಿಗೊಳಗಾದ ಮಾನವನಂತಿದ್ದ ಸುಬ್ಬರಾಯ. ಈ ಅಂದೋಳನದಲ್ಲಿ ಗಾಡಿಗಳು ಶಿವಮೊಗ್ಗೆ ಮುಟ್ಟಿದಾಗ "ಎಷ್ಟುಬೇಗ ಊರು ಬಂತು ?" ಎಂದಳು ಸುಶೀಲೆ. ಮನೆಗೆ ಹೋಗುವು ದಕ್ಕೆ ಮೊದಲು ಲಕ್ಷ್ಮೀನಾರಾಯಣ ದೇವರಿಗೆ ಹಣ್ಣುಕಾಯಿ ಮಾಡಿಸಿಕೊಂಡು ಬಂದರು.

ರಾಜೀವಿಗೆ ಸುಶೀಲೆಗೊಂದು ಉಡುಗೊರೆ ಕೊಡಬೇಕೆಂದು ಆಸೆ. ಗಂಡ ನಿಗೆ ಹೇಳಿದರೆ ಹಣವಿಲ್ಲವೆಂದು ಕೈಆಡಿಸಿಬಿಟ್ಟರೆ ಹೇಗೆ ? ಏನಾದರೂ ಆಗಲಿ ಕೇಳೇಬಿಡುವುದೆಂದು ಮರುದಿನ ನಿಶ್ಚಯಿಸಿದಳು. ಬಹಳ ದಿನದ ಮೇಲೆ ನದಿಗೆ ಹೊರಟು ನಿಂತ ಸುಬ್ಬರಾಯನ ಜೊತೆಗೆ ರಾಜೀವಿಯೂ ಬಟ್ಟೆ ಗಂಟಿ ನೊಡನೆ ಹೊರಟಳು. ಮೆಟ್ಟಲಿಳಿದು ನದಿಯ ಪಾತ್ರ ಸಮೀಪಿಸಿದಂತೆ ಸುಶೀ ಲೆಯ ನೆನಪು ಮರುಕಳಿಸಿ ಬಂತು.

"ಸುಶೀಲೆಯನ್ನು ನದಿಯಿಂದ ಪಾರುಮಾಡಿದ ಜಾಗ ಯಾವುದು ?" ಎಂದು ಇದೇ ಸಮಯಕ್ಕೆ ರಾಜೀವಿ ಪ್ರಶ್ನಿಸಿದಳು. ಒಂದು ಕ್ಷಣ ಈ ಪ್ರಶ್ನೆಗೆ ಉತ್ತರಿಸಲು ತತ್ತರಿಸಿಹೋದ ಸುಬ್ಬರಾಯ. ಅಂದಿನ ದಿನ ನೆನಪು ಬಂತು. ತುಂಬು ದೇಹವನ್ನು ನೀರಲ್ಲಿ ನೆನೆಸಿದ ಮಂದಾರ ಕುಸುಮದ ದಂಡೆಯನ್ನೊತ್ತಿ ತಂದಂತೆ ತಂದಿಳಿಸಿದ್ದು ಕಣ್ಣಿಗೆ ಕಟ್ಟಿತು. ತಡವರಿಸಿ ಭಾರವಾದ ಧ್ವನಿಯಲ್ಲಿ ಹೇಳಿದ........

"ಅದೇ ಜಾಗದಲ್ಲಿ....ಅದೇ ದಂಡೆಯ ಮೇಲೆ ತಂದುಹಾಕಿದ್ದು" ಎಂದು.

"ಪಾಪ....ನೀವಿಲ್ಲದಿದ್ದರೆ ಅವಳು ಉಳಿಯುತ್ತಿದ್ದಳೆ ?"

........ಉಳಿಯುತ್ತಿದ್ದಳೆ?....ತನ್ನ ಅಂತರಂಗವನ್ನು ಕಲಕಿ ತಿಳಿಗಂಗಾ ಜಲದಂಥ ಸಂಸಾರಕ್ಕೆ ಕೆಸರು ಕದಡುವಂತೆ ಮಾಡಿದವಳು ಉಳಿಯದಿದ್ದ ರೇನಾಗುತ್ತಿತ್ತು ? ರಾಜೀವಿಯ ಈ ಪ್ರಶ್ನೆಗೆ ಅವನ ಅಂತರಂಗದಲ್ಲಿ ತರಂಗ ವೆದ್ದು ತಾಂಡವಾಡಿದವು.

"ಅವಳ ಜೀವ ಉಳಿಸಿ ಪುಣ್ಯಕಟ್ಟಿಕೊಂಡಿರಿ....ಒಳ್ಳೆಕಡೆ ವರವೂ ಸಿಕ್ಕಿ ಲಗ್ನವೂ ಆಯಿತು....ಈ ಎಲ್ಲ ಸಂತೋಷದಲ್ಲಿ ನಾವು ಅವಳಿಗೆ ಒಂದು ಉಡು ಗೊರೆ ಕೊಡುವುದು ಸೂಕ್ತ ಎಂದು ನನಗನ್ನಿಸುತ್ತೆ"

"ಆಂ........ಹೌದೌದು ರಾಜೀವಿ....ಏನಾದರೂ ಕೊಡಬೇಕು....''

"ಒಂದು ರವಿಕೆಖಣ ತಂದುಬಿಡಿ....'' ಎಂದಾಗ ಸುಬ್ಬರಾಯನ ಬಲಗೈ ಅವನ ಎಡಕಿರುಬೆರಳಿನ ಉಂಗುರದ ಮೇಲೆ ಆಡುತ್ತಿತ್ತು. ತನ್ನ ಲಗ್ನದಲ್ಲಿ ಬಂದ ಉಂಗುರ ಒಪ್ಪ ಹಾಕಿಸಿ ಏಕೆ ಸುಶೀಲೆಗೆ ಕೊಡಬಾರದು ?

"....ಏನಾದರೂ ಮಾಡಬೇಕು...." ಎಂದು ನೀರಲ್ಲಿ ಕಾಲುಬಿಟ್ಟು ಕೊಂಡು ಕುಳಿತ. ಉಂಗುರದ ವಿಚಾರ ರಾಜೀವಿಗೆ ಹೇಳಿದರೆ ಹೇಗೆ ?.... ಅವಳು ಏನನ್ನುವಳೋ–ಛೇ ಉಂಗುರ ಕೊಡುವುದು ಸರಿಯಾದ್ದಲ್ಲ. ಮತ್ತೆ ಆಜೀವ ಪರ್ಯಂತ ನೆನಪು ತರುವ ಉಡುಗೊರೆ ಮತ್ತಾವುದು ?

"ಏನಾದರೂ ಅಂದರೆ ರವಿಕೆಖಣ ಬೇಡಾಂತ ಅಂದಹಾಗಾಯ್ತು''

''ಬಟ್ಟೆ ಬಾಬತ್ತೇ ಬೇಡಾಂತ–ಹರಿದುಹೋದ ಮೇಲೆ ಮರ್ತೆ ಹೋಗ ಬಹುದು. ಅದಕ್ಕೆ ಹರಿಯದ ಮುರಿಯದಂಥಾದ್ದೊಂದನ್ನು ಸೂಚಿಸು"

''ಅಂಥಾದ್ದಿನ್ನೇನು ಬೆಳ್ಳಿ ಒಟ್ಟಲೋ ಗಿಟ್ಟಲೋ ತರಬೇಕು ಅಷ್ಟೆ"

''ನಾನೊಂದು ಸೂಚಿಸಲಾ ? ''

''ಏನು ಹೇಳಿ...."

''ಸೊಗಸಾದ ಒಂದು ಜೊತೆ ನೀಲಾಂಜನ....''

''ಹೌದು....ಸರಿಯಾದ ಉಡುಗೊರೆ. ಅದು ದೇವರ ಮುಂದೆ ಇಟ್ಟು ಅದನ್ನು ಹಚ್ಚಿದಾಗೆಲ್ಲಾ ನಮ್ಮ ನೆನಪು ಬರಬೇಕು. ಆ ದೀಪದಂತೆ ಅವಳೂ ಬೆಳಗಲಿ ಎಂಬ ಅರ್ಥ ಬಂದಹಾಗೂ ಆಗುತ್ತೆ....ತಂದೇಬಿಡಿ ಒಂದು ಜೊತೆ ದೀಪ" ಎಂದು ತಂದ ಬಟ್ಟೆಗಳನ್ನು ನೆನಸತೊಡಗಿದಳು. ಸುಬ್ಬರಾಯನೂ ನದಿಗಿಳಿದು ಈಜಿದಾಗ ಹಳೆಯ ದಿನಗಳಲ್ಲಿ ಸುಶೀಲೆ ತನ್ನ ನೋಡಲು ನದಿಗೆ

ಬಂದು ಬಟ್ಟೆ ಒಗೆಯುತ್ತಿದ್ದುದು ನೆನಪಿಗೆ ಬಂತು. ಅದೇ ಕಲ್ಲಿನ ಮೇಲೆ ರಾಜೀವಿ ಕುಳಿತಿದ್ದಳು. ಏನೋ ದುಗುಡ–ಏನೋ ಅತೃಪ್ತ ಆಕಾಂಕ್ಷೆ ಎಲ್ಲಿಯದೋ ಮಧುರಗೀತೆ. ಗೆಜ್ಜೆಯ ಹೆಜ್ಜೆಯನ್ನಿಡುತ್ತಾ ಮದಗಜಗಮನೆ ಬಂದಂತೆ ಅನುಭವ. ಕನಸೇ ಕಾಣುತ್ತಿರಬೇಕು ಸುಬ್ಬರಾಯ ನೀರಿನಲ್ಲಿ ತೇಲುತ್ತಾ.

"ಬಟ್ಟೆ ಒಗೆದಾಯಿತು ಮನೆಗೆ ಬರೋಲ್ಲವೇ'' ಎಂದು ರಾಜೀವಿ ಕೂಗಿದಾಗಲೇ ಈ ಲೋಕಕ್ಕೆ ಮತ್ತೆ ಬಂದದ್ದು. ದಂಡೆಗೆ ಬಂದು ಮೈ ಒರಸಿ ಒದ್ದೆ ಪಂಚೆ ಹಿಂಡಿ ಬೇರೆ ಉಟ್ಟು, ರಾಜೀವಿಯೊಡನೆ ಮನೆಯಕಡೆ ಹೊರಟ.

ತವರೂರಿಗೆ ರಾಜೀವಿ ತೆರಳುವ ಮುನ್ನ ಸೊಗಸಾದ ನೀಲಾಂಜನವನ್ನು ಉಡುಗರೆಯಾಗಿ ಸುಶೀಲೆಗೆ ಕೊಟ್ಟಳು. ಸುಶೀಲೆ ಅದನ್ನ ತೆಗೆದುಕೊಂಡು ತೃಪ್ತಳಾದ ಮುಖಭಾವ ಬೀರಿದಳು. ಎರಡು ನೀಲಾಂಜನಕ್ಕೂ ತುಪ್ಪಹಾಕಿ ಹೂಬತ್ತಿ ಇಟ್ಟು ದೇವರ ಮುಂದಿಟ್ಟು ದೀಪ ತುಂಬಿದಾಗ ಮಂದವಾಗಿ ಬೆಳಗಿದ ಎರಡು ಜ್ಯೋತಿಯಲ್ಲಿ ಒಂದರಲ್ಲಿ ಸುಬ್ಬರಾಯನನ್ನು ಇನ್ನೊಂದರಲ್ಲಿ ರಾಜೀವಿಯನ್ನೂ ಕಂಡಳು. ಈ ಜ್ಯೋತಿ ಸದಾ ಬೆಳಗಿದರೆ ಸಾಕು, ಅವರ ನೆನಪು ಅಳಿಯದೆ ಉಳಿಯುತ್ತದೆ ಎಂದುಕೊಂಡಳು ಸುಶೀಲೆ.

ರಾಜೀವಿ ತವರುಮನೆಗೆ ಹೊರಡುವ ಮುಂಚೆ ತ್ರಿಪುರಸುಂದರಿ ಸಣ್ಣ ಔತಣಮಾಡಿ ಒಂದು ಖಣ ಕೊಟ್ಟು ಕಳಿಸಿದಳು. ಸುಬ್ಬರಾಯ ಅದೇ ರಾತ್ರಿ ರೈಲಿಗೆ ಚಿತ್ರದುರ್ಗಕ್ಕೆ ಹೋದ.

೯

ಜನಾರ್ಧನನಿಗೆ ಜಗತ್ತನ್ನೇ ಜಯಿಸಬಲ್ಲ ಹೆಮ್ಮೆ ಬಂದಿತ್ತು. ಮೂರು ತಿಂಗಳು ಕಳೆಯುವುದು ಮೂರು ಯುಗದಂತಾಯಿತು. ಗೌರಮ್ಮ-ರಂಗಣ್ಣ ನವರಿಗೆ ಒಂದು ಭಾರ ಇಳಿದ ತೃಪ್ತಿಯಾಗಿತ್ತು. ಜನಾರ್ಧನನಿಗೆ ಅನುರೂಪ ಳಾದ ಹೆಂಡತಿ ದೊರಕಿದ್ದಕ್ಕೆ ಇಡೀ ಹೊನ್ನಾಳಿಗೇ ಸುದ್ದಿ ಹರಡಿ ಬಂದರೂ ಗೌರಮ್ಮನವರಿಗೆ ಸಾಲದು. ಸೊಸೆಯ ವಿಷಯ ಎಷ್ಟು ಹೇಳಿದರೂ ಸ್ವಲ್ಪವೇ.

ತಾಲ್ಲೋಕು ಆಫೀಸಿನ ಸಹೋದ್ಯೋಗಿಗಳು ಜನಾರ್ಧನನನ್ನು ಮದುವೆ ಊಟಕ್ಕೆ ಟೀಕಿಸುತ್ತಿದ್ದರು. "ತಡೀರಯ್ಯ, ಹೆಂಡತಿ ಮನೆಗೆ ಬರಲಿ ಆಗ ಊಟಮಾಡಿದರೇ ಚೆನ್ನ" ಎಂದು ಮೂರು ತಿಂಗಳಿಂದ ಸತಾಯಿಸಿದ್ದ. "ಆಗಲಿ ಕಣಯ್ಯಾ, ನೋಡೇಬಿಡ್ತೀವೆ. ಅದಿನ್ನೆಷ್ಟು ದಿನವಿದೆ? ಸೊಗಸಾದ ಊಟಕ್ಕೆ ವರ್ಷವಾದರೂ ಕಾದೇವು" ಎಂದು ದೋಸ್ತಿಗಳೂ ಮೊಂಡು ಬಿದ್ದಿದ್ದರು.

ಆ ದಿನವೂ ಬಂದೇ ಬಂತು. ರಂಗಮ್ಮ, ಸುಶೀಲೆ, ರಂಗಮ್ಮನ ಅಣ್ಣ ಮೂವರೂ ಹೊನ್ನಾಳಿಯಲ್ಲಿ ಇಳಿದಾಗ ಚಿಟಿ ಚಿಟಿ ಮಳೆ ಹನುಕುತ್ತಿತ್ತು. ಸಣ್ಣಗೆ ಬೀಳುತ್ತಿದ್ದ ಹನಿ ಲೆಕ್ಕಿಸದೆ ಹಾಗೇ ಜನಾರ್ಧನನ ಜೊತೆಗೆ ಹೊರ ಟರು. ಮನೆಯೇನೂ ದೂರವಿರಲಿಲ್ಲ-ಗೌರಮ್ಮ ತಲೆಬಾಗಿಲಲ್ಲೆ ನಿಂತಿದ್ದರು. ಸೊಸೆಯನ್ನು ಬೀಗಿತ್ತಿಯನ್ನು ಆದರದಿಂದ ಸ್ವಾಗತಿಸಿದರು.

ಜನಾರ್ಧನ ಸಾಲಮಾಡಿ ಗೆಳೆಯರಿಗೆಲ್ಲಾ ಸಣ್ಣದಾಗಿ ಊಟ ಏರ್ಪಡಿ ಸಿದ್ದ. ರಂಗಮ್ಮ ಹಾಸಿಗೆ ಹೊದ್ದಿಕೆ ಅಲ್ಲಿಂದಲೇ ಹೊಲಸಿಕೊಂಡು ಬಂದಿದ್ದಳು. ರಂಗಣ್ಣನವರ ಆಸೆಯಂತೆ ಸತ್ಯನಾರಾಯಣ ಪೂಜೆ ಮಾಡಿ ನಾಲ್ಕು ಜನಕ್ಕೆ ಊಟ ಹಾಕುವುದೆಂದು ಏರ್ಪಡಿಸಿತ್ತು.

ಸುಶೀಲೆ-ಜನಾರ್ಧನರು ಒಟ್ಟಿಗೇ ಕುಳಿತು ಭಕ್ತಿಯಿಂದ ಸತ್ಯನಾರಾಯಣ ಪೂಜೆ ಮಾಡಿದರು. ತಾಲ್ಲೋಕು ಆಫೀಸಿನ ಗುಮಾಸ್ತೆ ಗೆಳೆಯರ ಜೊತೆಗೆ ತನಗೆ ಬೇಕಾದ ಕೆಲವರಿಗೂ ಹೇಳಿದ್ದ. ಅಂತೂ ಇಂತಹ ಸಮಾರಾಧನೆ ಪೂಜೆಗಳೇ ಅಪರೂಪವಾದ ರಂಗಣ್ಣನ ಮನೆಯಲ್ಲಿ ಈ ಪುಟ್ಟ ಸಮಾರಂಭ

ಉತ್ಸಾಹದಿಂದ ಜರುಗಿತು. ಬಂದವರೆಲ್ಲಾ ಜನಾರ್ಧನನನ್ನು ವಂದಿಸಿದರು. ಗೆಳೆಯರು ಸುರಸುಂದರಿಯ ಕೈಹಿಡಿದೆ ಎಂದು ಅಭಿನಂದಿಸಿದರು. ಬಹುದಿನ ದಿಂದ ಸಪ್ಪೆ ಮುಖಹಾಕಿ ಕೊರಗುತ್ತಿದ್ದ ಜನಾರ್ಧನನ ಮುಖದಲ್ಲಿ ಸುಶೀಲೆಯ ಗಂಡನೆಂಬ ಹೆಮ್ಮೆಯ ಕಳೆ ತುಂಬಿ ನಗು ಮುಖವಾಗಿರುತ್ತಿದ್ದು ಸಂತೋಷದ ಸುದ್ದಿಯಾಗಿತ್ತು.

ಬಂದ ಮಂದಿ ಹೋಳಿಗೆ, ಎಳ್ಳುಪುಡಿ ಚಿತ್ರನ್ನದ ಊಟ ಹೊಡೆದು ಎಲೆ ಅಡಿಕೆ ಹಾಕಿ ತೃಪ್ತಿಯಿಂದ ಹೊರಬಿದ್ದರು. ರಂಗಮ್ಮ–ಗೌರಮ್ಮನವರು ಸೇರಿ ಮಾಡಿದ ಅಡಿಗೆಯನ್ನು ಎಲ್ಲರೂ ಹೊಗಳಿದ್ದರು. ಮನೆಗೆ ಒಳ್ಳೇ ಸೊಸೆ ಬಂದಳು. ಬ್ರಾಹ್ಮಣ ಮುತ್ತೈದೆಯರಿಗೆ ಒಳ್ಳೆ ಸಂತರ್ಪಣೆ–ಬಹು ದಿನದ ಬೇಡಿಕೆ ಸತ್ಯನಾರಾಯಣ ವ್ರತ ಎಲ್ಲವೂ ಸುಸೂತ್ರವಾಗಿ ನಡೆದಿದ್ದು ಗೌರಮ್ಮನವರಿಗೆ-ರಂಗಣ್ಣನವರಿಗೆ ನೆಮ್ಮದಿಯನ್ನುಂಟುಮಾಡಿತ್ತು. ರಂಗಮ್ಮನ ಅಣ್ಣ ಎರಡನೇ ದಿನವೇ ಕಳ್ಳೂರುಕಟ್ಟೆಗೆ ಹೊರಟುಹೋದ. ರಂಗಮ್ಮ ನಾಲ್ಕನೇ ದಿನ ಹೊರಡುವುದೆಂದು ನಿಶ್ಚಯಿಸಿದ್ದಳು. ಆದರೆ ಗೌರಮ್ಮ ಬಿಡಲಿಲ್ಲ. ಇನ್ನೂ ಒಂದೆಂಟು ದಿನವಿದ್ದೇ ಹೋಗಬೇಕೆಂದು ಬಲವಂತ ಮಾಡಿದರು. ರಂಗಮ್ಮನಿಗೆ ತಾನೇ ಶಿವಮೊಗ್ಗೆಯಲ್ಲೇನು ಕೆಲಸ? ಇನ್ನು ಮನೆಯಲ್ಲಿ ಬಿಕೋ ಎಂದು ಒಬ್ಬಳೇ ಇರಬೇಕು; ಸಣ್ಣಗೆ ಹಾಡು ಗುನು ಗುತ್ತಾ ಇಷ್ಟು ದಿನ ಮನೆಯಲ್ಲಿ ಬೆಳಗಿದ ಸುಶೀಲೆ ಆ ಮನೆಯಲ್ಲಿ ಇನ್ನಿಲ್ಲ. ಭಣ ಭಣ ಗುಟ್ಟುವ ಮನೆಯಲ್ಲಿ ಒಂಟಿ ಜೀವನ ನಡೆಸುವುದು ಇದ್ದೇ ಇದೆ. ಹೇಗೂ ಬೀಗಿತ್ತಿ ಬಲವಂತ ಮಾಡುತ್ತಾರೆ. ಇನ್ನೂ ಒಂದಷ್ಟು ದಿನ ಇದ್ದರೆ ಸುಶೀಲೆಗೂ ಒಂದೇಬಾರಿ ಹೊರಮನೆಯ ಹೊಸತನ ಕಡಿಮೆಯಾಗಿ ಹೊಂದಿ ಕೊಂಡಿರಲು ಅನುಕೂಲವಾಗುತ್ತದೆಂದು ಇರಲು ರಂಗಮ್ಮ ಒಪ್ಪಿದಳು. ದಿನಗ ಳುರುಳಿದವು ರಂಗಮ್ಮ ವಾಪಸ್ಸು ಹೋದಳು. ಮೂರು ತಿಂಗಳು ಬಿಟ್ಟು ಮಗಳನ್ನು ಶಿವಮೊಗ್ಗೆಗೆ ತವರುಮನೆಗೆ ಕಳಿಸಿಕೊಡಬೇಕೆಂದು ತಿಳಿಸಿ ಹೋದಳು.

ಜನಾರ್ಧನನ ಪಂಚೆ, ಷರಟು, ಅಂಗವಸ್ತ್ರಗಳನ್ನು ಸುಶೀಲೆ ಒಗೆದು ಮಡಿಚಿಟ್ಟಾಗ ಅವನಿಗೆ ದಾಂಪತ್ಯ ಜೀವನದ ಪ್ರಥಮ ಅನುಕೂಲ ಮನ ದಟ್ಟಾಯಿತು. ವರ್ಷಾನುವರ್ಷ ಅವನ ಬಟ್ಟೆ ಅವನು ಒಗೆದುಕೊಂಡು

ಒಮ್ಮೆಲೇ ಅದನ್ನು ಒಗೆದಿಡುವವರೊಬ್ಬರು ಬಂದದ್ದು ಅವನಿಗೆ ದೊಡ್ಡದೊಂದು ಕೆಲಸ ಅರ್ಧಾಂಗಿ ವಹಿಸಿಕೊಂಡಳೆಂದು ಅನ್ನಿಸಿತು. ಸುಶೀಲೆ ಗಂಡನಿಗೆ ಬೇಕಾದ ಸೌಲಭ್ಯಗಳನ್ನು ಒದಗಿಸಿ "ಅವರು ಚೆನ್ನಾಗಿರಬೇಕು" ಎಂಬ ಪ್ರೀತಿಯಿಂದ ಅವನನ್ನು ನೋಡಿಕೊಳ್ಳಲು ಯತ್ನಿಸುವಳು.

ಜನಾರ್ಧನನಿಗೆ ಈ ಎಲ್ಲ ಸೌಲಭ್ಯಕ್ಕಿಂತ ತನ್ನೊಡನೆ ತನ್ನರಸಿ ಮಾತಾಡಬೇಕು, ಸರಸದಿಂದಿರಬೇಕು ಎಂದಾಸೆ. ಸುಶೀಲೆ ಗಂಡನ ಹತ್ತಿರ ಮಾತೇ ಆಡಲೊಲ್ಲಳು. ಮೈಮುರಿಯ ಮನೆಗೆಲಸ ಮಾಡುವಳು. ಗೌರಮ್ಮ ಬೇಡವೆಂದರೂ ಭಾವಿಯಿಂದ ನೀರು ಸೇದುವಳು; ಬೇಡವೆಂದರೂ ಎಲ್ಲರ ಸೀರೆ ರವಿಕೆ, ರಂಗಣ್ಣನವರ ಧೋತ್ರ, ಜನಾರ್ಧನನ ಬಟ್ಟೆಗಳನ್ನು ಒಗೆಯುವಳು. ಮಂಗಳವಾರ ಶುಕ್ರವಾರ ಮನೆಯನ್ನು ಸಾರಿಸಿ ಗುಡಿಸಿ ರಂಗೋಲಿಯನ್ನು ಚಿತ್ರ ವಿಚಿತ್ರವಾಗಿ ಹಾಕುವಳು. ಸದಾ ನಗು ನಗುತ್ತಾ ಲಕ್ಷಣವಾಗಿ ಜಡೆ ಹಾಕಿಕೊಂಡು ಶಿಸ್ತಾಗಿ ಸೀರೆ ಉಟ್ಟು ಎರಡು ಹೂವು ಜಡೆಗೆ ಸಿಕ್ಕಿಸಿಕೊಂಡು ಮನೆಯಲ್ಲಿ ಓಡಾಡುತ್ತಿದ್ದರೆ ದೃಷ್ಟಿ ಬರುವಂತೆ ಕಾಣುವಳು. "ಎಲ್ಲಾ ಸರಿ, ಆದರೇಕೆ ನನ್ನ ಹತ್ತಿರ ಮಾತೇ ಆಡೋಲ್ಲವಲ್ಲಾ ?" ಎಂಬ ಚಿಂತೆ ಜನಾರ್ಧನಯ್ಯನದು.

ಹಗಲಂತೂ ಕೈಗೆ ಸಿಕ್ಕುವುದಿಲ್ಲ. ಸಂಜೆ ಅತ್ತೆ–ತಾಯಿಯೊಡನೆ ಇದ್ದು ಬಿಡುವಳು. ಇನ್ನು ರಾತ್ರಿಯೊಂದೇ ಜನಾರ್ಧನನಿಗೆ ಗತಿ. ದೀಪ ಸಣ್ಣಗೆ ಮಾಡಿ ಮಲಗಿದಳೆಂದರೆ ತೀರಿತು, ನಿದ್ರೆಯೇ ಬಂದಂತೆ ಬಿದ್ದುಕೊಳ್ಳುವಳು. ಜನಾರ್ಧನ ಪಿಸುಮಾತಲ್ಲಿ ಮಾತಾಡಿಸುವ. ಜೋರಾಗಿ ಮಾತಾಡಿದರೆ ಹೊರಕ್ಕೆಲ್ಲಿ ಕೇಳಿಸೀತೋ ಎನ್ನೋ ಭಯ. ಸುಶೀಲೆ ಮಾತೇ ಆಡುತ್ತಿರಲಿಲ್ಲ. ಅಪರೂಪಕ್ಕೆ ಹೂಂ–ಹಾಂ–ಎಂದಾಗ ಜನಾರ್ಧನ ತಾನು ಸ್ವರ್ಗದಲ್ಲಿದ್ದಂತೇ ಭಾವಿಸುವ.

ಸುಶೀಲೆ ಅದೇಕೋ ಜನಾರ್ಧನನೊಡನೆ ಹೆಚ್ಚು ಮಾತಾಡಲು ಹಿಂಜರಿಯುತ್ತಿದ್ದಳು. ಅವನು ಹಾತೊರೆದು ಏನಾದರೂ ನೆಪಮಾಡಿಕೊಂಡು ಮಾತಾಡಿಸಿದರೂ ಮಾತಾಡುತ್ತಿರಲಿಲ್ಲ. ಹೃದಯಾಂತರಾಳದ ಸಣ್ಣ ಸ್ವರ ನಿನ್ನೊಲುಮೆಯ ಗೆಳೆಯ ಸುಬ್ಬರಾಯ ಎಂದು ಪಿಸು ಮಾತಿನಲ್ಲಿ ಇರಿಯುತ್ತಿತ್ತು. ಆ ಆಗಿಹೋದ ಮಾತೇಕೆ ಈಗ ಎಂದು ಮಾರ್ದನಿ ಕೊಡುತ್ತಿತ್ತು.

ವಾಸ್ತವಿಕತೆ. ಸುಶೀಲೆ ಈ ಇರಿತದಿಂದ ಪಾರಾಗಬೇಕೆಂದು ಪ್ರಯತ್ನಿಸು ವಳು. ತನ್ನ ಅನುರಾಗವನ್ನು ಜನಾರ್ಧನನಲ್ಲಿ ಕೇಂದ್ರೀಕರಿಸುವುದು ತನ್ನ ಧರ್ಮವೆಂದುಕೊಳ್ಳುವಳು. ಜನಾರ್ಧನನೂ ತನ್ನ ಹೃದಯವನ್ನೇ ತನಗೆ ಧಾರೆ ಎರೆದಿದ್ದ. ಸುಶೀಲೆ ಎಂದರೆ ಪ್ರಾಣಪಕ್ಷಿಯಂತೆ ಕಾಯುವ. ಅವಳಿಗೆ ಏನು ಪ್ರೀತಿ, ಅವಳಲ್ಲಿ ಏನು ಮಾತಾಡಿದರೆ ನಕ್ಕಾಳು, ಹಸನ್ಮುಖಿಯಾದಾಳು ಎಂದು ಜನಾರ್ಧನ ಅವಳಲ್ಲಿ ಬೆಟ್ಟದಷ್ಟು ಒಲುವು ಚೆಲ್ಲಿ ಆದರಿಸುತ್ತಿದ್ದ.

ಆಗದ ಮಾತು–ಇದು ಕೆಟ್ಟ ಮನಸ್ಸಿನ ಪಿಸುಮಾತು, ಸುಬ್ಬರಾಯನ ಬಗ್ಗೆ ತಾನೇಕೆ ಯೋಚಿಸಬೇಕು? ರಾಜೀವಿಯೊಡನೆ ಚೆಲುವಿನ, ಒಲುವಿನ ಸಂಸಾರ ನಡೆಸುತ್ತಿರುವವನ ಬಗ್ಗೆ ತಾನು ಸಂತೋಷ ವ್ಯಕ್ತಪಡಿಸಿ ಸುಬ್ಬ ರಾಯ ನೆಮ್ಮದಿಯಿಂದಿರುವನೆಂದು ಹಿಗ್ಗಬೇಕು. ಜನಾರ್ಧನನನ್ನು ತುಂಬು ಪ್ರೀತಿಯಿಂದ ತಣಿಸಬೇಕು, ಜೀವನ ಜೇನಾಗಬೇಕೆಂದು ಚಿಂತಿಸುತ್ತಲೇ ಉಪಗಾರಣೆ ತಿಕ್ಕುವಳು. ಉಜ್ಜಿದ ಪಂಚಪಾತ್ರೆಯನ್ನು ಉಜ್ಜುತ್ತಾ ಕುಳಿತ ಸುಶೀಲೆಯನ್ನು ಅನೇಕವೇಳೆ ಗೌರಮ್ಮನವರು ಗಮನಿಸಿದ್ದುಂಟು.

"ಗಂಡನನ್ನು ಧ್ಯಾನಿಸುತ್ತಿದ್ದೀಯೇನೇ?" ಎಂದಾಗ ವಾಸ್ತವ ಪ್ರಪಂಚ ಕ್ಕಿಳಿದು ಸರಸರನೆ ಉಪಗಾರಣೆ ತಿಕ್ಕಿ ಏಳುವಳು.

ಮನೆಗೆ ಜನಾರ್ಧನ ಹಿಂದಿರುಗಿದಾಗ ಕಬ್ಬಿನ ಜಲ್ಲೆ, ಚೀಲದ ತುಂಬಾ ಸಾಮಾನು ಹಿಡಿದೇ ಬಂದ. ಸುಶೀಲೆ ಅವನನ್ನೆದುರುಗೊಂಡು ಅವನ ಕೈಯ್ಯಲ್ಲಿನ ಚೀಲ ತೆಗೆದುಕೊಂಡಳು. ಜನಾರ್ಧನನಿಗೆ ಇಂದ್ರಲೋಕದ ಇಂದ್ರಾಣಿಯೇ ಬಂದು ಎದುರುಗೊಂಡ ಅನುಭವವಾಯ್ತು. ಎಂದೂ ಇಲ್ಲದ ಹೆಂಡತಿಯ ನಗುಮುಖದ ಸ್ವಾಗತ ಅವನನ್ನು ಸ್ವರ್ಗಕ್ಕೇ ಏರಿಸಿತ್ತು. ಗೌರಮ್ಮನವರು "ಏನು ಜನಾರ್ಧನ ಹಬ್ಬದ ಸಾಮಾನು ಎಲ್ಲಾ ಆಗಲೇ ತಂದ ಹಾಗಿದೇ" ಎಂದರು.

"ನಾಳೆ ಹಬ್ಬ, ನೀನೇ ಹೇಳಿದ್ದೆ ತರಬೇಕೂಂತ"

"ಹೇಳಿದ ಕೂಡಲೇ ನೀನು ಎಂದು ತಂದಿದ್ದಿ....ಸುಶೀಲ ನೀನು ಮನೆಗೆ ಬಂದೇ ಬಂದಿ ನೋಡು, ನಮ್ಮ ಜನಾರ್ಧನ ಹೇಳಿದ ಕೂಡಲೇ ಸಾಮಾನು ತರೋಕೆ ಪ್ರಾರಂಭಿಸಿದ"

ಈ ಮಾತಿಗೆ ಸುಶೀಲೆ ನಾಚಿ ನಸುನಕ್ಕಳು. ನಾಳೆ ಭೋಗಿ, ನಾಡಿದ್ದು ಸಂಕ್ರಮಣ, ಎಳ್ಳು ಬೀರುವ ಸಡಗರ. ಸುಶೀಲೆ ಸಕ್ಕರೆ ಅಚ್ಚುಮಾಡಿದ್ದಳು. ಸಕ್ಕರೆ ಕಾಳು ಹಚ್ಚಿದ್ದಳು. ಶಿವಮೊಗ್ಗೆಯ ಶಹರದ ಹುಡುಗಿ ಹೊನ್ನಾಳಿಯ ಮನೆ ಮನೆಮನೆಗೆ ಎಳ್ಳು ಬೀರುವಾಗ ನವೀನತೆ ಇರಬೇಡವೇ ? ನಾಜೂಕಿನ ಕೆಲಸಗಳಲ್ಲಿ ಸುಶೀಲೆ ಹೆಸರುವಾಸಿ. ಕಸೂತಿ ಹಾಕುವುದು, ರಂಗೋಲಿ ಹಾಕುವುದು, ಉಲ್ಲನ್ ದಾರವಲ್ಲಿ ತೂತು ತೂತಿನ ರಟ್ಟಿನ ಮೇಲೆ ಜಿಂಕೆ, ವೃಂದಾವನ, ಕುದುರೆ ಹಾಕುವುದರಲ್ಲಿ ನಿಪುಣೆ. ಹೊನ್ನಾಳಿಯ ಡಾಕ್ಟರ ಹೆಂಡತಿಯನ್ನು ಬಿಟ್ಟರೆ ಇವಳೇ ಊರಿಗೆಲ್ಲಾ ಇಂತಹ ವಿದ್ಯೆಗಳಲ್ಲಿ ನಿಪುಣೆ. ಸಹಸ್ರ ರಂಧ್ರದ ರಟ್ಟಿನಲ್ಲಿ ಹಸಿರು ಉಲನ್ ದಾರದಲ್ಲಿ ನಾಯಿಯನ್ನು ಹಾಕಿ DOG ಎಂದು ಒಂದು ಮೂಲೆಗೂ SUSILA ಎಂದು ಇನ್ನೊಂದು ಮೂಲೆಗೂ ಹೆಣೆದಿದ್ದಳು. ಈ ಚಿತ್ರಕ್ಕೆ ಇಡಿ ಹೊನ್ನಾಳಿಯೇ ಬೆರಗಾಗಿತ್ತು.

ಸಕ್ಕರೆ ಕಾಳು ಬಣ್ಣ ಬಣ್ಣವಾಗಿ ಹಚ್ಚಿದ್ದಳು. ಜಾನ್ಸಿ ಸಕ್ಕರೆಯಲ್ಲಿ ಬಟ್ಟಲು ಮಾಡಿದ್ದಳು. ಎಳ್ಳು ಉಜ್ಜಿ ಡೈಮಂಡ್ ಸಕ್ಕರೆ, ಒಣಕೊಬ್ಬರಿ, ನೆಲಗಡಲೆ, ಪುಠಾಣಿ ಬೆರಸಿ ಬೀರಲು ಸಿದ್ಧಮಾಡಿದ್ದಳು. ಕ್ರೋಷಾದಾರದಲ್ಲಿ ಕಮಲದ ದಳಗಳನ್ನು ಮಾಡಿ ಹೆಣೆದ ಚೌಕವನ್ನು ತಟ್ಟೆಗೆ ಮುಚ್ಚಿಕೊಂಡು ಗುಬ್ಬಳಿಯಾಗಿ ತಲೆ ಬಾಚಿಕೊಂಡು ಮದುವೆಯ ಜರತಾರಿ ಸೀರೆ ಕುಪ್ಪುಸ ಧರಿಸಿ ಕೆನ್ನೆಗೆ ಸವಿರಾಗಿ ತಿಳಿ ಅರಿಶಿನ ಬಣ್ಣ ಮೂಡಿದ್ದು ಸುಶೀಲೆ ರತಿಯಂತೆ ಕಂಗೊಳಿಸಿದಳು. ಊರಿಗೆಲ್ಲಾ ಎಳ್ಳು ಬೀರಿ ಬಂದಾಗ ಗೌರಮ್ಮನವರು ಹಿರಿ ಹಿರಿ ಹಿಗ್ಗಿದರು. ಜನಾರ್ಧನ ಹೆಂಡತಿಯ ಸೌಂದರ್ಯದ ಬೆಡಗಿನ ನಡಿಗೆಯ ವೈಖರಿ ಕಂಡು ವಿಕ್ರಮಾದಿತ್ಯ ಊರ್ವಶಿಯನ್ನು ನೋಡುವಂತೆ ನೋಡಿದ.

ಅತ್ತೆ ಸೊಸೆ, ಗಂಡ ಹೆಂಡತಿ ನಗು ನಗುತ್ತ ಸಂಸಾರ ಸಾಗಿಸಿದ್ದರು. ದಿನಗಳುರುಳಿದಂತೆ ಜನಾರ್ಧನನಲ್ಲಿ ಸುಶೀಲೆಗೆ ಆತ್ಮೀಯತೆ ಹೆಚ್ಚಿತು. ಆದರದಿಂದ ಅವನನ್ನು ನೋಡಿಕೊಂಡಳು. ಶಿವಮೊಗ್ಗೆಗೆ ಒಮ್ಮೆ ಹೋಗಿ ಬಂದಳು. ಇಷ್ಟಿದ್ದರೂ ಸುಶೀಲೆಗೆ ಮಾತ್ರ ಅತ್ತೆ ಗಂಡ ತಾನು ಹೇಳಿದಂತೆ ಕೇಳಬೇಕು. ತನ್ನ ಮಾತು ನಡೆಯಬೇಕೆಂದು ಒಮ್ಮೊಮ್ಮೆ ಹಟ ಸಾಧಿಸುವಳು. ನಿಜಕ್ಕೂ ಸುಶೀಲೆ ಮೇಲು ತೋರಿಕೆಗೆ ಗೌರಮ್ಮ ರಂಗಣ್ಣನವರಲ್ಲಿ ಭಕ್ತಿ ಗೌರವದ

ಸೋಗು ಹಾಕಿದ್ದಳು. ಗೌರಮ್ಮನವರು ಒಮ್ಮೊಮ್ಮೆ ಮಡಿ ಮೈಲಿಗೆಯ ವಿಚಾರಕ್ಕೆ ಏನಾದರೂ ಅಂದರೆ ಇವಳಿಗಾಗದು. ಸದಾ ರೋಗದ ರಂಗಣ್ಣ ಇವಳಿಗೆ ಜಿಗುಪ್ಸೆ ಹುಟ್ಟಿಸಿದ್ದರು.

ಒಂದು ದಿನ ಜನಾರ್ಧನ ಸಂಜೆ ಬಂದಾಗ ಚಿಂತೆಯಿಂದಲೇ ಬಂದ. ಸುಶೀಲೆ ಗಂಡನ ಚಿಂತಾ ಮುದ್ರೆಗೆ ಕಾರಣ ಏನಿರಬಹುದುದೆಂದು ಊಹಿಸಲೇ ಆಗಲಿಲ್ಲ. ಅವನು ನೇರವಾಗಿ ಚಿಕ್ಕಮ್ಮನ ಬಳಿಯೇ ಹೋದ.

"ಚಿಕ್ಕಮ್ಮಾ ನಾನೇನುಮಾಡಲಿ ಈಗ ?" ಎಂದ.

"ಏನಾಗಿದೆ ಈಗ ಹೇಳಬಾರದೇ ?" ಎಂದಳಾಕೆ ಗಾಬರಿಯಿಂದ.

"ಒಂದೂ ತೋಚದು........ನನಗೆ ಹೊಸದುರ್ಗಕ್ಕೆ ವರ್ಗ ಮಾಡಿದ್ದಾರೆ"

"........ಉಸ್ಸಪ್ಪ....ಅಷ್ಟೇತಾನೇ ಏನಾಯಿತೋ ಅಂತ ಗಾಬರಿಯಾಗಿದ್ದೆ"

"ನಾನು ಅಲ್ಲಿಗೆ ಹೋಗಲಾರೆ ಚಿಕ್ಕಮ್ಮ"

"ಸಾಹೇಬರನ್ನ ಕೇಳಿನೋಡು, ವರ್ಗ ಬೇಡ ಅಂತ ನಿನ್ನ ತಾಪತ್ರಯ ತೋಡಿಕೊ"

"ನನ್ನ ಕೇಳೋರ್ಯಾರು ಚಿಕ್ಕಮ್ಮ ? ಅವರವರಿಗೆ ಬೇಕಾದವರಿಗೆ ಅನುಕೂಲ ಮಾಡಿಕೊಡೊ ಸಂಭ್ರಮದಲ್ಲಿ ಇನ್ನೊಬ್ಬರಿಗೆ ಆಗೋ ತೊಂದರೇನೇ ಈ ಸಾಹೇಬರುಗಳು ಲಕ್ಷಿಸೋಲ್ಲ"

"........ಅಮಲ್ದಾರ್ ಸಾಹೇಬರನ್ನ ಕೇಳಿ ನೋಡಬಾರದೇ ?"

"ಬೇಳೀಕಾಳು ಬೇಯೋಲ್ಲ ಚಿಕ್ಕಮ್ಮ........"

"ಹೊರಡಲೇಬೇಕೇನು ?"

"ನಿರ್ವಾಹವೇ ಇಲ್ಲ, ಇಲ್ಲದಿದ್ದರೆ ಕೆಲಸ ಬಿಡಬೇಕು ಅಷ್ಟೆ"

"ಕೆಲಸ ಬಿಡಬೇಡ ಮಹರಾಯ....ಹೊಸದುರ್ಗಕ್ಕೆ ಹೋದರಾಯಿತು ಏನೀಗ ?"

"ಚಿಕ್ಕಪ್ಪನ್ನ, ನಿನ್ನ ಇಬ್ಬರನ್ನೇ ಹೇಗೆ ಬಿಟ್ಟುಹೋಗೋದು ?"

"ಹಾಗಂದರೆ ಹೇಗೆ ಜನ್ನು ? ಮುಂದೆ ಭಡ್ತಿ ಸಿಕ್ಕು ಇನ್ನೂ ದೊಡ್ಡ ಕೆಲಸಕ್ಕೆ ಏರಬೇಕಾದರೆ ಎಲ್ಲಿಗೆ ವರ್ಗ ಮಾಡಿದರೂ ಹೋಗಬೇಕು—ನಮ್ಮ

ದೇನು ಬಿಡು ಹೇಗೋ ನಡೆಯುತ್ತೆ. ನಮಗೋಸ್ಕರ ನೀನು ಕೆಲಸ ಬಿಡೋಕೆ ಹೋಗಬೇಡ"

"........ನಿಮ್ಮನ್ನು ಬಿಟ್ಟು ಅಭ್ಯಾಸವೇ ಇಲ್ಲ ಚಿಕ್ಕಮ್ಮ....ಇಲ್ಲಿದ್ದಾಗ ಹೇಗೋ ಸುಮ್ಮನೇ ಕುಳಿತಿದ್ದರೂ ಚಿಕ್ಕಪ್ಪ ದವಸಧಾನ್ಯ ತಂದು ಹಾಕಿಸು ತ್ತಿದ್ದ....ಬರೋ ನನ್ನ ಇಪ್ಪತ್ತೈದು ರೂಪಾಯಿ ಸಂಬಳದಲ್ಲಿ ಹೇಗೆ ಇರೋಕೆ ಸಾಧ್ಯ ಚಿಕ್ಕಮ್ಮ ?"

"........ಹೇಗೋ ಮಾಡಿಕೋಬೇಕಪ್ಪ....ಏನು ಮಾಡೋದು ಹೇಳು– ಇವರಿಗೂ ಹೇಳಿ ಕೊಂಚ ಹಣ ಕಳಿಸೋಕೆ ಹೇಳ್ತೀನೆ–ನಿಮ್ಮ ತಂದೆಗೂ ಬರಿ, ಸಹಾಯ ಮಾಡ್ತಾರೆ. ಹಾಗೇ ಸಂಸಾರ."

"ಏನೋಮ್ಮ ಒಂದೂ ತೋಚೋಲ್ಲ"

ಎಂದು ಅಧೀರನಾಗಿ ತಲೆಮೇಲೆ ಕೈಹೊತ್ತು ಕುಳಿತ. ಚಿಕ್ಕಪ್ಪನೂ ಧೈರ್ಯ ಹೇಳಿದ. ಸುಶೀಲೆಗೆ ಜನಾರ್ಧನನ ಕಷ್ಟವೇ ಅರ್ಥವಾಗಲಿಲ್ಲ. ಸ್ವತಂತ್ರವಾಗಿ ಇಬ್ಬರೇ ಆನಂದದಿಂದ ಇರುವ ಸುಯೋಗ ತಾನೇ ಕೂಡಿಬಂದಿರು ವಾಗ ಚಿಂತಿಸುತ್ತಾ ಕೂಡುವ ಗಂಡನ ವರ್ತನೆ ಅವಳು ಒಪ್ಪಲಿಲ್ಲ.

ರಾತ್ರಿ ಕೋಣೆಯಲ್ಲಿ ಕಿವಿ ಹಿಂಡುವುದೇ ಮಾರ್ಗವೆಂದು ಸಂಕಲ್ಪಿಸಿ ದಳು. ಸುಶೀಲೆಗೆ ಸ್ವಾತಂತ್ರ್ಯ ಬೇಕಾಗಿತ್ತು. ಇತ್ತೀಚೆಗೆ ಗೌರಮ್ಮನವರ ಅತಿ ಮಡಿ ಸುಶೀಲೆಗೂ ಅವರಿಗೂ ಕೊಂಚ ಬಿಸಿ ಬಿಸಿ ಮಾತು ತಂದಿತ್ತು. ರಂಗಣ್ಣ ನವರು ಕೆಮ್ಮುವ ಝೇಂಕಾರ ಅವಳಲ್ಲಿ ಅಸಹ್ಯವನ್ನು ಹುಟ್ಟಿಸಿತ್ತು. ಬಂದ ಹೊಸದರಲ್ಲಿ ಆದರದ ಆತಿಥ್ಯ ಉಪಚಾರ ನಡೆದು ದಿನಗಳುರುಳಿದಂತೆ ಸುಶೀ ಲೆಗೆ ಕೊಂಚಕೊಂಚವಾಗಿ ಜಿಗುಪ್ಸೆ ಮೂಡಿ ಬಂದಿತ್ತು.

ಈಗ ಯಜಮಾನರೊಡನೆ ಸ್ವತಂತ್ರವಾಗಿ ಸಂಸಾರ ಹೂಡುವ ಅವಕಾಶ ಆದಾಗಿ ಆಗಿರುವಾಗ ಗಂಡನ ಹೇಡಿಯಂತೆ ಹಿಂಜರಿಯುವ ವರ್ತನೆ ಅವಳಿಗೆ ಹಿಡಿಸಲಿಲ್ಲ.

ದೀಪ ಆರಿಸಿ ಪಕ್ಕಕ್ಕೆ ಬಂದು ಮಲಗಿದ ಜನಾರ್ಧನನ ಕೂಡ ಅವಳೇ ಮೊದಲು ಮಾತು ತೆಗೆದಾಗ ಅವನಿಗೆ ಆಶ್ಚರ್ಯವಾಯಿತು. ಮೋಹಿಸುವ ಮುದ್ದು ಮಾತಾಡಿ ಮೈದಡವಿದರೂ ಮಾತಾಡದವಳು ಅವಳೇ ಗಲ್ಲಕ್ಕೆ ಗಲ್ಲ

ಹಚ್ಚಿ ಜೇಸಿನಂತೆ ಮಾತು ಪ್ರಾರಂಭಿಸಿದಾಗ ಜನಾರ್ಧನನಿಗೆ ಆಶ್ಚರ್ಯವಾಗುವುದು ಸಹಜವೇ.

"ಏನು ಸುಶೀಲ.......ತುಂಬಾ ಚಳಿಯೇ"

"ಹೂಂ...."

"..............."

"ಏನು ನಿರ್ಧಾರ ಮಾಡಿದಿರಿ ?"

"ಯಾವ ವಿಷಯ ?"

"ಹೊಸದುರ್ಗಕ್ಕೆ ಹೊರಡುವ ವಿಷಯ"

"ಸುಶೀಲಾ–ನಾವಿಬ್ಬರೇ ಅಲ್ಲಿ ಇರುವುದು ಹೇಗೆ ?"

"ಏಕೆ ಭಯವೆ ?"

"ಭಯದ ವಿಚಾರಕ್ಕಲ್ಲ....ಇನ್ನು ಹೊಸಪರಿ...."

"ನಿಮಗೆ ಕೊಂಚವೂ ತಿಳಿಯೋಲ್ಲಾಂದ್ರೆ"

"ಯಾತಕ್ಕೇ...."

"ಯಾತಕ್ಕೊ—ಬಿಡಿಸಿ ಹೇಳಬೇಕೇನೋ—" ಎಂದು ಗದ್ಗದ ಸ್ವರದಲ್ಲಿ ಹೇಳಿದಳು. ಹೆಂಡತಿಯ ಗದ್ಗದ ಸ್ವರ ಜನಾರ್ಧನನ ಅಂತರಂಗವನ್ನು ಕಲಕಿತು. ತನ್ನ ಸುಂದರಿಯ ಇಚ್ಛೆ ಹೇಗೋ ಹಾಗೇ ನಡೆಯುವುದು ಇಬ್ಬರಿಗೂ ಕ್ಷೇಮವೆಂದುಕೊಂಡ—

"ಅದೇನು ಹೇಳಬಾರದೆ ಸುಶೀಲ ?"

"ನೀವು ಹೊಸದುರ್ಗಕ್ಕೆ ವರ್ಗ ಎಂದಾಗ ನಾನು ಹಿಗ್ಗಿದ್ದೆ"

"ಹೌದೆ ?....ನಿಜವಾಗಲೂ ?"

"ಹೂಂ–ನಾವಿಬ್ಬರೇ ನಿರಾತಂಕವಾಗಿ ಪಾರಿವಾಳಗಳಂತೆ ವಿಹರಿಸಬಹುದೆಂದು...."

"..............."

"ಮನಸ್ಸಿಗೆ ಬಂದ ತಿಂಡಿ ತಿಂದು ಸ್ವೇಚ್ಛೆಯಾಗಿ ವರ್ತಿಸಬಹುದೆಂದು...

"..............."

"ಯಾಕೆ ಮಾತಾಡಬಾರದೇನು ?"

"ಈ ವಿಚಾರ ನನಗೆ ಹೊಳೆಯಲಿಲ್ಲ ಸುಶೀಲ...."

"ಹಾಗಾದರೆ ಸಾಹೇಬರ ಹತ್ತಿರ ವರ್ಗ ಬೇಡವೆಂದು ಬೇಡುವುದಿಲ್ಲ ವಷ್ಟೆ ? "

"ನೀನು ಹುಡುಗಿ–ನಿನ್ನ ಅನುಕೂಲಕ್ಕೇ ಈ ವರ್ಗ ಏಕಾಯಿತೆಂದು ಚಿಂತಿಸಿದ್ದು. ನೀನೇ ಈಗ ವರ್ಗವಾದದ್ದು ನಮ್ಮಿಬ್ಬರ ಸ್ವತಂತ್ರ ಸಂಸಾರ ಸುಖದ ಹಾದಿಗಾಗಿ ಎಂದಾಗ ನಾನೇಕೆ ಒಪ್ಪಬಾರದು ! "

"ನೀವು ತುಂಬಾ ಒಳ್ಳೆಯವರು...." ಎಂದು ಅತ್ತ ತಿರುಗಿದಳು ಸುಶೀಲೆ.

ಮರುದಿನ ಮರುಮಾತೇ ಆಡಲಿಲ್ಲ. ಎಂಟು ದಿನದಲ್ಲಿ ಹೊಸದುರ್ಗಕ್ಕೆ ಹೊರಟು ನಿಂತ. ಮೊದಲು ಮನೆಮಾಡಿ ಆಮೇಲೆ ಕರೆಸಿಕೊಳ್ಳುವ ಹಂಚಿ ಕೆಗೆ ಸುಶೀಲೆ ಒಪ್ಪಲಿಲ್ಲ. ಅಲ್ಲಿನ ಮುಸಾಫರ್ ಶಾಲೆಯಲ್ಲೇ ಇರಬಹುದೆಂದು ಹಾಸಿಗೆ ಟ್ರಂಕು ಪಾತ್ರೆ ಪಡಗದೊಡನೆ ಹೊಸದುರ್ಗಕ್ಕೆ ಗಂಡ ಹೆಂಡತಿ ಹೊರಟೇಬಿಟ್ಟರು.

ಸುಶೀಲೆಯ ಈ ವರ್ತನೆ ಗೌರಮ್ಮನವರಿಗೆ ಅರ್ಥವಾಗಲಿಲ್ಲ. ಏನೋ ಇವಳಲ್ಲಿ ಬದಲಾವಣೆಯಾಗಿದೆ ಎಂದು ಮಾತ್ರ ಅವರು ಕಂಡುಕೊಂಡರು. ಏನು ಮಾತಾಡಲಿಲ್ಲ. ಗಂಡ ಹೆಂಡತಿ ಎಲ್ಲಾದರೂ ಸುಖವಾಗಿರಲಿ ಎಂದು ಹರಸುವುದು ತಮ್ಮ ಕರ್ತವ್ಯವೆಂದು ಹಾಗೇ ಮಾಡಿದರು ರಂಗಣ್ಣ–ಗೌರಮ್ಮ.

## ೧೦

ಪೋಸ್ಟಾಫೀಸಿನಿಂದ ಕೈಯ್ಯಲ್ಲಿ ಕಾಗದ ಹಿಡಿದು ಆ ಮುಂಜಾನೆ ರಂಗಯ್ಯನ ಬಾಗಿಲನ್ನು ಹಾದುಬಂದಾಗ ಸೂರ್ಯನ ಕಿರಣಗಳಿಂದ ಹೊಳೆಯುತ್ತಿದ್ದ ಎದುರುಗಿನ ಬತೇರಿಯನ್ನೇ ಏರಿ ಹಾರಿಬಿಡಲೇ-ಜಿಗಿದುಬಿಡಲೇ ಎನ್ನುವಷ್ಟು ಸಂತೋಷ ಮೂಡಿತ್ತು ಸುಬ್ಬರಾಯನ ಮುಖದಲ್ಲಿ.

ಸುಬ್ಬರಾಯನಿಗೆ ರಾಜೀವಿಯ ತಂದೆಯಿಂದ ಕಾಗದ ಬಂದಿತ್ತು. ತನ್ನಂಥದೇ ಮುಖದ ಪುಟ್ಟ ಪಾಪನನ್ನು ಹೆತ್ತ ಸುದ್ದಿಯನ್ನು ಹೊತ್ತು ತಂದಿತ್ತು ಆ ಪತ್ರ.

ರಾಜೀವಿ ಬಾಣಂತನಕ್ಕೆ ಹೀರೇಹಳ್ಳಿಗೆ ಹೋದಾಗಿನಿಂದ ಅವನ ಮನೆ ಕ್ಲಬ್ಬೇ ಆಗಿತ್ತು. ರಾಮುಸ್ವಾಮಿ, ವಿಠ್ಠಲಸಾ, ಮೇಸ್ತ್ರು ಮುರುಗಯ್ಯನವರು, ಕೊಟ್ರಬಸಯ್ಯ, ಸುಬ್ಬರಾಯ ಇಷ್ಟುಜನ ಸೇರಿ ಇಸ್ಪೀಟು ಆಟ ಹಚ್ಚುವರು. ದಿನವಹಿ ಸಂಜೆ ಸೇರಿದ ಭೈಟಕ್ಕು ರಾತ್ರಿ ಒಂಭತ್ತರ ತನಕ ನಡೆಯುತ್ತಿತ್ತು. ಮುಂದಿನ ವಠಾರದಲ್ಲಿ ಚಾಪೆ ಹಾಸಿಕೊಂಡು ಕುಳಿತಾಗ ಆಟ ರಂಗಿಗೇರಿ ಕೊಟ್ರಬಸಯ್ಯ, ರಾಮುಸ್ವಾಮಿಯುವರ ಬೀಡಿ ತುಂಡುಗಳು ರಾಶಿ ಬೀಳುತ್ತಿದ್ದವು. ಆಟ ಮುಗಿದ ಮೇಲೆ ಅದನ್ನು ಗುಡಿಸಿ ಶುಭ್ರ ಮಾಡುವುದೇ ಬೇಸರದ ಕೆಲಸವಾಗುತ್ತಿತ್ತು.

ಅವತ್ತು ಭಾನುವಾರ ಮುಂಜಾನೆ ಮನೆಗೆ ಕಾಗದ ಹಿಡಿದು ಬಂದಾಗ ಮಾರ್ನಿಂಗ್ ಷೋಗೆ ಚಾಪೆ ಹಾಸಿದ್ದ ರಾಮುಸ್ವಾಮಿ. ಸುಬ್ಬರಾಯನ ಮನೆ ಕೀಲಿ ಕೈಯಿ ಪಕ್ಕದ ಮನೆಯ ರಾಮುಸ್ವಾಮಿ ಬಳಿ ಇರುತ್ತಿತ್ತು. ಪ್ರಸನ್ನ ವದನದೊಡನೆ ಬಂದ ಸುಬ್ಬರಾಯನನ್ನು ನೋಡಿ

"ಏನು ಸುಬ್ಬರಾಯರು....ವಿಷಯವೇನೋ" ಎಂದ.

"ಊರಿಂದ ಕಾಗದ ಬಂತು"

"ಗಂಡೊ–ಹೆಣ್ಣೊ ?"

"ಹೆಣ್ಣು...."

"ಬನ್ರೊ–ಏಳೋ ವಿಠ್ಠಲಸಾ – ಏಳಯ್ಯ ಮುರುಗಯ್ಯ. ಮೊದಲು ನಾರಾಣಪ್ಪನ ಹೋಟಲಿಗೆ ಹೋಗಿ ಕೇಸರಿಭಾತು, ಮಸಾಲೆ ದೋಸೆ ಆಗಲೇ ಬೇಕು. ಸುಬ್ಬರಾಯ ಕೊಡಿಸು ನಡಿ"

"ಆಗಲಿ....ಈಗೇನವಸರ ? "

"ನೀನು ಬೇರೇ ಮಾತೇ ಆಡಬೇಡ. ಮಗಳು ಹುಟ್ಟಿದ್ದು ಹುಡು ಗಾಟವೇ....? "

"ಏನು ಮಹಾ ಬಿಡ್ರಯ್ಯ. ಆದಕ್ಕೆಲ್ಲಾ ಇಷ್ಟು ದಾಂಧಲೆಯೋ ? "

"ನೀನು ಏನಾದರೂ ಅಂದುಕೋ. ಈ ಮಿತ್ರ ಮಂಡಲಿಗೆ ನಿನ್ನಿಂದ ಶಾಂತಿ ಆಗಲೇಬೇಕು"

"ನಡೀರಿ ಮಹರಾಯರ" ಎಂದೆನ್ನುತ್ತಾ ಮನೆಗೆ ಬೀಗ ಹಾಕಿ ನಾರಾ ಣಪ್ಪನ ಹೋಟಲಿಗೆ ಹೊರಟರು. ಹಿಂದಿನ ರಾತ್ರಿ ಇಸ್ಪೀಟನಲ್ಲಿ ಒಂದೂವರೆ ಗೆದ್ದಿದ್ದ ಸುಬ್ಬರಾಯ. ಮಗಳು ಹುಟ್ಟಿದ್ದಕ್ಕೆ ಕೊಡಿಸುವ ತಿಂಡಿ ಖರ್ಚು ಕೈ ಕಚ್ಚದೇ ನಡೆದಿತ್ತು.

"ಇನ್ನೂ ಮೊನ್ನೆ ಮೊನ್ನೆ ಊರಿಗೆ ಕರೆದುಕೊಂಡು ಬಂದಹಾಗಿದೆ. ಆಗಲೆ ಸುಬ್ಬರಾಯನಿಗೆ ಮಗುವೆ ?....ದಿನಗಳು ಎಷ್ಟುಬೇಗ ಹೋಗುತ್ತ ವಪ್ಪ...." ಎಂದ ರಾಮುಸ್ವಾಮಿ ಕೇಸರಿಭಾತು ತಿನ್ನುತ್ತ.

"ದಿನಗಳಿಗೇನು ಹೇಳು ರಾಮುಸ್ವಾಮಿ–ಮೊನ್ನೆ ತಾನೆ ಕೆಲಸಕ್ಕೆ ಸೇರಿದ ಹಾಗಿದೆ, ಆಗಲೆ ಹತ್ತು ವರ್ಷ ಸರ್ವಿಸಾಯಿತು ನನಗೆ" ಎಂದು ಕೇಸರಿಭಾ ತಲ್ಲಿನ ದ್ರಾಕ್ಷಿ ಚಪ್ಪರಿಸುತ್ತಾ ಹೇಳಿದ ಮುರುಗಯ್ಯ.

"ಹತ್ತು ವರ್ಷ ಸರ್ವೀಸಾಯ್ತೆ ಆಗಲೇ ? " ನೀರು ಕುಡಿಯುತ್ತ ಕೇಳಿದ ಸುಬ್ಬರಾಯ.

"ಗೆಯ್ಯೋ ಗುಲಾಮನಿಗೆ ಹಂಗೇನ್ರೀ–ಕತ್ತೆಗೆ ವಯಸ್ಸಾದ್ದು ತಿಳಿತೈ ತೇನ್ರಿ...." ಎಂದ ಕೊಟ್ರಬಸಯ್ಯ.

"ನೋಡಿದೆಯಾ ರಾಮುಸ್ವಾಮಿ ಕೊಟ್ರಬಸಣ್ಣೋರ್ನ ? ನಮ್ಮನ್ನೆಲ್ಲಾ ಕತ್ತೆಗಳೂಂತ ಅಂತಾ ಇದ್ದಾರೆ"

"ಮತ್ತಿನ್ನೇನು ಬಿಡು ವಿಠ್ಠಲಸಾ-ಆರಕ್ಕೇರಲಿಲ್ಲ ಮೂರಕ್ಕಿಳೀಲಿಲ್ಲ. ಅತ್ಲಾಗೆ ಸಾಯಲಿಲ್ಲ ಇತ್ಲಾಗೆ ಉಳೀಲಿಲ್ಲ-ಈ ತಾಬೇದಾರಿ ಹಣೆಬರಾನೇ ಅಷ್ಟು ನೋಡು...." ನೋವಿನಿಂದ ಬಿರುಸಾಗಿ ಹೇಳಿದ ಕೊಟ್ರಬಸಯ್ಯ.

"ನಿನ್ನ್ಯಾರಯ್ಯಾ ಈ ಕೆಲಸಕ್ಕೆ ಸೇರೂಂತ ಅಂದೋನು?"

"ನಮ್ಮಪ್ಪನಿಗೆ ನನ್ನ ಓದಿಸೋಕೆ ದುಡ್ಡು ಇರ್ಲಿಲ್ಲಪಾ-ನಾನು ಬಡವ ನಾದ್ದಕ್ಕೆ ಯಾರಪ್ಪ ಕಾರಣ? ...ಎಸ್ಸೆಲ್ಸಿ ಮೊದಲನೆ ಕ್ಲಾಸಾದ್ರು-ಓದ್ಸೋರಿಲ್ದೆ ಮಾಸ್ತರಗಿರಿ ಮಾಡಬುಕಾತು. ಈ ಇಂಗ್ಲೀಷನೋರ ಸರಕಾರ ಹೋಗಿ ಗಾಂಧಿ ಮಹಾತ್ಮನ ರಾಜ್ಯ ಬಂದರೇ ನಾವು ಉದ್ಧಾರಾದೇವು ನೋಡು...."

"ನೀನು ಬಿಡಪ ಎಲ್ಲಿಂದ ಎಲ್ಲಿಗೋ ಹಾರ್ತಿ. ನಮ್ಮ ಕರ್ಮಕ್ಕೆ ಇಂಗ್ಲೀಷನೋರೇನು ಮಾಡ್ತಾರೆ?"

"ಆ ಕೊರಮರೇ ನಮ್ಮ ಕರ್ಮ ಹೀಂಗೆ ಮಾಡಿರೋರು"

"ಹೋಗಲಿ ಬಿಡು ಮಹರಾಯಿರ, ಏನು ಮಾತಿದು. ಸುಬ್ಬರಾಯನಿಗೆ ಮಗು ಆದ ಸಂತೋಷದ ಮುಹೂರ್ತದಲ್ಲೂ ನಿನ್ನ ಗೋಳಿನ ಗುಮಾಸ್ತೆಗಿರಿ ಮಾಸ್ತರಗಿರಿ ವಿಷಯವನ್ನೇಕೆ ಹೇಳಿಕೊಳ್ಳುತ್ತಿ...."

"ನಿಜ ನಿಜ....ನಮ್ಮಗೋಳು ಇದ್ದೇ ಐತಿ....ಸುಬ್ರಾಯ, ಮಸಾಲಿದ್ವಾಸಿ ಹೇಳಪ್ಪ...." ಎಂದು ನಾಲಿಗೆ ಚಪ್ಪರಿಸಿ ಬೆಟ್ಟಿನ ತುದಿ ನೆಕ್ಕಿದ ಕೊಟ್ರಬಸಯ್ಯ. ತನ್ನರಿವಿಲ್ಲದೇ ಹೀಗೆ ಅನೇಕವೇಳೆ ಅವನು ಮಾತಾಡುವುದುಂಟು.

ಬಂದ ಮಾಣಿಗೆ ಎರಡೆರಡು ಮಸಾಲೆ ದೋಸೆ ತರುವಂತೆ ಹೇಳಿದ ಸುಬ್ಬರಾಯ. ಅದು ಬೆಂದು ಬರುವವರೆಗೆ ಒಂದೊಂದು ಇಡ್ಲಿ ತಿನ್ನತಕ್ಕದ್ದೆಂದು ತೀರ್ಮಾನವಾಯಿತು. ಕೊಟ್ರಪ್ಪನಿಗೆ ಒಂದು ಇಡ್ಲಿಗೆ ಪಾವು ಚಟ್ನಿ ಬೇಕು-ಅನೇಕವೇಳೆ ಅವನು ಇಡ್ಲಿ ಬಿಟ್ಟು ಬರಿ ಚಟ್ನಿಯನ್ನೇ ತಿಂದದ್ದುಂಟು. ಕೆಲವೊಮ್ಮೆ ಮಾಲೀಕರು ಇವನಿಗೆ ಚಟ್ನಿ ಒದಗಿಸಲಾರದೆ ತಬ್ಬಿಬ್ಬಾಡಿದ್ದುಂಟು. ಕೊಟ್ರಪ್ಪನ ಬಯಕೆ ಬಲ್ಲ ಆ ಮಾಣಿ ಬೇರೆ ತಟ್ಟೆಯಲ್ಲಿ ಪುಷ್ಕಳ ಚಟ್ನಿಯನ್ನು ತಂದು ಆತನ ಮುಂದಿಟ್ಟ. ಆ ಒಂದು ಮುಹೂರ್ತದಲ್ಲಿ ತನ್ನ ಚಿಂತೆಯನ್ನೆಲ್ಲಾ ಮರೆತಿದ್ದ ಕೊಟ್ರಪ್ಪ.

ಎರಡೆರಡು ಮಸಾಲೆ, ಸೊಗಸಾದ ಕಾಫಿ ಹೊಡೆದು-'ವರ್ಷ ವರ್ಷವೂ ಇಂತಹುದೇ ತಿಂಡಿಸೇವೆ ನಡೆಯಲಿ ಸುಬ್ಬರಾಯ' ಎಂದು ಹರಸಿದರು ಮಿತ್ರರು.

"ಬೇಡ ಮಹರಾಯಿರ–ಇಷ್ಟುಹೊತ್ತು ಗುಮಾಸ್ತೆಗಿರಿ–ವಿಷಯ ನಮ್ಮ ಬಡತನದ ವಿಷಯ ಟೀಕಿಸಿ ಇನ್ನು ಮನೆ ತುಂಬ ಮಕ್ಕಳೂ ಆದರೆ ದೇವರೇ ಗತಿ.''

"ಮಕ್ಕಳಿದ್ದರೆ ಮನೆ ಚಂದ"

"ಒಂದೋ ಎರಡೋ ಇದ್ದರೆ ಚೆನ್ನ. ಯಾರಿಲ್ಲಾಂದವರು ? ''

"ಕೊಟ್ರಪ್ಪನ್ನ ಕೇಳಿ"

"ನನ್ನೇನು ಕೇಳ್ತೀರಿ ಬಿಡ್ರಪ ಎಂಟು ಜನ, ಒಂಭತ್ನೆ ಬಸರು ನಮ್ಮ ಕುಟುಂಬ''

"ಭೇಷಪ್ಪ....ಸರ್ದಾರ ನೀನು"

''ಧನ ಬಲಾ ಅಂತು ನಮಗಿಲ್ಲ–ಜನ ಬಲಾನಾರ ಬ್ಯಾಡೇನ್ರೊ........ ಅದಕ್ಕೇ ಮಕ್ಕಳಿದ್ದರೆ ಮನೆ ಚಂದಾಂತ ಅಂದದ್ದು...."

"ಹಹಹ........ಚೆನ್ನಾಗಿ ಹೇಳಿದೆ....''

ಎಂದೆನ್ನುತ್ತಾ ಹೋಟಲು ಬಿಟ್ಟಿದ್ದರು. ಹೊಟ್ಟೆ ಭರ್ತಿಯಾದದ್ದು–ಅಂದು ಭಾನುವಾರವಾದದ್ದೂ ಮತ್ತೆ ಇಸ್ಪೀಟಿಗೆ ಕುಳಿತರೆ ಮಧ್ಯಾನ್ಹ ಒಂದು ಘಂಟೆಗೇ ಏಳುವುದೆಂದು ಮಿತ್ರಮಂಡಲಿ ನಿರ್ಧರಿಸಿತು. ಎಲ್ಲರೂ ಮತ್ತೆ ಸುಬ್ಬರಾಯನ ಮನೆಗೆ ಬಂದು ಕುಳಿತರು.

ಆಟ ಸಾಗಿದಾಗ ಸುಬ್ಬರಾಯನ ಮನಸ್ಸು ಹಿರೇಹಳ್ಳಿಯಲ್ಲೇ ಇತ್ತು. ರಾಜೀವಿಯ ಮಗ್ಗುಲಲ್ಲಿ ಮಲಗಿದ ಪುಟ್ಟ ಪಾಪನನ್ನು ನೆನೆಯುತ್ತಿದ್ದ ಸುಬ್ಬ ರಾಯ ಅಂದಿನ ಆಟದಲ್ಲಿ ತಪ್ಪು ತಪ್ಪೇ ಎಲೆ ಬಿಡುತ್ತಿದ್ದ. ಎಂಟಾಣೆ ಚಿಲ್ರೆ ದುಡ್ಡೂ ಕೈ ಕಚ್ಚಿತು.

ಸಂಜೆ ರಾಮುಸ್ವಾಮಿಗಳ ಜೊತೆಗೆ ಊರ ಹೊರಗಿನ ವೆಂಕಟರಮಣ ಸ್ವಾಮಿ ಗುಡಿಗೆ ಹೋಗಿ ಹಣ್ಣುಕಾಯಿ ಮಾಡಿಸಿಕೊಂಡು ಬಂದ.

ನಾಮಕರಣಕ್ಕೆ ಬರಬೇಕೆಂದು ನಾಗರಾಜ ಜೋಯಿಸರು ಪತ್ರ ಬರೆ ದಿದ್ದರು. ಹೋಗುವುದೇ ಬಿಡುವುದೆ ? ಹಾಗೇ ಅಮ್ಮೇನಹಳ್ಳಿಗೆ ಹೋಗಿಬಂದರೆ ಅಣ್ಣನಕಡೆಯಿಂದ ಕೊಂಚ ದುಡ್ಡು ತೆಗೆದುಕೊಂಡು ಬರಬಹುದು. ಹೋದರೆ ಮತ್ತೆ ಹತ್ತು ರೂಪಾಯಿ ಖರ್ಚು. ಮೊನ್ನೆತಾನೆ ಸೀಮಂತಕ್ಕೆ ಬಲವಂತ ದಿಂದ ಕರೆಸಿಕೊಂಡಿದ್ದರು ಮಾವನವರು. ವಿಠ್ಠಲಸಾ ಬಳಿ ಅದಕ್ಕೆ ಮಾಡಿದ

ಸಾಲ ಇನ್ನೂ ಕರಗಿರಲಿಲ್ಲ. ಈಗ ಮೂರು ತಿಂಗಳಲ್ಲಿ ಸಂಸಾರ ಬರುವುದರಲ್ಲಿ ತನ್ನ ಚಿಲ್ರೆಪಲ್ರೆ ಸಾಲ ತೀರಿಸಿಕೊಳ್ಳುವುದೆಂದು ಯೋಚಿಸಿದ್ದ. ಹೋಗಲಿ? ಬೇಡವೆ?

ಸೀಮಂತಕ್ಕೆ ಹೋದಾಗ ತುಂಬು ಬಸುರಿ ರಾಜೀವಿ ತುಂಬಿದ ಹೊನ್ನ ಕಲಶದಂತೆ ಶೋಭಿಸುತ್ತಿದ್ದಳು. ಏನೂ ತೊಂದರೆಯಾಗದೆ ಹೇಗೆ ಪ್ರೈಕಳಿ ದೇನು ಎಂಬ ಚಿಂತೆ ಅವಳ ತುಂಬು ಮುಖದಲ್ಲಿ ಮೂಡಿದ್ದು ಕಂಡ ಸುಬ್ಬ ರಾಯನಿಗೆ ಪುನ ಅಳುಕಿತ್ತು. "ನೀವು ರಜೆ ತೆಗೆದುಕೊಂಡು ನನ್ನ ಹತ್ತಿರಲೇ ಇರಬೇಕು" ಎಂದು ಎದೆಯಲ್ಲಿ ಮುಖ ಹುದುಗಿಸಿ ದುಃಖದಿಂದ ಚಿಕ್ಕ ಕೋಣೆ ಯಲ್ಲಿ ಹೇಳಿದ್ದಳು. "ಏಕೆ ಭಯಬೀಳ್ತಿ ರಾಜಿ?" ಎಂದು ಹೇಳಿದರೂ ಏನಾ ದರೂ ಹೆಚ್ಚು ಕಡಿಮೆ ಆದರೇನು ಗತಿ ಎಂದು ಸುಬ್ಬರಾಯ ಒಂದು ಕ್ಷಣ ತತ್ತರಿಸಿಹೋದ. "ದೇವರಿದ್ದಾನೆ...." ಎಂದು ಅವಳನ್ನು ತಕ್ಕೈಸಿದ್ದ.

ಇದಾದ ಒಂದು ತಿಂಗಳಿಗೆ ಸುಖವಾಗಿ ಪ್ರೈಕಳೆದು ಹೆಣ್ಣು ಶಿಶುವನ್ನು ಹೆತ್ತಳು ಎಂಬ ವಾರ್ತೆ ಬಂದದ್ದು ಸುಬ್ಬರಾಯನಿಗೆ ತಾಯಿ ಮಗುವನ್ನು ನೋಡಬೇಕೆಂದು ಮನಸ್ಸು ಹಾತೊರೆಯುತ್ತಿತ್ತು. ಆರ್ಥಿಕ ಪ್ರಶ್ನೆ ಅವನನ್ನು ತಡೆಗಟ್ಟಿತ್ತು. ನಿರ್ದಿಷ್ಟ ಸಂಪಾದನೆಯ ಗುಮಾಸ್ತಗಿರಿ ಕುಲಕ್ಕೆ ಶಾಪವಿತ್ತು. ತನ್ನ ಅಸಹಾಯಕ ಪರಿಸ್ಥಿತಿಗೆ ಮರುಗಿದ. ಕೊಟ್ರಬಸಪ್ಪನ ವಾದ ಸರ ಣಿಯೇ ಸರಿ–ಗಾಂಧಿರಾಜ್ಯ ಬರುವವರೆಗೆ ಜೀವ ಬಿಗಿ ಹಿಡಿದಿದ್ದರೆ ಸಾಕು– ಎಂದು ಚಿಂತಿಸುವ. ಪಂಜರದಲ್ಲಿನ ಹಕ್ಕಿಯಂತೆ ಹಾರಿಹೋಗದ ಸ್ಥಿತಿಗೆ ಒದ್ದಾಡಿದ.

ಹೋಗಲೇಬೇಕು ಎಂದು ನಿರ್ಧಾರಕ್ಕೆ ಬಂದಾಗ ಮಿತ್ರಮಂಡಲಿಯ ಸದಸ್ಯರು ಒಬ್ಬೊಬ್ಬರಾಗಿ ಬಂದರು. ರಾಮಸ್ವಾಮಿ, ವಿಠ್ಠಲಸಾ ಒಟ್ಟಿಗೆ ಬಂದರು. ಕೊಂಚಹೊತ್ತಿನ ಮೇಲೆ ಕೊಟ್ರಬಸಯ್ಯ, ಮುರುಗಯ್ಯ ಬಂದರು.

"ಏನಪ್ಪ ಚಾಪೆ ಕೊಡವಿ ಹಾಕಲಿಕ್ಕು ಬ್ಯಾಸರಿಕೆ ಏನು?" ಎಂದ ವನು ಮುರುಗಯ್ಯ.

"ಅವನಿಗೆ ಊರಿನ ಚಿಂತೆ ಹತ್ತಿದೆ. ಕಳಿಸಿಕೊಡಬೇಕಾದ್ದು ನಮ್ಮ ಕೆಲಸ—ಇಲ್ಲಿ ಇಸ್ಪೀಟು ಬಿಡಲಾರ, ಅಲ್ಲಿ ಮಗಳನ್ನು ನೋಡಬೇಕು; ಜಿಜ್ಞಾ ಸಕ್ಕೆ ಸಿಕ್ಕಿಬಿದ್ದಿದ್ದಾನೆ ಮನುಷ್ಯ" ಎಂದ ರಾಮಸ್ವಾಮಿ.

"ಸರಿಯಾಗಿ ಊಹಿಸಿದಿ ರಾಮಸ್ವಾಮಿ" ಎಂದ ಸುಬ್ಬರಾಯ.

"ಈ ಹೊತ್ತುಹೋಗದ ಹೈಕಳನ್ನ ಬಿಟ್ಟು ಹೋಗೋಕೆ ಯಾಕೆ ಚಿಂತೆ? ಹೋಗಿಬಾರಯ್ಯ...." ಎಂದ ವಿಠ್ಠಲಸಾ.

"ಕಾಂಚಾಣಂ ಕಾರ್ಯಸಿದ್ಧಿಃ ಅಂತ ಆರ್ಯೋಕ್ತಿ"

"ಬರೋಬರ್ ನಮ್ಮ ಲೈಸಿಗೆ ಬಂದಿಬಿಡಪ ನೀನು. ಅಮ್ಮೇನಹಳ್ಳಿ ಜಮೀನುದಾರ ವತನದಾರಾಂತ ನಾವು ನಿನ್ನ ಅಂತೀವಿ. ನೀನೇ ಪೈಸಾ ಪೈಸಾಂತ ವದ್ದಾಡ್ತಿಯಲ್ಲೋ ಮಹರಾಯ" ಎಂದ ಕೊಟ್ರಬಸಯ್ಯ.

"ನನ್ನ ವತನದಾರಿಕೆ ನನಗೇ ಗೊತ್ತು"

"ಹಂಗಾರೆ, ಸುಬ್ಬರಾಯನ್ನ ಹೆಂಗಪ್ಪ ಹೆಂಡ್ತಿ ಊರಿಗೆ ಕಳಿಸೋದು?" ಎಂದು ಎಲ್ಲರೂ ವಿಠ್ಠಲಸಾನ ಮುಖ ನೋಡಿದರು. ಇದ್ದಿದ್ದರಲ್ಲಿ ಅವನೇ ಸ್ವಲ್ಪ ದುಡ್ಡು ಕಾಸು ಇದ್ದವನು. ಅವಿಭಕ್ತ ಕುಟುಂಬದ ಬಟ್ಟೆ ಅಂಗಡಿಯೂ ಇತ್ತು. ಇವನು ಕಲಿತು ಗುಮಾಸ್ತನಾಗಿದ್ದು ಷೋಕಿಗೆ ಮಾತ್ರ; ದುಡ್ಡಿದ್ದವ ನೆಂದರೆ ತೀರ ಶ್ರೀಮಂತನಲ್ಲ. ಹೊಟ್ಟೆಗೆ ಬಟ್ಟೆಗೆ ಈ ಪಾಪಿ ಮಾಸ್ತರು ಗುಮಾಸ್ತರು ಪಡುವ ಅವಸ್ಥೆ ಅವನಿಗಿರಲಿಲ್ಲ. ವಿಠ್ಠಲಸಾನಿಗೆ ಸ್ನೇಹಿತರೆಲ್ಲಾ ತನ್ನ ಕಡೆ ನೋಡಿದ್ದರ ಕಾರಣ ಅರ್ಥವಾಯಿತು. ಸುಮ್ಮನೆ ನಕ್ಕ.

"ಯಾಕ ನಗ್ತಿ ಬಿಡು ನಮ್ಮನ್ನ ನೋಡಿ. ಕೊಡಪ್ಪಾ ಕೊಡು, ಸುಬ್ಬ ರಾಯ ಕೂಸಿನ್ನ ನೋಡಿಬರಲಿ ಕೊಡು...." ಎಂದ ಕೊಟ್ರಬಸಯ್ಯ.

"ಎಷ್ಟು ಬೇಕು ಸುಬ್ರಾಯ?"

"ಐದು ರೂಪಾಯಿ ಕೊಡು ಸಾಕು-ಹಿಂದನದು ಇನ್ನೂ ಎರಡು ರೂಪಾಯಿ ಬಾಕಿಯಿದೆ ಒಟ್ಟಿಗೆ ಕೊಡ್ತೀನಿ"

"....ಕೊಡಿವಂತೆ ಬಿಡು ಮಹರಾಯ, ಎಲ್ಲಿಹೋಗತ್ತೆ?"

ಎಂದು ಕೋಟಿನ ಒಳಜೇಬಿನಿಂದ ಕವರಿನಲ್ಲಿ ಇಟ್ಟ ಎರಡು ಐದು ರೂಪಾಯಿ ನೋಟುಗಳಲ್ಲಿ ಒಂದನ್ನು ಸುಬ್ಬರಾಯನಿಗೆ ಕೊಟ್ಟ.

ಆ ಕ್ಷಣದಿಂದ ಚೀಲಕ್ಕೆ ಬಟ್ಟೆ ತುರುಕಲಿಕ್ಕೇ ಪ್ರಾರಂಭಿಸಿದ ಸುಬ್ಬರಾಯ. ಸಂಜೆ ಮೇಲುಗಾಡಿಗೇ ಹೊರಡುವುದೆಂದು ನಿಶ್ಚಯಿಸಿದ. ಸುಬ್ಬರಾಯನ ಸಂಭ್ರಮ ಕಂಡು ಇಸ್ಪೀಟಿಗೆ ಕುಳಿತ ಗೆಳೆಯರು ಮನದಣಿಯುವಂತೆ ಹಾಸ್ಯ ಮಾಡಿದರು. ಸುಬ್ಬರಾಯ ಸುಸ್ತಾಗಿಹೋದ ಕೊಟ್ರಯ್ಯನ ಪರಿಹಾಸ್ಯಕ್ಕೆ.

ಮನೆಯ ಬೀಗದಕೈ ರಾಮಸ್ವಾಮಿಯ ಬಳಿಯೇ ಕೊಟ್ಟ. ನಾಲ್ಕು ಗೋಡೆ ಭದ್ರವಾಗಿ ನೋಡಿಕೊಂಡು ಎಷ್ಟು ಹೊತ್ತಾದರೂ ಇಸ್ಪೀಟು ಬಡಿಯುತ್ತಿರಲು ಅವರಿಗೆ ಹೇಳಿದ. "ನೀನು ಮನೆ ಚಿಂತೆ ಬಿಡಪಾ–ಹೆಂಡ್ತಿ ಮುಖದ ಚಿಂತೆ, ಮಗಳ ಮುಖದ ಚಿಂತೆ ಮಾಡು. ನಾವೆಲ್ಲಾ ಈ ಮನೆ ಬರೋಬ್ಬರು ನೋಡ್ತೀವಿ ಬಿಡು" ಎಂದು ಕೊಟ್ರಬಸಯ್ಯ ಮಾತು ಮುಗಿಸಿದಾಗ ಎಲ್ಲರೂ ನಕ್ಕರು. ಸುಬ್ಬರಾಯ ಕಲ್ಲೀಚೀಲ ಹಿಡಿದು ರೈಲ್ವೆ ಸ್ಟೇಷನ್ನಿಗೆ ಹೊರಟು ಹೋದ.

ಪುಟ್ಟ ಕೂಸು ತೊಟ್ಟಿಲಲ್ಲಿ ಮಲಗಿತ್ತು. ತಲೆಯ ಮೇಲೆ ಸೆರಗು ಹೊದ್ದು ಕಣ್ಣಿಗೆ ಕಾಡಿಗೆ ಹಚ್ಚಿಕೊಂಡು ಬೆಳ್ಳಗಿನ ರಾಜೀವಿ ಆ ಕತ್ತಲು ಬಾಣಂತಿ ಕೋಣೆಯಲ್ಲಿ ಕಣ್ಣಲ್ಲಿ ತಾಯ್ತನದ ಹೆಮ್ಮೆಯನ್ನು ಚಿಮ್ಮುತ್ತಾ ಹೊರಸಿನ ಮೇಲೆ ಮಲಗಿದ್ದಳು.

ಮೈ ತುಂಬಿಕೊಂಡು ಚಲುವಾಗಿತ್ತು ಕೂಸು. "ಅಪ್ಪನ ಹಾಗೇನೆ" ಎಂದು ಹೇಳಿದಳು ರಾಜೀವಿ. ಅದರ ಬಿಳಿಯ ಕೈಯ್ಯನ್ನು ತನ್ನ ಕೈಯ್ಯಲ್ಲಿ ಮೃದುವಾಗಿ ಹಿಡಿದು ಆಡಿಸಿದ–ಬೆಚ್ಚಿಬಿತ್ತು ಮಗು. "ಅಮ್ಮನ ಹಾಗೇನೆ ಇದರ ಮೂಗು" ಎಂದ ಸುಬ್ಬರಾಯ.

"ಯಾರ ಹಾಗೋ–ಆಯುಸ್ಸು ತುಂಬಿಕೊಂಡು ಗುಂಡುಕಲ್ಲಿನ ಹಾಗಿದ್ದರೆ ಸರಿ" ಎಂದರು ರಿಂದಮ್ಮನವರು.

ಮಗುವನ್ನು ನೋಡಿದ್ದು ಸುಬ್ಬರಾಯನಿಗೆ ಹೊಸ ಜಗತ್ತನ್ನೇ ಮುಂದಿಟ್ಟಂತಾಯಿತು. ದಾಂಪತ್ಯ ಜೀವನದ ಬೆಸಗೆ ಭದ್ರವಾಗಲು ಈ ಮಕ್ಕಳು ಸೊಗಸಾದ ಗೀಸದಂತಿರುತ್ತವೆ. ಇಬ್ಬರೇ ನಕ್ಕು ನಲಿದು ಇದ್ದವರು ರಾಜೀವಿ–ಸುಬ್ಬರಾಯ. ಸಂಸಾರಕ್ಕೆ ಈ ಹೊಸ ಕೂಸು ದಂಪತಿಗಳ ಪ್ರೇಮದ ಫಲವಾಗಿ ಬಂದು ಸೇರಿತ್ತು.

ಮರುದಿನ ಶಾಸ್ತ್ರೋಕ್ತವಾಗಿ ನಾಮಕರಣ ಮಹೋತ್ಸವ ನಡೆಯಿತು. ಸಂಜೆ ಕಡಲೆ ಗುಗ್ಗುರಿ ಮಾಡಿ ಮುತ್ತೈದೆಯರನ್ನು ಅರಿಶಿನ ಕುಂಕುಮಕ್ಕೆ ಕರೆದಿದ್ದರು. ಹೆಸರೇನಿಡುವುದು ಎಂದು ಪ್ರಶ್ನೆ ಬಂತು. ಅಜ್ಜಿಯ ಹೆಸರು ಪುಟ್ಟಮ್ಮನೆಂದಿಡುವುದು ಸಂಪ್ರದಾಯ. ಕುಲದೇವತೆ ಅಮ್ಮೇನಹಳ್ಳಿ ಪಟ್ಟಾಭಿರಾಮ ದೇವರ ಪಟ್ಟದರಸಿ ವೈದೇಹಿ ಎಂದಿಟ್ಟಾಯಿತು. ವ್ಯವಹಾರಿಕ

ನಾಮೇಣ ಸರಸ್ವತಿಃ ಎಂದು ನಾಗರಾಜ ಜೋಯಿಸರು ಸೂಚಿಸಿದರು. ಊರ ಹಿರಿಯ ಮುತ್ತೈದೆ ಐದುಸಲ ಗುಂಡಪ್ಪನನ್ನೂ ಕೂಸನ್ನೂ ತೊಟ್ಟಿಲ ಕೆಳಗಿಂದ ಮೇಲೆ ಹಾಯಿಸಿ ಒಯ್ದು ಬಲಗಿವಿಯಲ್ಲಿ ಸರಸ್ವತಿ ಸರಸ್ವತಿ ಸರಸ್ವತಿ ಎಂದು ಐದುಬಾರಿ ಕೂಗಿದರು ರಿಂದಮ್ಮ. ಹೆಸರಿಟ್ಟು ಗುಗ್ಗರಿ ಹಂಚಿ ತಿಂದರು. ಮರುದಿನವೇ ಸುಬ್ಬರಾಯ ಅಮ್ಮೇನಹಳ್ಳಿಗೆ ಹೊರಟ. ಮಗಳ ಬಾಣಂತಿತನಕ್ಕೆ ಎಲ್ಲಾ ಅಣಿ ಮಾಡಿಕೊಂಡಿದ್ದರು ರಿಂದಮ್ಮ. ಬಹಳ ಶ್ರಮದಿಂದ ಮಗಳಿಗೆ ಅಜವಾನ, ಬೆಳ್ಳುಳ್ಳಿ, ಖಾರ ಬಿಡದೆ ತಿನ್ನಿಸುವರು. ತುಪ್ಪ ನೀರಿನಂತೆ ಖರ್ಚು ಮಾಡಿದರು. "ಬಾಣಂತನವೇ ಬಹು ಮುಖ್ಯವೇ ತಾಯಿ. ಬಿಗಿಯಾಗಿ ಸೊಂಟಪಟ್ಟಿ ಬಿಗಿದುಕೋ, ಶಾಲು ಹೊದ್ದುಕೋ, ಹೊರಗೆ ಬರಬೇಡ, ಅದು ಇದು ತಿನ್ನಬೇಡ" ಒಂದೇ ಎರಡೇ ಸಾವಿರ ಶಾಸ್ತ್ರ ನೂರು ಪದ್ಧತಿ ಎದುರಿಸಬೇಕಾಯಿತು ರಾಜೀವಿ. "ಈ ಹೆರುವುದೂ ಸಾಕು–ಕತ್ತಲೇ ಕೋಣೆಯ ವಾಸವೂ ಸಾಕು" ಎಂದೆನ್ನುವಳು ರಾಜೀವಿ. "ನಾಳೆ ಮಗುವಿನೊಡನೆ ಗಂಡನ ಮನೆಗೆ ಮತ್ತೆ ರತಿಯಂತೆ ಹೋಗಬೇಕಾದರೆ ಇದೆಲ್ಲಾ ಬೇಕೇಬೇಕು; ನೀನು ಈ ಮೂರು ತಿಂಗಳು ನಾನು ಹೇಳಿದಹಾಗೆ ಕೇಳಲೇ ಬೇಕು" ಎಂದು ಕಟ್ಟುನಿಟ್ಟಿನ ಬಾಣಂತನ ನಡೆಸಿದ್ದರು ರಿಂದಮ್ಮ.

ನಾಗರಾಜ ಜೋಯಿಸರ ಹಿಗ್ಗು ಹೇಳತೀರದು. ಪ್ರತಿನಿತ್ಯ ಮೃತ್ಯುಂಜಯ ಜಪ–ಲಲಿತ ಸಹಸ್ರನಾಮ ಹೇಳಿ ಮಂತ್ರಿಸಿದ ಕುಂಕುಮ ಮಗುವಿನ ತೊಟ್ಟಿಲಿಗೆ ಕೊರಳಿಗೆ ಸವರುವರು. "ಏನಂತದೆ ಪುಟ್ಟುಮರೀ–ಸರ್ಪಸತಮ್ಮನೋರು ಏನಂತಾರೇ....ಪಕ್ಕೂಳೆ ಪಕ್ಕೂಳೆ ಪಾಪ....ಪೋನೆ ಕೂಸುಮರೀ...." ಎಂದು ಮಾತಾಡಿಸುವರು. ಮೆಲ್ಲಗೆ ಎತ್ತಿಕೊಂಡು ಹಾಗೇ ಮತ್ತೆ ಇಳಿಸಿ ಬಿಡುವರು. ಮೊಮ್ಮಗಳನ್ನು ಎಷ್ಟು ಪರಿಯಿಂದ ಮುದ್ದು ಮಾಡಿದರೂ ತೃಪ್ತಿಯಿಲ್ಲ. ರಿಂದಮ್ಮನವರೂ ಮಗುವಿಗೆ ಬಾಣಂತಿಗೆ ದಿನಬಿಟ್ಟು ದಿನ ಎಣ್ಣೆ ನೀರು ಹಾಕಿ ಎರೆಯುವರು. ಅಂತೂ ಮಗಳ ಬಾಣಂತನ ಬಹು ಹುಶಾರಿಯಿಂದ ನಡೆಸಿದ್ದರು.

ಹಿರೇಹಳ್ಳಿಯಿಂದ ಹೊರಟ ಸುಬ್ಬರಾಯ ಅಮ್ಮೇನಹಳ್ಳಿ ತಲುಪಿದಾಗ ಸಂಜೆಯಾಗಿತ್ತು. ನರಳುವ ಸುಮಿತ್ರ, ಅವಳ ತಾಯಿ ಲಕ್ಷ್ಮಣ ಇಷ್ಟು ಜನಕ್ಕೆ ಆ ಮನೆ ಬಿಕೋ ಎನ್ನುವಂತಿತ್ತು ಮುಂದಿನ ತೊಟ್ಟಿಯಲ್ಲಿ ಜಂತಿಯಿಂದ ನೇತು

ಬಿದ್ದ ಲಾಂದ್ರ ಮಂದವಾಗಿ ಉರಿಯುತ್ತಿತ್ತು. ಸುಬ್ಬರಾಯ ಒಳಮನೆಯ ತನಕ ಹೋದರೂ ಬಂದದ್ದನ್ನು ಯಾರೂ ಗಮನಿಸಲಿಲ್ಲ. ಲಕ್ಷ್ಮಣ ಮನೆಯಲ್ಲಿರಲಿಲ್ಲ. ಕೈಚೀಲವನ್ನು ಗೋಡೆಗೊರಗಿಸಿ ಕೋಟು ಟೋಪಿ ತೆಗೆದಿಟ್ಟು ಬಚ್ಚಲ ಮನೆಗೆ ಹೋಗಿ ಕೈಕಾಲು ತೊಳೆದು ಅತ್ತಿಗೆ ಮಲಗಿದ್ದ ಕೊಠಡಿಗೆ ಇಣಿಕಿದ. ಆಗಲೇ ಸುಬ್ಬರಾಯ ಬಂದದ್ದು ವೆಂಕಮ್ಮನ ಕಣ್ಣಿಗೆ ಬಿದ್ದದ್ದು. "ಯಾವಾಗ ಬಂದಿರಪ್ಪಾ....ಸುಮಿತ್ರಾ, ಸುಬ್ಬರಾಯರು ಬಂದಾರೆ ನೋಡು" ಎಂದು ಹೇಳಿದಾಗ ನಿಸ್ತೇಜಳಾಗಿ ಬಿದ್ದ ಅತ್ತಿಗೆ ಕಣ್ಣು ಹೊರಳಿಸಿ ನೋಡಿದಳು. ಆಗ ನೋಡಿದಾಗ್ಗೂ ಈಗ್ಗೂ ತುಂಬಾ ಸವೆದುಹೋಗಿದ್ದಳು ಸುಮಿತ್ರ. ಕಣ್ಣುಗಳು ಭಾವಿಯಲ್ಲಿನ ನಕ್ಷತ್ರದಂತೆ ಹೊಳೆದವು. ತಕ್ಷಣವೇ ಕಣ್ಣು ತುಂಬಾ ನೀರು ತಂದುಕೊಂಡಳು. ವಾಸಿಯಾಗದ ಕೆಟ್ಟ ಖಾಯಿಲೆಯಿಂದ ತಾನು ಬದುಕುವುದಿಲ್ಲವೆಂದು ಅವಳಿಗೆ ತಿಳಿದಿತ್ತು. ಈ ಔಷಧಿ ಪಥ್ಯವೆಲ್ಲಾ ವ್ಯರ್ಥವೆಂದು ಅವಳಿಗೆ ಗೊತ್ತು. ಅತ್ತಿಗೆಯ ಕರುಣಾಜನಕ ಸ್ಥಿತಿ ಕಂಡು ಸುಬ್ಬರಾಯನ ಕಣ್ಣೂ ತೇವವಾಯಿತು.

ನರಳುತ್ತಲೇ ಕೇಳಿದಳು ಸುಮಿತ್ರೆ.

"ಮಗೂ ಬಾಣಂತಿ ಆರೋಗ್ಯವಾಗಿದ್ದಾರೆಯೆ ?...."

"ಹೂಂ–ಚೆನ್ನಾಗಿದ್ದಾರೆ"

"ಇನ್ನು ಮೂರು ತಿಂಗಳಿಗೆ ಇಲ್ಲಿಗೂ ಬಂದು ಒಂದೆರಡು ದಿನವಿದ್ದು ಹೋಗಲಿಕ್ಕೆ ಹೇಳಪ್ಪ–ಮಕ್ಕಳಿಲ್ಲದ ಈ ಮನೆಯಲ್ಲಿ ಮಗು ಅತ್ತು–ನಕ್ಕು ನಲಿದುಹೋದರೆ ಅದೇ ಸಂತೋಷ.

"....ಇನ್ನೂ ಮೂರು ತಿಂಗಳ ಮಾತಲ್ಲವೇ–"

"....ಹೌದು ಮೂರು ತಿಂಗಳ ಮಾತು. ನಾನು ಅಲ್ಲಿನತನಕ ಇದ್ದರೆ ತಾನೇ ಕೂಸು ಮನೆಯಲ್ಲಿ ನಲಿದದ್ದು ನೋಡಲಿಕ್ಕೆ...."

"ಹಾಗೇಕೆ ಅನ್ನುತ್ತೀರಿ ಅತ್ತಿಗೆ....ಅಷ್ಟುಹೊತ್ತಿಗೆ ಗುಣಮುಖವಾಗುತ್ತೆ"

"ನಿನಗೊಂದು ಭ್ರಾಂತು............ಈ ಕೆಟ್ಟ ಖಾಯಿಲೆ ನನ್ನನ್ನು ಕೊಂಡೊಯ್ಯೊತನಕ ಬಿಡುತ್ತದೆಯೇ ? "

"ಸಾಕು ಸುಮ್ಮನಿರು ಸುಮಿತ್ರ, ಶುಕ್ರವಾರ ಸಂಜೆ ಎಂಥವಿದು ಸಾವಿನ ಮಾತು...."

"ಹಿರೇಹಳ್ಳಿಲಿ ಎಲ್ಲಾ ಸೌಖ್ಯವೇ"

"ಹೂಂ...."

"ಎಷ್ಟುದಿನ ರಜ ತೊಗೊಂಡಿದ್ದೀಯ ?"

"ನಾಳೆ ಹೊರಡಬೇಕು"

"ಯಾವಾಗ ಬಂದರೂ ಹೀಗೇ ನೀನು....ನಾಲ್ಕುದಿನ ಇದ್ದು ಹೋಗ ಬಾರದೆ ?"

"ತಾಬೇದಾರಿ–ರಜವೇ ಸಿಕ್ಕೋಲ್ಲ....ಅಣ್ಣ ಎಲ್ಲಿ ಮನೇಲಿಲ್ವೆ ?"

"....ಎಲ್ಲಿ ಹೋದರೋ! ಈಗ ಬಂದಾರು. ಕೈಕಾಲು ತೊಳೆದು ಊಟ ಕ್ಕೇಳು, ಹಸಿದು ಬಂದಿರಬೇಕು"

"ಅಣ್ಣನೂ ಬರಲೀಳು"

"ಅವರಿನ್ನು ಯಾವಾಗ ಬರುವರೊ....ಅಮ್ಮಾ ಬಡಿಸುತ್ತೀಯಾ ?"

"ಏಳಪ್ಪಾ, ಮೊದಲು ನಿಮ್ಮ ಊಟವಾಗಲಿ"

ಅತ್ತಿಗೆಯನ್ನು ಕಂಡು ಸುಬ್ಬರಾಯನಿಗೆ ದುಃಖ ಉಕ್ಕೇರಿ ಬಂತು. ನರಳಿ ನರಳಿ ನೊಂದು ಬೆಂದಿದ್ದಳು ಸುಮಿತ್ರೆ. ಅವಳಿಗೆ ಬದುಕುವೆನೆಂಬ ನಂಬಿಕೆ ಇರಲಿಲ್ಲ. ಶಿವಮೊಗ್ಗೆಯ ದೊಡ್ಡ ಆಸ್ಪತ್ರೆಗೆ ಕರೆದೊಯ್ಯದೆ ಅಣ್ಣ ಇವಳನ್ನು ಈ ಸ್ಥಿತಿಗೆ ತಂದದ್ದೆಂದು ಲಕ್ಷ್ಮಣನ ಮೇಲೆ ಕ್ರೋಧವೂ ಬಂದಿತ್ತು ಸುಬ್ಬರಾಯನಿಗೆ.

ವೆಂಕಮ್ಮ ಒಂದು ಮಾತೂ ಆಡದೆ ಬಡಿಸಿದರು. ಬಡಿಸಿದ ರೀತಿಯಲ್ಲೇ ಸುಬ್ಬರಾಯನಿಗೆ ತನ್ನ ಕೋಪವನ್ನು ತೋರಿಸಿದಳು. ಸುಬ್ಬರಾಯನ ನೆರಳು ಕಂಡರೆ ಆಕೆಗಾಗದು–ಅಲ್ಲದೆ ಅವನಿಗೆ ಮಗುವಾದದ್ದನ್ನೂ ಸಹಿಸಿರಲಿಲ್ಲ. ತನ್ನ ಮಗಳು ಹಾಸಿಗೆ ಹಿಡಿದು ಮಕ್ಕಳಿಲ್ಲದೆ ನರಳುತ್ತಿರುವಾಗ ಸುಬ್ಬರಾಯ ಹೆಂಡತಿ ಮಕ್ಕಳೊಡನೆ ಸೌಖ್ಯದಿಂದ ಇರುವುದು ಈಕೆಗೆ ಹಿಡಿಸದು. ಸುಬ್ಬ ರಾಯ ತನ್ನ ಮನೆಗೇ ತಾನು ಪರಕೀಯನಂತೆ ಆಗಿದ್ದ.

ಹಾಕಿದ್ದನ್ನು ಸಾಕು ಬೇಕೆನ್ನದೆ ಸರಬರನೆ ಸುರಿದುಕೊಂಡು ಎದ್ದ. ಈ ಹೊತ್ತಿಗೆ ಲಕ್ಷ್ಮಣನೂ ಬಂದ. ಗೂಟಕ್ಕಿದ್ದ ಕೋಟು, ಗೋಡೆ ಗೊರಗಿ ಸಿದ ಚೀಲದಿಂದ ಸುಬ್ಬರಾಯ ಬಂದಿರಬೇಕೆಂದು ತರ್ಕಿಸಿದ. ಮೇಲಾಗಿ

ಹಿರೇಹಳ್ಳಿಯಿಂದ ಬಂದ ರೈತನೊಬ್ಬ ಸುಬ್ಬರಾಯ ಅಲ್ಲಿಗೆ ಬಂದಿದ್ದನ್ನೂ ತಿಳಿಸಿದ್ದ. ಸುಬ್ಬರಾಯ ಬಂದಿರುವುದು ದುಡ್ಡಿಗೆ ಎಂದೂ ಲಕ್ಷ್ಮಣನಿಗೆ ಗೊತ್ತಿತ್ತು.

"ಯಾವಾಗ ಬಂದೆ ?"

"ಸಂಜೆಗೆ"

"ಮಗೂ ಬಾಣಂತಿ ಆರೋಗ್ಯವೇ ?"

"ಹೂಂ"

"ಊಟವಾಯಿತೇ ?"

"ಇದೇ ಈಗ ಮಾಡಿದೆ"

ಎಂದಿಷ್ಟೆ ಮಾತಾಡಿ ತಾನೂ ಊಟ ಮಾಡಲು ಅಂಗಿ ಬಿಚ್ಚಿ ಕೈಕಾಲು ತೊಳೆದುಕೊಳ್ಳಲು ನೀರುಮನೆಗೆ ನಡೆದ. ಸದಾ ನರಳುವ ಸುಮಿತ್ರೆಯಿಂದ ಲಕ್ಷ್ಮಣನ ದಾಂಪತ್ಯ ಜೀವನ ಕುಂಠಿತವಾಗಿತ್ತು. ಹೆಣ್ಣಿನ ಬಯಕೆ ಅವನಲ್ಲಿ ತಾಂಡವಾಡುತ್ತಿತ್ತು. ಯತ್ನವಿಲ್ಲದೆ ಏಕಾಕಿತನ ಅನುಭವಿಸುತ್ತಿದ್ದ. ಸುಬ್ಬರಾಯನಿಗೆ ಮಗುವಾದದ್ದು ಒಂದು ಕ್ಷಣ ತನ್ನ ಮನೆ ಭಣ ಭಣ ಗುಟ್ಟುತ್ತಿದ್ದುದು ಅವನಲ್ಲಿ ಅತೀವಯಾತನೆಯನ್ನುಂಟುಮಾಡಿಸಿತ್ತು.

ತನ್ನ ಬಾಳು ಹೀಗಾಯಿತೇ ಎನ್ನುವ ಚಿಂತೆ ಅವನಲ್ಲಿ ಎಲ್ಲರ ಮೇಲೆ ಕೋಪ ಬರುವಂತೆ ಮಾಡಿತ್ತು. ಈಚೀಚೆಗೆ ಅವನನ್ನು ಮಾತಾಡಿಸಲೇ ಭಯವಾಗುವುದು. ಸುಮಿತ್ರೆಯೊಡನೆ ಕೂಡ ಕೆಲವೊಮ್ಮೆ ಹೀಗೇ ವರ್ತಿಸಿ ಮೊದಲೇ ನರಳುವವಳಿಗೆ ಬೆಂಕಿ ಇಟ್ಟಂತೆ ಮಾಡುವ.

ಯಾರಾದರೂ ಒಬ್ಬರು ಅವನೊಡನೆ ಧೈರ್ಯದಿಂದ ಮಾತಾಡುವವರಿದ್ದರೆ ಅವರು ವೆಂಕಮ್ಮನವರು. ತನ್ನ ಮಗಳ ಆರೈಕೆಗೆಂದು ಬಂದವಳು ಮತ್ತೆ ಗಂಡನ ಮನೆಗೇ ಹೋಗಿರಲಿಲ್ಲ. ಸುಮಿತ್ರೆಯ ತಂದೆ ಹಿರೇಕೆರೂರಿನಿಂದ ಆಗಾಗ್ಯೆ ಬಂದು ಹೋಗುತ್ತಿದ್ದರು ಅಷ್ಟೆ. ಅಳಿಯನ ಮನೆಯಿಂದ ಒಮ್ಮೆ ಗಂಡ ಬಂದು ಹೋಗುವಾಗಲೂ ದವಸಧಾನ್ಯ, ಜೊತೆಗೆ ಹಣ ಕೂಡ ಸಾಗಿಹೋಗುತ್ತಿತ್ತು. ಅದೇಕೆ ಲಕ್ಷ್ಮಣ ನೋಡಿಯೂ ಸುಮ್ಮನಿರುತ್ತಿದ್ದ ?

ಮರುದಿನ ಮುಂಜಾನೆ ಸುಬ್ಬರಾಯ ತಿಪ್ಪಯ್ಯನನ್ನು ನೋಡಲು ಹೋದಾಗ ತಿಪ್ಪಯ್ಯ ಮನೆಯ ಮುಂದಿನ ಜಗುಲಿಯ ಮೇಲೇ ಕುಳಿತಿದ್ದ.

"ಸುಬ್ರಾಯಾ ಹೋಳಿಗೆ ಎಂದು ಹಾಕಿಸುತ್ತಿ ?" ಎಂದೇ ಆಹ್ವಾನಿಸಿದ.

‘‘ಹೆಣ್ಣು ಕೂಸಿಗೆಂಥಾ ಹೋಳಿಗೆ ತಿಪ್ಪಯ್ಯ ? ”

“ಹೆಣ್ಣುಮಕ್ಕಳೇ ಉತ್ತಮ ಸುಬ್ರಾಯಾ, ನಿನಗೆ ಗೊತ್ತಿಲ್ಲ, ನಾಳೆ ತಂದೆ ತಾಯಿ ಅಂತ ಅಭಿಮಾನವಿಟ್ಟು ಮಾಡೋವು, ಅವೇನೆ–ಈ ಗಂಡು ಗಂಡು ಅಂತ ಆಕರಾಸ್ತಿ ಪಡೂದಷ್ಟೆ. ನಾಳೆ ಹೆಂಡತಿ ಬಂದಳೂಂದರೆ ತೀರಿತು, ಅಪ್ಪ ಅಮ್ಮನ್ನೇ ಮನೆಬಿಟ್ಟು ಹೊರಗಟ್ಟುತ್ತವೆ’’

“ಯಾರೋ ಹಾಗೆ ಮಾಡಿದರೆ ಎಲ್ರೂ ಹಾಗೇ ಇರ್ತಾರೆಯೋ ? ’’

‘‘ನೋಡುವಂತಿ ನಿನಗೂ ಗಂಡುಮಗು ಆಗೇ ಆಗುತ್ತೆ–ಹೆಣ್ಣಂತೂ ಇದ್ದೇಇದೆಯಲ್ಲ. ನಾಳೇ ನೀನೇ ಹೇಳ್ತೀ ನಿನ್ನ ಅನುಭವ....ಮತ್ತಿನ್ನೇ ನಪ್ಪ ಸಮಾಚಾರ ? ’’

‘‘ಏನೂ ಕಾಣೆ....ಹೊನ್ನಾಳಿಗೆ ಹೋಗಿದ್ದಿರಾ ? ”

‘‘ಜನಾರ್ಧನ ಹೊಸದುರ್ಗಕ್ಕೆ ಹೆಂಡ್ತೀನ್ನ ಕರೆದುಕೊಂಡು ಹೋದದ್ದು ಗೊತ್ತುತಾನೇ....? ”

“ಅದು ಗೊತ್ತಲ್ಲಾ, ಆಗಲೆ ಶಾನೆ ದಿನವಾಯ್ತು”

“ಅಲ್ಲವೇ–ಕಾಗದಾನೂ ಬರೆದಿದ್ದ. ಬರ‍್ತ ಶಿವಮೊಗ್ಗಾದಲ್ಲಿ ಇಳಿಲಿಕ್ಕೇ ಆಗಲಿಲ್ಲ–ಅಲ್ಲಿ ಎಲ್ಲಾ ಸೌಖ್ಯಾಂತ್ಲೆ ಕಾಣುತ್ತೆ”

“ಚೆನ್ನಾಗಿದ್ದಾರೆ – ಶ್ರೀಧರಮೂರ್ತೀದು ಲಕ್ಷ್ಮೀನಾರಾಯಣಗುಡಿ ಭಜನೆ, ಹರಿಕಥೆ ಭರ್ಜರಿಯಾಗಿ ನಡೆದಿದೆ. ತ್ರಿಪುರಸುಂದರಮ್ಮ ಮತ್ತೆ ಗರ್ಭಿಣಿ....”

“....ಕಾಗದ ಬರೆದಿದ್ದಳು–ಹೆಸರಿಗೆ ನಾನು ಅಣ್ಣ. ಅವಳು ನನಗೆ ಮಾಡಿರೋ ಉಪಕಾರದಲ್ಲಿ ಅವಳಿಗೆ ಬೇಕಾದಾಗ ಕೊಂಚ ಸಹಾಯ ಮಾಡೋಕೂ ಯೋಗ್ಯತೆ ಇಲ್ಲ ನನಗೆ....’’

“ನಿನ್ನ ಸಹಾಯವೇನು ಅವಳಿಗೆ ಬೇಡ ಸುಬ್ಬು. ಇದ್ದಿದ್ದರಲ್ಲೇ ಸದಾ ನಗು ನಗುತ್ತಾ ನೆಮ್ಮದಿಯ ಸಂಸಾರಾಂದರೆ ಶ್ರೀಧರಮೂರ್ತೀದು ನೋಡು–ಗಂಡಹೆಂಡ್ತಿ ಏನು ಅನ್ಯೋನ್ಯ,. ಏನು ತಾನು ! ”

‘‘ಅದು ನಿಜವಾದ ಮಾತು....ಅದೇ ನಮ್ಮ ಲಕ್ಷ್ಮಣನದು ನೋಡಿ”

ಲಕ್ಷ್ಮಣನ ವಿಚಾರ ಬಂದಕೂಡಲೆ ತಿಪ್ಪಯ್ಯ ಜಿಗುಪ್ಸೆಯ ಭಾವದ ಬೇಸರದ ಸ್ವರದಲ್ಲಿ ಹೇಳಿದ.

"ನೀನು ಏನಾದರೂ ತಿಳಿದುಕೊ, ನಿಮ್ಮ ಲಕ್ಷ್ಮಣನದು ನನಗೆ ಸರಿಬೀಳ ಲಿಲ್ಲ........ಅಮ್ಮೇನಹಳ್ಳಿ ಆನಂದರಾಯರ ವಂಶದಲ್ಲಿ ಇಂಥಾ ಮನುಷ್ಯ ಹುಟ್ಟ ಬಾರದಾಗಿತ್ತು–ಅವರ ಧಾರಾಳತನ ಅವರ ದೈವಭಕ್ತಿ! ಅವರು ಎಂದರೆ ಸುತ್ತಾ ಹಳ್ಳಿಗಳಲ್ಲಿ ಎಂಥಾ ಮರ್ಯಾದೆಯಿತ್ತು! ಆನೆ ಹೊಟ್ಟೇಲಿ ನರಿ ಹುಟ್ಟಿದ್ಹಾಗೆ ಹುಟ್ಟಿದ........"

"ಅವನಲ್ಲಿ ಅಂಥಾದ್ದೇನು ಕಂಡಿರಿ ತಿಪ್ಪಯ್ಯ?"

"ಏನೋಪ್ಪಾ, ಬೆಕ್ಕು ಕಣ್ಣು ಮುಚ್ಚಿಕೊಂಡು ಹಾಲು ಕುಡಿದ ಸಮಾ ಚಾರದ ಹಾಗಿದೆ....ಅವನ ಅತ್ತೇನ್ನ ಮೊದಲು ಮನೆಬಿಟ್ಟು ಓಡಿಸಿದರೆ ಸುಮಿತ್ರೆ ಖಾಯಿಲೆ ವಾಸಿಯಾಗುತ್ತೆ ನೋಡು"

"ಇದೇನು ಹೀಗಂತೀರ ತಿಪ್ಪಯ್ಯ-ಮಗಳ ಶುಶ್ರೂಷೆಗೇಂತ ಆಕೆ ಬಂದದ್ದು ....ಅವಳಿಂದಲೇ ಮಗಳಿಗೆ ಖಾಯಿಲೆ ವಾಸಿಯಾಗಲ್ಲಾಂದ್ರೆ ನನಗೆ ಆಶ್ಚರ್ಯ"

"ಅಣ್ಣ ತಮ್ಮಂದಿರ ಮಧ್ಯ ಜಗಳ ತಂದಾಂತ ನನಗೆ ಕೆಟ್ಟ ಹೆಸರು ಬಂದರೂ ಚಿಂತೆಯಿಲ್ಲ. ಇವತ್ತು ಕೈಯ್ಯಲ್ಲಿ ಕಡ್ಡಿ ಮುರಿದು ಕೊಟ್ಟಹಾಗೆ ಹೇಳ್ತೀನಿ ಕೇಳು–ನಿನ್ನ ಪಾಲು ನೀನು ತೆಗೆದುಕೊಂಡುಬಿಡು, ಇಲ್ಲದಿದ್ದರೆ ಅದು ಕರಗಿ ಹಿರೇಕೆರೂರು ಸೇರುತ್ತೆ"

"........ವೆಂಕಮ್ಮ ಹಾಗಾದರೆ ಮಗಳ ಮನೆ ಕರಗಿಸೋಕೆ ಬಂದಿ ದ್ದಾಳೆಯೆ?"

"ಅವಳ ತಪ್ಪಲ್ಲ ಅದು ಮೂರ್ಖ ನಿನ್ನ ಅಣ್ಣ ಇದಾನಲ್ಲಾ ಅವನ ತಪ್ಪು. ಮಾವ ಒಂದೊಂದುಸಲ ಬಂದಾಗಲೂ ಭಂಡಿ ಭಂಡಿ ದವಸಧಾನ್ಯ ಕಳಿ ಸೋದೆ? ನೀನು ಹೊಸದಾಗಿ ಸಂಸಾರ ಹೂಡಲಿಕ್ಕೆ ನಾಲ್ಕು ಪಾತ್ರೆ ಕೊಡ ಲಿಕ್ಕೆ ಹಿಂದು ಮುಂದು ನೋಡಿದನಲ್ಲಾ, ಹಿರೇಕೆರೂರಿನಲ್ಲಿ ಯಾರದೋ ನೆಂಟರ ಮದುವೆ ಅಂತ ಇವನ ಮಾವ ಪಾತ್ರೆಪಡಗ ಬಂಡಿ ತುಂಬಾ ಒಯ್ದನಲ್ಲಾ, ಇನ್ನೂ ಬರ್‍ತಾ ಇದೆ ಅಲ್ಲವೆ? ಅವಿಭಕ್ತ ಕುಟುಂಬದ ಒಡವೇನ ಹೇಗೆ ಬೇಕೆಂದರೆ ಹಾಗೆ ಕಾರುಬಾರು ಮಾಡಲಿಕ್ಕೆ ನೀನು ಅವನಿಗೆ ಪರವಾನಗಿ ಕೊಟ್ಟಿದ್ದೀ ಏನು?"

"ಈ ವಿಷಯವೆಲ್ಲಾ ನನಗೆ ಗೊತ್ತೆ ಇಲ್ಲ?"

"ಗೊತ್ತಾಗತ್ತಪ್ಪಾ ಗೊತ್ತಾಗತ್ತೆ. ಸರ್ಕಾರಿ ಕೆಲಸದಲ್ಲಿ ಊರೂರು ಅಲೀತಾಯಿದ್ದರೆ ಹೇಗೆ ಗೊತ್ತಾಗಬೇಕು ? ನಿನ್ನದೂ ಬೆಳಿಯೋ ಸಂಸಾರ–ಬರೋ ಸರ್ಕಾರಿ ಸಂಬಳ ಯಾಮೂಲಿಗೂ ಸಾಲದು. ಹಳ್ಳಿಕಡೆ ವರಮಾನ ಸರಿಯಾಗಿ ನಿನಗೆ ಬರೋಕೆ ಮಾರ್ಗ ಮಾಡಿಕೊ. ಇದೇ ನನ್ನ ಎಚ್ಚರಿಕೆ"

"ನೀವು ಹೇಳೋದು ನಿಜ....ಹಾಗಂತ ಒಂದೇಸಲ ಈ ವಿಷಯ ಎತ್ತಿದರೆ ರೇಗಿ ರೇಗಿ ಬೀಳ್ತಾನೆ ಲಕ್ಷ್ಮಣ–ನೋಡಿದಿರೊ ಇಲ್ಲೊವೇ ಹೋದಸಲ ಒಂದು ನಲವತ್ತು ರೂಪಾಯಿಗೆ ಎಷ್ಟು ರದ್ಧಾಂತ ಮಾಡಿದ...."

"ಈ ವಿಷಯಗಳ ಹಣೇಬರವೇ ಅಷ್ಟು. ರಗಳೆ ರದ್ಧಾಂತವಿಲ್ಲದೆ ಸುಸೂತ್ರ ನಡೆಯುವ ವ್ಯವಹಾರವೇ ಅಲ್ಲ ಇದು, ತಿಳೀತೆ? ಧೈರ್ಯವಾಗಿ ನೀನೂ ಕೂಗಾಡಿವರೇ ನೀನು ಹಾಳಾಗದೆ ಉಳೀತಿ. ಈ ಮಾತು, ನಾಗರಾಜ ಜೋಯಿಸರ ಮೇಲಿನ ಅಭಿಮಾನ, ರಾಜಮ್ಮನ ಮೇಲಿನ ಪ್ರೀತಿಯಿಂದ ಹೇಳ್ತಿದ್ದೇನೆ ಸುಬ್ರಾಯ. ಆನಂದರಾಯರ ಗುಣ ನಿನ್ನಲ್ಲೂ ನಾನು ಕಂಡುಕೊಂಡಿದ್ದರಿಂದ ಈ ಸೂಚನೆ ಮುಂದಿಡ್ತಾ ಇದ್ದೀನಿ, ಅರ್ಥವೇ ? "

ಎಂದು ಕೋಪದಿಂದಲೇ ತಿಪ್ಪಯ್ಯ ಅನ್ನದಿದ್ದರೆ ಸುಬ್ಬರಾಯನಿಗೆ ಈ ವಿಷಯ ಚೆನ್ನಾಗಿ ನಾಟುತ್ತಿರಲಿಲ್ಲ. ಲಕ್ಷ್ಮಣನ ಮೇಲೆ ತಮ್ಮನೆದುರಿಗೇ ಇಷ್ಟು ನೇರವಾಗಿ ಪಾಲಾಗುವ ವಿಷಯ ತಿಪ್ಪಯ್ಯ ನಮೂದಿಸಿದ್ದರಲ್ಲಿ ವ್ಯವಹಾರ ಮಿತಿಮೀರಿ ಹದಗೆಟ್ಟಿರಬೇಕೆಂಬುದರ ಅರಿವು ಬಂತು.

"ಅದಕ್ಕೇ ನಾನೀಗ ಬಂದದ್ದು. ಕೊಂಚ ದುಡ್ಡು ಬೇಕಿತ್ತು, ಹೇಗೂ ನಾಮಕರಣಕ್ಕೆ ಬಂದಿದ್ದೆ ಹಾಗೇ ಅಣ್ಣನ್ನ ಕೇಳಿಯೂ ಹೋಗೋಣಾಂತ್ಲೆ ಬಂದೆ"

"ನೀನು ಬರೀ ದುಡ್ಡು ಗಿಡ್ಡು ಕೇಳಿದೆಯೋ ನಲವತ್ತೂ ಐವತ್ತು ಕೈಗೆ ಹಚ್ಚಿ ತಾತ್ಕಾಲಿಕ ಉಪಶಮನ ಮಾಡಿಬಿಡ್ತಾನೆ. ನೀನು ಆಸ್ತಿಯಲ್ಲಿ ಸರಿಯಾಗಿ ಎರಡುಭಾಗ ಮಾಡೂಂತಲೇ ಕೇಳು"

"....ಮಾವನವರನ್ನ ಒಂದು ಮಾತು ಕೇಳಿ ನೋಡಲೇ ? "

"ನಾನಾಗಲೇ ಈ ಮಾತು ಅವಕಾಶ ಸಿಕ್ಕಾಗಲೆಲ್ಲಾ ಹೇಳಿದ್ದೀನಿ. ಅವರೇಕೊ ಈ ವಿಚಾರಕ್ಕೆ ತಲೆಹಾಕಲು ಹೆದರುತ್ತಾರೆ–'ಅವರವರ ಪಾಡು, ಬೆಳೆದು ದೊಡ್ಡವರಾದ ಹುಡುಗರು' ಅವರವರ ಜವಾಬ್ದಾರಿ ಅವರಿಗೆ ಗೊತ್ತಿಲ್ಲವೇ ?

ಮೇಲಾಗಿ ನಾನು ಈ ವಿಷಯಕ್ಕೆ ಮೂಗು ಚಾಚುವುದು ಚೆನ್ನಾಗಿರೋಲ್ಲ–ಆನಂದರಾಯರ ಆಸ್ತಿ ನನ್ನ ಅಳಿಯನಿಗೇ ಬರೋಹಾಗೆ ಮಾಡಿದ ಅನ್ನೊ ಅಪವಾದ ಬೇಡ' ಎಂದುಬಿಟ್ಟರು...."

"....ಹಾಗೆ ಇನ್ನೊಬ್ಬರ ವಿಚಾರಕ್ಕೆ ತಲೆಹಾಕುವ ಸ್ವಭಾವವೇ ಅವರದಲ್ಲ...."

"ಇರೋ ವಿಚಾರ ಹೇಳಿದ್ದೀನಪ್ಪ–ಸೂಕ್ಷ್ಮ ತಿಳಿದು ಜಾಗರೂಕತೆಯಿಂದ ಇತ್ಯರ್ಥಮಾಡಿಕೊಂಡರೆ ಅನ್ಯಾಯವಾಗಿ ಪೋಲಾಗದೆ ಆಸ್ತಿ ನ್ಯಾಯವಾಗಿ ಸೇರಬೇಕಾದಕಡೆ ಸೇರಿದ ಹಾಗಾಗುತ್ತೆ"

"ಇದಕ್ಕೆ ನಿಮ್ಮ ಸಹಾಯ ಅಗತ್ಯ ಬೇಕಾಗುತ್ತೆ"

"ನೀನು ಪ್ರಾರಂಭಮಾಡು. ಊರಿನ ನಾಲ್ಕುಜನ ಹಿರಿಯರನ್ನ ಕರೆಸಿ ಪಂಚಾಯಿತಿ ಮಾಡೋಣ–ಲೆಖ್ಖಾಚಾರಕ್ಕೇನಪ್ಪಾ, ನ್ಯಾಯವಾದ ಮಾರ್ಗಕ್ಕೆ ಎಂದಿಗೂ ಅಪಜಯವಿಲ್ಲ...."

"ಸರಿ....ಇವತ್ತೆ ಮಾತು ಎತ್ತಲೋ ? "

"ಚೆನ್ನಾಗಿದೆಯಯ್ಯ! ಪ್ರತಿಯೊಂದನ್ನೂ ನಾನೇ ಹೇಳಿ ಕೊಡಬೇಕೇ? ಮಾತು ಪ್ರಾರಂಭಿಸು ದುಡ್ಡು ಬೇಕೂನ್ನು–ಅವನಿಂದ ತೆಗೆದುಕೊಂಡ ಹಣದ ಲೆಖ್ಖಾಚಾರವನ್ನೆಲ್ಲಾ ಸರಿಯಾಗಿ ಬರೆದಿಟ್ಟುಕೊ. ನಾಳೆ ಅಷ್ಟು ಕೊಟ್ಟೆ ಇಷ್ಟು ಕೊಟ್ಟೆ ಅಂತ ಅವನು ಅಂದಾಗ ನೀನು ತಾರತಮ್ಯ ಆಡಬಾರದು.... ಆಯಿತೇ ? ಈಗ ನಿನಗೆ ಹೇಗೂ ರಜವಿಲ್ಲ–ಇನ್ನು ಮೂರು ತಿಂಗಳಲ್ಲ ಆರು ತಿಂಗಳಾಗಲಿ ಪರವಾಗಿಲ್ಲ. ನಿನ್ನ ಅಭಿಪ್ರಾಯ ಅವನಿಗೆ ಮನದಟ್ಟು ಮಾಡು. ನಿಧಾನವಾಗಿ ರಜ ತೊಗೊಂಡು ಬಂದು ಕೆಲಸವನ್ನೆಲ್ಲಾ ತೀರಿಸಿಕೊಂಡು ಹೋಗುವಿಯಂತೆ...."

"....ಸರಿ ಹಾಗೇ ಮಾಡ್ತೇನೆ" ಎಂದು ಎದ್ದುನಿಂತ.

"ಶುಭಮಸ್ತು...." ಎಂದು ತಿಪ್ಪಯ್ಯ ಸುಬ್ಬರಾಯನನ್ನು ಕಳಿಸಿಕೊಟ್ಟ.

ಬಹುದಿನದಿಂದ ಮನಸ್ಸಿನಲ್ಲಿದ್ದ ವಿಷಯ ಅವನು ಸುಬ್ಬರಾಯನಿಗೆ ತಿಳಿಸಿದ್ದು ಮೈ ಹಗುರಾದಂತೆ ಆಗಿತ್ತು. ಲಕ್ಷ್ಮಣನ ವರ್ತನೆ ಅವನನ್ನು ಹೀಗೆ ಮಾಡಿತ್ತು. ಲಕ್ಷ್ಮಣನಿಗಿಂತ ವೆಂಕಮ್ಮನ ಚರ್ಯೆ ತಿಪ್ಪಯ್ಯನಿಗೆ ಸರಿಬಿದ್ದಿರಲಿಲ್ಲ. ಏನೋ ಮೈಲಿಗೆ, ಎಲ್ಲಿಯೋ ನಡೆಯಬಾರದ ಅಸಹ್ಯ ಕ್ರಿಯೆಗೆ

ಅವಳು ಕಾರಣ ಎಂದು ಅವನ ಒಳ ಮನಸ್ಸು ಕೊರೆಯುತ್ತಿತ್ತು. ಸುಮಿತ್ರೆಯ ವಾಸಿಯಾಗದ ಖಾಯಿಲೆಯ ದೆಸೆಯಿಂದ ಲಕ್ಷ್ಮಣನ ಪುರುಷತ್ವ ಹೆಣ್ಣೊಂದರ ಸಾಮೀಪ್ಯವನ್ನು ಬಯಸುತ್ತಿದ್ದು ಆ ಹೆಣ್ಣು ವೆಂಕಮ್ಮ ಆಗಿರಬಹುದೇ ಎಂಬ ಸಂದೇಹ ತಿಪ್ಪಯ್ಯನಲ್ಲಿ ಮೂಡಿದ್ದೇ ಇಷ್ಟೆಲ್ಲ ಸುಬ್ಬರಾಯನ ಸಂಗಡ ಮನಬಿಚ್ಚಿ ಮಾತಾಡುವ ಸಾಹಸ ಅವನು ಮಾಡಿದ್ದ. ಇದರಿಂದ ಲಕ್ಷ್ಮಣನ ಸಂಸಾರವೂ ಚೆನ್ನಾಗಿರಬಹುದೆಂಬ ನಂಬಿಕೆ ತಿಪ್ಪಯ್ಯನಿಗೆ.

ತಿಪ್ಪಯ್ಯನ ವಾದಸರಣಿಗೆ ಸೋತ ಸುಬ್ಬರಾಯ ಅಣ್ಣನನ್ನು ಆಸ್ತಿ ಪಾಲಿನ ವಿಷಯ ಹೇಗೆ ಕೇಳುವುದು ಎಂದು ಯೋಚಿಸುತ್ತಲೇ ಮನೆಯ ಕಡೆ ಬಂದ.

''ಎಲ್ಲಿಗೆ ಹೋಗಿದ್ದೆಯೋ....ಕಾಫಿ ಕೂಡ ಕುಡಿಯದೆ'' ಎಂದು ಕೇಳಿದ ಹೊರಗಡೆ ಕಟ್ಟೆಯ ಮೇಲೆ ಕುಳಿತ ಲಕ್ಷ್ಮಣ. ಏನೋ ಯೋಚಿಸುತ್ತಾ ಬಂದ ಸುಬ್ಬರಾಯನಿಗೆ ಲಕ್ಷ್ಮಣನ ಮಾತು ಕೇಳಿ ಅವನನ್ನು ನೋಡುತ್ತಲೇ ತಿಪ್ಪಯ್ಯನ ಮಾತೆಲ್ಲಾ ಮರೆತು ಅಣ್ಣನೆಂಬ ಪೂಜ್ಯಭಾವ ಬಂದು...."ಇಲ್ಲೇ ....ಹೋಗಿದ್ದೆ" ಎಂದು ಸರಸರನೆ ಒಳಕ್ಕೆ ಹೊರಟುಹೋದ. ಸುಮಿತ್ರೆಯ ತಾಯಿಯ ಬೊಗಸೆ ಗುಳ್ಳೆ ಕಣ್ಣುಗಳು ನಡುಮನೆಯಿಂದ ಇವನನ್ನು ನುಂಗುವಂತೆ ನೋಡಿದವು.

ವೆಂಕಮ್ಮ ಸುಮಿತ್ರೆಯಂಥ ಬೆಳೆದ ಮಗಳ ತಾಯಿಯಾಗಿದ್ದರೂ–ಮಾಸದ ಅಂಗಸೌಷ್ಟವವಿತ್ತು. ಸುಮಿತ್ರೆಯಂತೆಯೇ ಅವಳ ರೂಪು ಕೂಡ ಅಂದವೇಲೆ ಲಕ್ಷ್ಮಣನ ಕಣ್ಣಿಗೆ ಆಕೆ ಅನೇಕವೇಳೆ ಸುಮಿತ್ರೆಯಂತೇ ಕಂಡಿದ್ದರಲ್ಲಿ ಆಶ್ಚರ್ಯವೇನು ?

ಅದೊಂದು ಕಾಳರಾತ್ರಿ. ಲಕ್ಷ್ಮಣ ತನ್ನ ಹೊರಸಿನಲ್ಲಿ ವಿವರಿಸಲಾರದ ವ್ಯಥೆಯಿಂದ ಹೊರಳಿದ್ದ. ಏನೋ ಕೆಟ್ಟ ಯೋಚನೆ! ಬಾರಿಬಾರಿಗೆ ಅವನ ಮೈಯಿ ಹೆಣ್ಣೊಂದರ ಅಪ್ಪಿಗೆ ಬಾಯಿ ತೆರೆದು ನರನರಗಳು ಚೀರುತ್ತಿದ್ದವು. ಹಳ್ಳಿಯೆಲ್ಲಾ ಸದ್ದಡಗಿ ಮಲಗಿತ್ತು. ಮೌನ ಶಾಂತಿ ನೆಲಸಿ ಧರಣಿಯೇ ಶಾಂತಿಯಿಂದ ಮಲಗಿದಾಗ ಲಕ್ಷ್ಮಣನಲ್ಲಿ ಅಶಾಂತಿ ತಾಂಡವಾಡುತ್ತಿತ್ತು. ಮನಸ್ಸಿನ ಮೊರೆತ ರಾಕ್ಷಸನ ಕೂಗಿನಂತಿತ್ತು.

....ಮನುಷ್ಯ ಮನುಷ್ಯನಾದಾಗ ಎಲ್ಲವೂ ಚೆನ್ನ. ಮನಸ್ಸಿನ ರಾಕ್ಷಸೀ ಪ್ರವೃತ್ತಿಗೆ ಸೋತು ಮೈಯೊಡ್ಡಿದಾಗ ಗಂಡು ಹೆಣ್ಣೆಂಬ ಪ್ರಶ್ನೆಯೊಂದಲ್ಲದೆ ಅತ್ತೆ ಅಳಿಯನೆಂಬ ವಿವೇಚನೆಯೇ ಇರುತ್ತಿರಲಿಲ್ಲ....

....ಆ ಕಾಳರಾತ್ರಿ–ಮಧ್ಯರಾತ್ರಿಯಲ್ಲಿ ಚಂದ್ರಮ ನಡುನೆತ್ತಿಯಲ್ಲಿ ಬಂದು ಶೀತಳ ಕಿರಣ ಸುಬ್ಬರಾಯನ ಹೊರಸಿನ ಮೇಲೆ ಚೆಲ್ಲಿದಾಗ ಹೆಣ್ಣೊಂದು ಎದ್ದುಬಂದು ಅವನ ತೋಳತೆಕ್ಕೆಯಲ್ಲಿ ಹುದುಗಿತ್ತು........

ಮೊದಲು ಚಕಿತನಾಗಿ ಲಕ್ಷ್ಮಣ ಬೆದರಿದ್ದರೂ ಆ ಹೆಣ್ಣು ಹೇಸದೇ ಮೈತೋರಿ ಮಲಗಿದಾಗ ಲಕ್ಷ್ಮಣನ ತೃಷೆಗೆ ದೇವತೆ ಅಮೃತವನ್ನು ನೀಡಿದಂತಿತ್ತು....ನಿರಾಕರಿಸಲು ಸಾಧ್ಯವೇ ಆಗಲಿಲ್ಲ ...

....ಅಂದಿನಿಂದ ಇಂದಿನತನಕ ಲಕ್ಷ್ಮಣನನ್ನು ಅದೇ ಮೈಯ್ಯ ಮೋಹ ಒಲುವಿನ ಬಲೆಗೆ ಸಿಲುಕಿಸಿತ್ತು....

ಮನೆಯಲ್ಲಿ ವೆಂಕಮ್ಮನಲ್ಲದೆ ಬೇರಾರೂ ಅವನ ಮುಂದೆ ಮಾತಾಡುತ್ತಿರಲಿಲ್ಲ. ಅವಳದೇ ಅಧಿಕಾರವಾಣಿಯಾದದ್ದರಲ್ಲಿ ಆಶ್ಚರ್ಯವೇನು ?

ಪಾಪ, ಸಾಧ್ವಿ ಸುಮಿತ್ರೆ ಮಾತ್ರ ಸವೆಯುತ್ತಿದ್ದಳು. ಈ ವಿಷಯಗಳೊಂದೂ ಅವಳನ್ನು ತಲುಪುವಂತಿರಲಿಲ್ಲ. ಅವಳ ಕೆಲಸ ದಿನಗಳನ್ನೆಣಿಸಿ ಜವರಾಯನನ್ನು ಎದುರುಗೊಳ್ಳುವುದು ಮಾತ್ರವಾಗಿತ್ತು. ಲಕ್ಷ್ಮಣ, ದೇವರ ಪೂಜೆಗೆ ಕುಳಿತಾಗ ಹಲಿಗಾರತಿ ನೀಲಾಂ ಜನಗಳು ಎದ್ದುಬಂದು ಮುಖಕ್ಕೆ ರಾಚಿದಂತಾಗುವುದು. ಮುಖ ರಾವು ಬಡಿದಂತೆ ಆಗಿತ್ತು. ಒಮ್ಮೆ ಜಾರಿದ ಲಕ್ಷ್ಮಣನಿಗೆ ಏರಿ ಏರುವುದಕ್ಕೇ ಆಗಲಿಲ್ಲ. ಅಧಃಪಾತಾಳದತ್ತ ಸಾಗಿದ್ದ.

೧೧

ಸುಬ್ಬರಾಯನ ನಿರೀಕ್ಷೆಗೆ ನಿಲುಕದ ಸಂಗತಿ ಎಂದರೆ ಲಕ್ಷ್ಮಣನೇ ಅವನಿಗೆ ಮೊದಲು ಹಣ ಕೊಟ್ಟದ್ದು; ಬೆಳೆಯ ವಿಚಾರ, ತೋಟದ ವಿಚಾರ ಹೇಳಿದ್ದು. ಅಣ್ಣನಲ್ಲಾದ ಮಾರ್ಪಾಟಿಗೆ ಅವನೇ ಆಶ್ಚರ್ಯಪಟ್ಟಿದ್ದ. ಅದೇ ಗುನುಗಿನಲ್ಲಿ ರೈಲು ಚಿತ್ರದುರ್ಗ ಸೇರಿದ್ದೂ ಗೊತ್ತಾಗಲಿಲ್ಲ. ಎಷ್ಟುಪರಿಯಿಂದ ಯೋಚಿಸಿದರೂ ಸಮಸ್ಯೆ ಬಗೆ ಹರಿಯಲಿಲ್ಲ.

ತನಗಾದರೂ ಅದೇತಾನೇ ಬೇಕಾದದ್ದು ? ಅಣ್ಣನ ಬಗ್ಗೆ ತಿಪ್ಪಯ್ಯ ಅಷ್ಟು ಕಠಿಣವಾಗಿ ಮಾತಾಡಿದ್ದು ಏಕೆ ? ವೆಂಕಮ್ಮನವರ ಮೇಲೇಕೆ ಅಷ್ಟು ಸಿಟ್ಟು ತಿಪ್ಪಯ್ಯನಿಗೆ ? ನಿಜವಾಗಿಯೂ ತನ್ನ ಮನೆ ತೊಳೆಯಲು ಬಂದು ಸೇರಿದ ದೆವ್ವಗಳೇ ಲಕ್ಷ್ಮಣನ ಅತ್ತೆ ಮಾವಂದಿರು ? ಸುಮಿತ್ರೆಯ ಸಾವನ್ನು ಲೆಕ್ಕಿಸದ ಪಿಶಾಚಿ ಸ್ವರೂಪಿಯೇ ವೆಂಕಮ್ಮ ? ಈ ಒಂದೊಂದು ಪ್ರಶ್ನೆಯೂ ಸುಬ್ಬರಾಯನ ಮನಸ್ಸನ್ನು ಮುತ್ತಿ ಕಾಡಿದವು. ತನ್ನೊಡನೆ ಅಣ್ಣನ ಪ್ರಸ್ತುತ ವರ್ತನೆ ಪಾಲನ್ನು ಕಬಳಿಸುವ ಪಾಶದ ಪ್ರಥಮ ಕುಣಿಕೆಯೆ ? ನಂಬಿಸಿ ಮೋಸಮಾಡುವವನೆ ಲಕ್ಷ್ಮಣ ?

ತಂದೆ ತಾಯಿ ಇದ್ದಾಗಿನ ನಂದಗೋಕುಲದಂಥ ಮನೆಯನ್ನು ಈಗಿನ ಸ್ಥಿತಿಗೆ ಹೋಲಿಸಿದರೆ ಅತೀವ ಯಾತನೆ ಅವನಲ್ಲಿ ಹುಟ್ಟಿದ್ದು ಸಹಜವೆ. "ಹೂಂ–ನನ್ನ ಹುಶಾರಿ ನಾನಿದ್ದರಾಯಿತು; ತಿಪ್ಪಯ್ಯ ಹೇಳಿದಂತೆ ಬೇಗ ಪಾಲಿನ ವ್ಯವಸ್ಥೆ ಆದರೇ ಉತ್ತಮ" ಎಂದುಕೊಂಡ. "ಹುಟ್ಟು ಹುಟ್ಟುತಾ ಅಣ್ಣಾ ತಮ್ಮ, ಬೆಳೀತ ಬೆಳೀತಾ ದಾಯಾದಿಗಳು" ಅಂದ ತಿಪ್ಪಯ್ಯನ ಮಾತು ಅವನನ್ನು ಕಾಡಿತು.

ಮಗುವಿನ ಅಳು ನಗುವಿನ ವಿವರ ರಾಜೀವಿಯ ತೊದಲು ಭಾಷೆಯ ಕಾಗದದಲ್ಲಿ ಬರೆದಿರುತ್ತಿತ್ತು. ರಾಜೀವಿಗೆ ಸರಿಯಾಗಿ ಬರೆಯಲಿಕ್ಕೂ ಬಾರದು. ಮಾತು ಮಾತ್ರ ಗಿಣಿಯ ಹಾಗೆ ಆಡುವಳು, ರಸವತ್ತಾಗಿ ಕಾಗದವನ್ನೂ ಬರೆಯಬಾರದೇ ಎಂದುಕೊಳ್ಳುವ ಸುಬ್ಬರಾಯ.

ದಿನಗಳುರುಳಿದವು. ಮೂರು ತಿಂಗಳೂ ತುಂಬಿತು ಮಗುವಿಗೆ. ಸುಮಿತ್ರೆಯ ಇಷ್ಟದಂತೆ ಅಮ್ಮೇನಹಳ್ಳಿಗೆ ಹೋಗಿ ಅಲ್ಲಿ ಒಂದು ತಿಂಗಳಿದ್ದು ನಾಲ್ಕನೇ ತಿಂಗಳಲ್ಲಿ ಚಿತ್ರದುರ್ಗಕ್ಕೆ ಬರುತ್ತೇನೆಂದು ರಾಜೀವಿ ಕಾಗದಾ ಬರೆದಿದ್ದಳು.

ಅದಕ್ಕೆ ಉತ್ತರವಾಗಿ ಅಮ್ಮೇನಹಳ್ಳಿಯಲ್ಲಿ ಹದಿನೈದು ದಿನವಿದ್ದು—ಶಿವಮೊಗ್ಗೆಯಲ್ಲಿ ತ್ರಿಪುರಸುಂದರಿಯ ಮನೆಯಲ್ಲಿ ಒಂದಿಷ್ಟು ದಿನವಿದ್ದು ಚಿತ್ರದುರ್ಗಕ್ಕೆ ಬರುವಂತೆ ಸುಬ್ಬರಾಯ ಬರೆದಿದ್ದ. ಈ ಉತ್ತರ ರಾಜೀವಿಗೆ ಸೂಕ್ತವಾಗಿ ಕಂಡಿತು.

ಅದರಂತೆ ರಾಜೀವಿ ತಂದೆಯೊಡನೆ ಅಮ್ಮೇನಹಳ್ಳಿಗೆ ಬಂದಳು. ಲಕ್ಷ್ಮಣ ಬಲವಂತ ಮಾಡಿದರೂ "ಕೆಲಸವಿದೆ ಮತ್ತೆ ಮಗಳನ್ನು ಶಿವಮೊಗ್ಗೆಗೆ ಕರೆದೊಯ್ಯುವಾಗ ಬರಬೇಕಾಗುತ್ತೆ, ಆಗ ಒಂದುದಿನ ಇದ್ದರಾಯಿತು" ಎಂದು ಹೇಳಿ ನಾಗರಾಜಜೋಯಿಸರು ಮರುದಿನವೇ ಹಿರೇಹಳ್ಳಿಗೆ ಮರಳಿದರು. ಪುಟ್ಟ ಪಾಪ ಸರಸ್ವತಿಯನ್ನು ನೋಡಿ ಸುಮಿತ್ರೆಗೆ ಅಮಿತಾನಂದವಾಯಿತು. ಬಹು ಪ್ರಯಾಸದಿಂದ ಎದ್ದು ಕೂತು ನಾಲ್ಕು ನಿಮಿಷ ಅವನ್ನ ತೊಡೆಯ ಮೇಲೆ ಹಾಕಿಕೊಂಡಾಗ ಕಣ್ಣಲ್ಲಿ ಆನಂದ ಭಾಷ್ಪ ಮೂಡಿತ್ತು. ಆರೋಗ್ಯವಾಗಿ ಬೆಳೆದ ಆ ಕೂಸು ಬಚ್ಚಬಾಯಿ ಬಿಚ್ಚಿ ಮಳ್ಳು ಬಂದಾಗ ನಕ್ಕರೆ ಹೊಸ ಜಗತ್ತನ್ನೇ ಕಾಣದ ಜಡರು ಜೀವನದಲ್ಲಿ ಜೇನುಮಳೆ ಕರೆದಂತಾಗುವುದು ಸುಮಿತ್ರೆಗೆ.

ಗಂಡನಿಗೆ ಹೇಳಿ ಕಾಡಿಬೇಡಿ ತನ್ನ ಚಿನ್ನದಬಳೆ ಕರಗಿಸಿ ಕೂಸಿಗೆ ಗುಂಡಿನಬಳೆ ಸರ—ಕಾಲಿಗೆ ಬೆಳ್ಳಿ ಚೈನು ಮಾಡಿಸಲಿಕ್ಕೆ ಹಾಕಿದಳು. ಮಗಳ ಮರುಳು ಮೋಹಕ್ಕೆ ವೆಂಕಮ್ಮ ಹಣೆ ಹಣೆ ಬಡಿದುಕೊಂಡಳು. ಲಕ್ಷ್ಮಣ ಮುಖ ಗಂಟುಹಾಕಿಕೊಂಡಾಗ ಸುಮಿತ್ರೆ ''ನನ್ನ ಜೀವಮಾನದಲ್ಲಿ ಈ ಮನೆಗೆ ಬಂದಲಾಗಾಯಿತು ಹಸುಮಗುವನ್ನು ಕಂಡದ್ದೇ ಈಗ, ಮೈದುನನ ಮಗುವನ್ನಾದರೂ ನನ್ನದೆಂದು ಮುದ್ದಾಡಿದ್ದಕ್ಕೆ ಸಮಾಧಾನವಾಗಿದೆ—ಇನ್ನು ನಾನು ಹೋಗುವಾಗ ಈ ಚಿನ್ನದೊಡನೆ ಸಾಯುತ್ತೇನೆಯೋ, ಕಡೆಯ ಈ ಮಾತನ್ನೂ ನಡೆಸಿಕೊಡಲಾರಿರ ? " ಎಂದು ಅಸಹಾಯ ಆರ್ತತೆಯ ಧ್ವನಿಯಲ್ಲಿ ನರಳಿ ಬೇಡಿದ್ದಳ.. ತನ್ನ ಕೈಹಿಡಿದ ಈ ಹೆಣ್ಣಿನ ಈ ಆಸೆ ತೀರಿಸದಿದ್ದರೆ ಅವಳು ಅದೇ ಕೊರಗಿನಲ್ಲಿರುವುದನ್ನು ನೋಡಲಾರದೆ ಇದಕ್ಕೆ ಒಪ್ಪಿದ್ದ ಲಕ್ಷ್ಮಣ.

ಅಕ್ಕಸಾಲಿ ಗುಂಡಿನಬಳೆ ಸರ-ಚೈನು ಮಾಡಿ ತಂದದ್ದನ್ನು ರಾಜೀವಿ ಅದನ್ನು ಹಾಕಿ, ಕರಿಯ ರೇಷ್ಮೆಯ ಕಸೆ ಅಂಗಿ ಹಾಕಿ ಗುಂಗುರು ಕೂದಲನ್ನು ತಿದ್ದಿ ಕಾಡಿಗೆ ಹಚ್ಚಿ, "ಅಕ್ಕಾ ನಿಮ್ಮ ಮಗಳನ್ನು ನೋಡಿ" ಎಂದು ಎದುರು ಹಿಡಿದಾಗ ಹಿಗ್ಗಿದಳು ಸುಮಿತ್ರೆ. "ದೃಷ್ಟಿ ತೆಗೆದು ಕಡ್ಡಿ ಸುಡು ರಾಜೀವಿ-ಕಣ್ಣಾಸರವಾಗುವಂತಿದೆ ಈ ಬೊಂಬೆ" ಎಂದು ಮಂಚದ ಮೇಲೆ ಕುಳಿತು ಸನಿಯಕ್ಕೆ ಬಾಗಿಸಿದ ಮುದ್ದು ಮುಖ ನೋಡಿ ಹೇಳಿದಳು. ಸುಮಿತ್ರೆಗೆ ಆದ ತೃಪ್ತಿ ವರ್ಣನಾತೀತ. ಯಾವುದೋ ಸಮಾಧಾನ ಅವಳಲ್ಲಿ ಉರಿದೇಳುತ್ತಿದ್ದ ದಳ್ಳುರಿಯನ್ನು ಆರಿಸಿದಂತಾಗಿತ್ತು.

ಆ ರಾತ್ರಿ ಅವಳು ದಿನಂಪ್ರತಿಯಂತೆ ನರಳದೆ ನಿದ್ರೆಹೋದಳು. ಮಗಳು ನರಳದೆ ಮಲಗಿದ್ದು ವೆಂಕಮ್ಮನಿಗೆ ಆಶ್ಚರ್ಯವಾಯಿತು.

ರಾತ್ರಿ ಒಂದು ಹೊತ್ತಿನಲ್ಲಿ ಇದ್ದಕ್ಕಿದ್ದಂತೆ ಸರಸ್ವತಿ ಕಿಟಾರೆಂದು ಅರಚಿ ಬೆಚ್ಚಿ ಅಳತೊಡಗಿದಳು. ಸರಕ್ಕನೆ ರಾಜೀವಿ ಎದ್ದು ಲಾಟೀನು ದೊಡ್ಡದು ಮಾಡಿದಳು. ಗಾಬರಿಯಾಗಿ ತೊಡೆಯ ಮೇಲೆ ಹಾಕಿಕೊಂಡು ಆಡಿಸಿ ಹೊಟ್ಟೆಗೆ ಕೊಟ್ಟಳು, ಅಳು ನಿಲ್ಲಲಿಲ್ಲ. ಸುಮಿತ್ರೆಗೂ ಮಗುವಿನ ಅಳುವಿನಿಂದ ಎಚ್ಚರಾಯಿತು. "ಅಮ್ಮಾ ಮಗೂನ್ನ ನೋಡು" ಎಂದು ಕತ್ತು ಹೊರಳಿಸಿ ನೋಡಿದಳು. ವೆಂಕಮ್ಮ ಮಲಗಿದ್ದ ಹಾಸಿಗೆ ಬರಿದಾಗಿತ್ತು. "ವೆಂಕಮ್ಮ ಯಾಕೋ ಮಗು ಸುಮ್ಮನಾಗಲೊಲ್ಲದು ನೋಡಿ ಬನ್ನಿ" ಎಂದು ರಾಜೀವಿಯೂ ಕಂಗಾಲಾಗಿ ಕೂಗಿದಳು. ವೆಂಕಮ್ಮ ಬರಲಿಲ್ಲ. ಮಗುವಿನ ಅಳು ಹೆಚ್ಚಾಯಿತು. ರಾಜೀವಿಗೆ ಏನುಮಾಡಲೂ ತೋಚದಾಯಿತು. ಸುಮಿತ್ರೆಯ ಕೊಠಡಿಗೇ ಮಗುವನ್ನು ಎದೆಗೆ ಅವಚಿಕೊಂಡು ಏಳುವುದರಲ್ಲಿದ್ದಳು. ಠಣಕ್ಕೆಂದು ಪಕ್ಕದ ಕೊಠಡಿಯ ಚಿಲಕದ ಸದ್ದಾಯಿತು. ತಿರುಗಿ ನೋಡಿದಾಗ ಕಣ್ಣಿಗೆ ಮಂಜು ಕವಿದಂತಾಯಿತು. ವೆಂಕಮ್ಮ ತಲೆ ಕೆದರಿಕೊಂಡು ಲಕ್ಷ್ಮಣನ ಶಯನ ಗೃಹದಿಂದ ಹೊರಕ್ಕೆ ಬಂದಳು ಗಾಬರಿಯಾಗಿ. ರಾಜೀವಿಗೆ ಒಂದೂ ಅರ್ಥವಾಗಲಿಲ್ಲ. ಮಗುವಿನ ಗಲಾಟೆಗೆ ಯತ್ನವಿಲ್ಲದೆ ವೆಂಕಮ್ಮ ಹೊರಕ್ಕೆ ಬರಲೇಬೇಕಾಯಿತು. ಬಂದಾಗಲೇ ತಾವು ಮಾಡಿದ ಅಚಾತುರ್ಯದ ಅರಿವಾಗಿ ರಾವು ಬಡಿದಂತೆ ನಿಂತದ್ದು.

ರಾಜೀವಿಗದೇಕೋ ಅಳು ಬಂತು. ಮಗುವಿನೊಡನೇ ಸುಮಿತ್ರೆಯು ಕೊಠಡಿಗೆ ಹೋದಳು. "ಅಕ್ಕಾ" ಎಂದು ಬಿಕ್ಕಿ ಬಿಕ್ಕಿ ಸುಮಿತ್ರೆಯು ಮಂಚದ ಬಳಿ ಕುಳಿತು ಅತ್ತಳು. ಸರಸ್ವತಿಯೂ ಅಳುತ್ತಿತ್ತು. "ಯಾಕೆ ಗಾಬರಿ ಯಾಗ್ತಿ ರಾಜೀವಿ, ಕಿವಿ ನೋವಿರಬೇಕು ಇಲ್ಲವೇ ಹೊಟ್ಟೆ ಶೂಲೆ ಎದ್ದಿರಬೇಕು ಅದಕ್ಕೇಕೆ ಇಷ್ಟು ಗಾಬರಿಯಾಗ್ತಿ?" ಎಂದು ಸಮಾಧಾನ ಪಡಿಸಿದಳು. ಮಗುವಿಗೇನಾಗಿತ್ತೊ! ವೆಂಕಮ್ಮನನ್ನು ಆ ಸ್ಥಿತಿಯಲ್ಲಿ ಕಂಡದ್ದು ರಾಜೀವಿಗೆ ಹೊಟ್ಟೆಗೆ ಬೆಂಕಿ ಸುರಿದಂತಾಗಿತ್ತು.

ಅಡಿಗೆ ಮನೆಗೆ ಹೋದ ವೆಂಕಮ್ಮ ಒಂದು ಚಮಚದಲ್ಲಿ ಕೊಂಚ ಕೊಬರಿಎಣ್ಣೆ ಕಾಸಿ ಒಂದು ಬೆಳ್ಳುಳ್ಳಿ, ಇಷ್ಟು ಇಂಗು, ಚಿಮುಟಿಗೆ ಅರಿಸಿನ ಹಾಕಿ ಚಟಚಟ ಅನ್ನುವಂತೆ ಕಾಸಿ ತಂದು ಅಲ್ಲಿಟ್ಟು ನಿಂತಳು.

ರಾಜೀವಿ ಹದವಾಗಿ ಆರಿಸಿ ಹೂಬತ್ತಿಯಲ್ಲಿ ಅದ್ದಿ ಕೂಸಿನ ಕಿವಿಗೆ ಹಿಂಡಿ ದಳು. ಕರ್ಪೂರ ಎಣ್ಣೆ ಸವರಿದ ವೀಳೆದೆಲೆ ಕಾಸಿ ಹೊಟ್ಟೆ ಕಾಸಿದಳು. ಅಜ ವಾನ ಕಚಪಚನೆ ಅಗಿದು ಹೊಟ್ಟೆಗೆ ಊದಿ ಸವರಿದಳು. ಯಾವ ಔಷಧಿಯ ಬಲದಿಂದಲೋ ಅಳುತ್ತಿದ್ದ ಮಗು ಸುಮ್ಮನಾಯಿತು.

ಆಗಲೇ ಬೆಳಗಿನ ಜಾವವಾಗುತ್ತ ಬಂದದ್ದು ಮೊದಲ ಜಾವದ ಕೋಳಿ ಕೂಗಿದ್ದರಿಂದ ಗೊತ್ತಾಯಿತು. ನೀರುಮನೆಗೆ ಹೋಗಿ ಒಲೆ ಉರಿಹಾಕಿ ವೆಂಕಮ್ಮ ನೀರು ಕಾಯಿಸಿ ಮೈ ತೊಳೆದುಕೊಂಡು ಮಡಿ ಉಟ್ಟರು.

ರಾಜೀವಿ ಮಾತ್ರ ದುಃಖಿಸುತ್ತಲೇ ಅಕ್ಕನಬಳಿ ಕುಳಿತಿದ್ದಳು. ಮಗು ವನ್ನು ಜೋಲಿಯಲ್ಲಿ ಮಲಗಿಸಿ ಬಂದಿದ್ದಳು. ಸುಮಿತ್ರೆಗೆ ತಾನು ನಾಳೆಯೇ ಊರಿಗೆ ಹೊರಡುವುದಾಗಿ ಹೇಳಿದಳು. "ನಿನ್ನ ಕೂಸಿಗೇನೂ ಆಗೋಲ್ಲ ಕಣೆ ತಾಯಿ, ಏಕೆ ಹೆದರುತ್ತಿ" ಎಂದು ಸುಮಿತ್ರೆ ಸಂತೈಸಿದಳು. ಸುಮಿತ್ರೆಗೆ ಆದ ಅನ್ಯಾಯದ ಬಗ್ಗೆ ರಾಜೀವಿಗೆ ದುಃಖವಿತ್ತು. ಎಂತಹ ತಾಯಿ ಈಕೆ–ತಾಯಿಯಲ್ಲ ಪಶು; ಎಂತಹ ಭಾವಂದಿರು ಇವರು! ತಾರತಮ್ಯ ಧರ್ಮವ ನ್ನರಿಯದ ಅಂಥ ರಾಕ್ಷಸ ಕುಲದವರಿರಬೇಕು. ಇಂತಹ ಮನೆಯಲ್ಲಿ ಒಂದು ನಿಮಿಷ ಇರಲೂ ರಾಜೀವಿಗೆ ಮನಸ್ಸಿರಲಿಲ್ಲ. ಏನೂ ಅರಿಯದ ನಿರ್ಮಲ ಹೃದಯಿ ಸಾಧ್ವಿ ಸುಮಿತ್ರೆಗಾದ ಅನ್ಯಾಯ ಇನ್ನು ಈ ಜನ್ಮದಲ್ಲಾಕೆಗೆ ತುಂಬಿ ಬರುವುದಿಲ್ಲ. ಅವಳ ಬಾಯಿಲೆಯೋ ಅವಳ ದಾಂಪತ್ಯ ಸೌಖ್ಯ, ಗಂಡನ

ಅನುರಾಗವನ್ನು ನುಂಗಿಹಾಕಿತ್ತು. ಕರುಳು ಕಿವಿಚಿದ ಸಂಕಟವಾಯಿತು ನರಳುತ್ತಿದ್ದ ಸುಮಿತ್ರೆಯನ್ನು ಕಂಡು. ತನ್ನಿಂದ ಸುಮಿತ್ರೆಗೆ ಏನು ನೆರವು ಸಿಕ್ಕೀತು? ಸಿಕ್ಕರೂ ತನ್ನ ಕೈಲಾದ ಸಹಾನುಭೂತಿ ದೊರಕೀತು. ಅದಕ್ಕಿಂತ ಹೆಚ್ಚಿನದೇನೂ ರಾಜೀವಿಯಿಂದ ಸಾಧ್ಯವಿರಲಿಲ್ಲ. ಈ ರಾತ್ರಿಯ ಭಯಂಕರ ತನ್ನ ಕನಸಲ್ಲೂ ಎಣಿಸದ ವಾಸ್ತವಿಕತೆ ನೋಡಿದಲಾಗಾಯಿತು ರಾಜೀವಿಗೆ ಯಾವುದೋ ಅವ್ಯಕ್ತ ಶಕ್ತಿ ಆ ಮನೆಯಿಂದ ಹೊರದೂಡಿದಂತಾಗಿತ್ತು.

''ಅಕ್ಕಾ ನಾನು ಹೊರಡಲೇ ಬೇಕು....''

''ಹುಚ್ಚು ಹುಡುಗಿ....ಸುಮ್ಮನೇ ಹೆದರಿದ್ದೀಯ. ನೋಡು ಕೂಸು ಹಾಯಾಗಿ ನಿದ್ರೆ ಹೋಗಿದೆ"

''....ಅದಕ್ಕಲ್ಲ. ನಾನು ಹೋಗಬೇಕು"

"ಏನೋ ಮಗು ಮನೆಯಲ್ಲಿ ನಾಲ್ಕು ದಿನವಿರಲಿ-ಅಂತ ಆಸೆಯಿತ್ತು"

"....ಹೋಗಬೇಕೂಂತ ಅನ್ನಿಸ್ತಾಯಿದೆ...."

"ಯಾಕೆ-ಆಗಲೆ ನನ್ನ ಸಹವಾಸ ಬೇಜಾರಾಯ್ತೆ ? "

"ಹಾಗೇಕನ್ನುತ್ತೀರಿ ?...."

"ಮತ್ತೆ-ಇನ್ನೇನು ಕಾರಣ ಹೇಳಬಾರದಂಥಾದ್ದೆ?''

ಈ ಮಾತಿಗೆ ರಾಜೀವಿಗೆ ದುಃಖ ತಡೆಯಲಾಗಲಿಲ್ಲ. "ಹೌದಕ್ಕಾ ಹೇಳ ಬಾರದಂಥಾದ್ದು-ನಿನ್ನ ಕಣ್ಣೆದಿರು ನಿನ್ನ ಗಂಡ, ಹೆತ್ತ ತಾಯಿ ನಿನ್ನ ಬೆನ್ನಿಗೆ ಬಾಕು ತಿವಿಯುತ್ತಿದ್ದಾರೆ'' ಎಂದು ಹೇಳಬೇಕೆಂದು ಒಳ ಮನಸ್ಸು ಕುದಿಯಿತು. ಹೇಗೆ ಹೇಳುವುದು, ಏನೆಂದು ಹೇಳುವುದು? ಮೊದಲೇ ನರಳುವವರಿಗೆ ಈ ಹಾಳು ಸುದ್ದಿಯ ಇರಿತವೂ ಬೇಡ. ಇರುವಷ್ಟು ದಿನ ಹೀಗೇ ಕೊರಗಿದರೆ ಮೇಲು ಎಂದು ರಾಜೀವಿ ಯೋಚಿಸಿದಳು. ಏನೂ ಹೇಳದೆ ಮುಖವನ್ನು ಸುಮಿತ್ರೆಯ ಎದೆಯಲ್ಲಿ ಮುಚ್ಚಿ ಅತ್ತಳು.

ಸುಮಿತ್ರೆ ರಾಜೀವಿಯ ಅಳವನ್ನೇ ಅರಿಯಲಾರದೆ ಕೃಶವಾದ ಕೈಗಳಿಂದ ಅವಳ ತಲೆಯನ್ನು ಮಾತ್ರ ನೇವರಿಸಿದಳು. "ನಿನಗೆ ಹೇಗೆ ಇಷ್ಟವೋ ಹಾಗೆ ಮಾಡು. ಅದಕ್ಕೇಕೆ ಇಷ್ಟು ವ್ಯಥೆ ? '' ಎಂದು ಶಾಂತವಾಗಿ ಹೇಳಿದಳು.

ಮರುದಿನವೇ ರಾಜೀವಿ ಊರಿಗೆ ಹೊರಟೇಬಿಟ್ಟಳು. ಲಕ್ಷ್ಮಣನಾಗಲಿ, ವೆಂಕಮ್ಮನಾಗಲಿ ಒಂದು ಮಾತೂ ಆಡಲಿಲ್ಲ. ರಾಜೀವಿಯನ್ನು ನೋಡಲಿಕ್ಕೇ

ಅವರಿಗೆ ಅಕ್ಷಮ್ಯ ಅಪರಾಧ ಮಾಡಿದವರ ಭಯ. ರಾಜೀವಿ ಊಟ ಸಹ ಮಾಡಲಿಕ್ಕೆ ಒಪ್ಪಲಿಲ್ಲ. ಜೊತೆಗೆ ಯಾರೂ ಇಲ್ಲದೆ ಮಗು ತಾಯಿ ಇಬ್ಬರನ್ನೇ ಕಳುಹಿಸಲು ಸುಮಿತ್ರೆ ಒಪ್ಪಲಿಲ್ಲ. ಹೋಗಿಬರುವುದಾಗಿ ಹೇಳಲ ತಿಪ್ಪಯ್ಯನ ಮನೆಗೆ ಹೋದಳು ರಾಜೀವಿ. ಹೋದದ್ದು ಒಳ್ಳೆಯದೇ ಆಯಿತೆಂದು ಹೋದಮೇಲೆ ತಿಳಿಯಿತು.

ಒಬ್ಬಳನ್ನೇ ಕಳಿಸಲು ಸುಮಿತ್ರೆ ಒಪ್ಪದಿದ್ದುದಕ್ಕೆ ಒಳ್ಳೆಯ ಜೊತೆಯೇ ಸಿಕ್ಕಿದಂತಾಗಿತ್ತು. ತಿಪ್ಪಯ್ಯ ಹಿರೇಹಳ್ಳಿಗೇ ಹೊರಟು ನಿಂತಿದ್ದ. ಇನ್ನು ಹೊರಡಲೇನು ಆತಂಕ?

"ಹುಷಾರು ತಾಯಿ, ಆತುರಾತುರವಾಗಿ ಹೊರಟುಬಿಟ್ಟೆ. ಮಗು ಮನೆಯಲ್ಲಿ ಇದ್ದಂತೇ ಆಗಲಿಲ್ಲ....ಇನ್ನೊಮ್ಮೆ ಬರುವುದು ಯಾವ ದಿನಕ್ಕೊ.... ನಾನಿನ್ನೆಷ್ಟುದಿನ ಇರಬೇಕಾಗಿದೆ...."

"ಯಾಕೆ ಅಂಥಾ ಮಾತಾಡ್ತೀರಿ ಅಕ್ಕ? ನಿಮ್ಮನ್ನ ಚಿತ್ರದುರ್ಗಕ್ಕೇ ಕರೆಸಿಕೊತೀನಿ. ನಿಮ್ಮ ಬಾಯಿಲೆ ವಾಸಿಯಾಗೇ ಆಗುತ್ತೆ...."

"ನಿನಗೊಂದು ಭ್ರಾಂತು" ಎಂದು, ನಮಸ್ಕರಿಸಿದ ರಾಜೀವಿಯನ್ನು ನೀರುಗಣ್ಣಿನಲ್ಲಿ ಆಶೀರ್ವದಿಸಿದಳು. ವೆಂಕಮ್ಮನಿಗೆ ಹೋಗಿಬರುತ್ತೇನೆಂದು ಹೇಳಲೂ ಅವಳಿಗೆ ಅಸಹ್ಯವಾಯಿತು. ಲಕ್ಷ್ಮಣ ಮನೆಯಲ್ಲೇ ಇರಲಿಲ್ಲ. ಗಾಡಿಯಲ್ಲಿ ಕೂಸನ್ನ ಕೂಡಿಸಿಕೊಂಡು ತಿಪ್ಪಯ್ಯನ ಮನೆಯ ಬಳಿ ಗಾಡಿ ನಿಲ್ಲಿಸಿ ಆತನನ್ನು ಹತ್ತಿಸಿಕೊಂಡು ರಾಜೀವಿ ಹಿರೇಹಳ್ಳಿಯ ಕಡೇ ಪ್ರಯಾಣ ಬೆಳೆಸಿದಳು.

ಮಗಳ ಆಕಸ್ಮಿಕ ಆಗಮನ ನಾಗರಾಜ ಜೋಯಿಸರಿಗೆ ಆಶ್ಚರ್ಯವನ್ನುಂಟುಮಾಡಿತು. ಬಹುಬೇಗ ಅತ್ತೆಯ ಮನೆಯಿಂದ ಹಿಂದಿರುಗಿದ ಮಗಳು ಕಾರಣ ಹೇಳಲು ಹಿಂಜರಿದಳು. ಶಿವಮೊಗ್ಗೆಗೆ ಬೇಗ ಹೋಗಿ–ಚಿತ್ರದುರ್ಗಕ್ಕೇ ಹಿಂದಿರುಗಬೇಕೆಂಬ ಆತುರ ರಾಜೀವಿಯಲ್ಲಿ ಮೂಡಿತ್ತು.

ಸುಬ್ಬರಾಯನಿಗೆ ತಾನು ಹಿರೇಹಳ್ಳಿ ಬಿಟ್ಟ ವಿಚಾರ ಪತ್ರ ಬರೆದು ತಿಳಿಸಿ ನಾಡಿದ್ದೇ ಶಿವಮೊಗ್ಗೆಗೆ ಹೊರಡುವುದಾಗ ತಿಳಿಸಿದ್ದಳು.

ಹಾಗೆಯೇ ಶಿವಮೊಗ್ಗೆಗೆ ಹೊರಟುಬಿಟ್ಟಳು ರಾಜೀವಿ. ಸುಬ್ಬರಾಯನ ಮಗುವನ್ನು ನೋಡಲಿಕ್ಕೆ ತ್ರಿಪುರಸುಂದರಿ ಹಾತೊರೆಯುತ್ತಿದ್ದಳು.

ಇದೇ ಸಮಯಕ್ಕೆ ಹೊಸದುರ್ಗದಿಂದ ಸುಶೀಲೆಯೂ ಬಂದಿದ್ದಳು. ರಾಜೀವಿಯೂ ಬರುವ ಸುದ್ದಿ ಅವಳಲ್ಲಿ ತನ್ನ ಸುಬ್ಬರಾಯನ ಮಗುವನ್ನು ನೋಡುವ, ಎತ್ತಿಕೊಂಡು ಆಡಿಸುವ ಆತುರವನ್ನು ಮೂಡಿಸಿತ್ತು.

ತ್ರಿಪುರಸುಂದರಿಯ ಮನೆಯ ಮುಂದೆ ಒಂಟೆತ್ತಿನ ಗಾಡಿ ಬಂದು ನಿಂತಾಗ ಸರಸ್ವತಿಯನ್ನು ಮೊದಲು ಎತ್ತಿಕೊಂಡವಳು ಸುಶೀಲೆ. ದಿಟ್ಟಿಸಿ ನೋಡಿದಾಗ ಕಣ್ಣು ಪಾಪೆಗಳಲ್ಲಿ ಸುಬ್ಬರಾಯ ಪ್ರತಿಬಿಂಬಿಸಿದ.

"ರಾಜಮ್ಮಾ–ಎಷ್ಟು ಚೆನ್ನಾಗಿದೇರಿ ಮಗು" ಎಂದೆನ್ನುತ್ತಾ ಒಳಕ್ಕೆ ಕರೆದೊಯ್ದಳು. ತ್ರಿಪುರಸುಂದರಿ ಮಗುವಿನ ಕೆನ್ನೆ ಸವರಿ ನಟಿಕೆ ಮುರಿದಳು, ತ್ರಿಪುರಸುಂದರಿಯ ಮಕ್ಕಳು "ಪಾಪ, ಪುಟ್ಟ ಪಾಪ" ಎಂದು ನೆಗೆದಾಡಿದರು.

ಶ್ರೀಧರಮೂರ್ತಿಯ ಉತ್ಸಾಹವೂ ತುಂಬಿಬಂದಿತ್ತು. ಸುಬ್ಬರಾಯನ ಹೆಂಡತಿ ಮಗುವನ್ನು ನೋಡಿದಾಗ ಅವನಿಗೂ ಸಂತೋಷವಾಯಿತು. ರಾಜೀವಿ ಇದ್ದ ಹದಿನೈದು ದಿನ ನಗುವಿನ ಕಡಲೇ ಆಗಿತ್ತು. ತ್ರಿಪುರಸುಂದರಿ ಮನೆ. ರಂಗಮ್ಮ ಚಿತ್ರದುರ್ಗದ ವಿಷಯ ಕೇಳಿದಳು. ಮಾತು ಹೀಗೇ ಹಳೆಯ ನೆನಪು, ಸುಶೀಲೆಯ ಮದುವೆ, ಹೊಸದುರ್ಗದ ಸಂಸಾರ, ಹಿರೇಹಳ್ಳಿ, ಅಮ್ಮೇನಹಳ್ಳಿ ಸುದ್ದಿಗಳ ನಡುವೆ ಹಾದುಹೋಯಿತು. ರಾಜೀವಿ ಬಂದಮೇಲಂತೂ ಸುಶೀಲೆ ಹೆಚ್ಚು ಹೊತ್ತನ್ನು ಶ್ರೀಧರಮೂರ್ತಿಯ ಮನೆಯಲ್ಲೇ ಕಳೆಯುತ್ತಿದ್ದಳು.

"ಚಿತ್ರದುರ್ಗದಲ್ಲಿ ನೋಡುವಂಥದೇನಿದೆ?" ಎಂದಳು ಸುಶೀಲೆ.

"ಅಲ್ಲಿನ ಬೆಟ್ಟ ಗುಡ್ಡ, ಕೋಟೆ ಕೊತ್ತಲು, ಅಂಕಲಿ ಮಠ, ಜೋಗಿ ಮಟ್ಟಿ, ಚಂದ್ರವಳ್ಳಿ ಎಲ್ಲಾ ಎಷ್ಟು ಚೆನ್ನಾಗಿದೇಂತ! ಹೊಸದುರ್ಗದಲ್ಲೂ ಹೀಗೇ ಬೆಟ್ಟಗಳಿವೆಯೇ...."

"ಅಲ್ಲಿ ಭೈರಂ ಬೆಟ್ಟ, ಹನುಮನ ಕೊಂಡೆ, ನೀವು ನಿಮ್ಮ ಯಜಮಾನರು ಖಂಡಿತ ಒಂದುಸಲ ಬರಬೇಕು"

"ನೀವು ಬರಬೇಕು....ಮೊದಲು ನೀವೇ ಬರಬೇಕು"

"ಇಲ್ಲ ನೀವು ಗಂಡ ಹೆಂಡ್ತಿ ಮಗು ಮೊದಲು ಬರಬೇಕು"

"ನೀವು ಗಂಡ ಹೆಂಡ್ತಿ ಇಬ್ಬರೇ ತಾಪತ್ರಯವಿಲ್ಲದೆ ಸುಖವಾಗಿ ಬಂದು ಹೋಗಬಹುದು...."

"ಹಾಗೇ ಆಗಲಿ, ನೀವು ಹಟ ಬಿಡುವುದಿಲ್ಲವೆಂದರೆ ನಾನೇ ಸೋಲು ತ್ತೀನೆ....ನಾವೇ ಬರ್ತೀವೆ ಮೊದಲು, ಆಯ್ತೆ ?"

—ಎಂದು ಸುಶೀಲೆ ಎಂದಾಗ ಸುಬ್ಬರಾಯನ ಮನೆಗೆ ಹೋಗಲು ನನಗೆ ಉಪಚಾರವೇ? ನನ್ನ ಮನೆಯಷ್ಟೆ ಅಭಿಮಾನ ಅವರ ಮನೆಯ ಮೇಲೆ ಎಂದು ಅವಳ ಒಳಮನಸ್ಸು ಮೊರೆಯಿತು. ಈ ಭಾವನೆ ಬಂದಾ ಗಲೇ ರಾಜೀವಿಯ ತೊಡೆಯ ಮೇಲಿನ ಸರಸ್ವತಿಯನ್ನೆತ್ತಿಕೊಂಡು ಮುತ್ತಿಟ್ಟಳು.

ಮನೆಗೆ ಹಿಂದಿರುಗಿ ಬಂದರೂ ಸರಸ್ವತಿಯ ಮೃದುವಾದ ಎಳೆಯ ಕೆನ್ನೆ ಗಳನ್ನು ಮುಟ್ಟಿ ಮುದ್ದಿಸಿದಂತೇ ಅನುಭವವಾಯ್ತು. ಸುಶೀಲೆಗೆ ಇನ್ನೂ ಮಕ್ಕಳಾಗಿರಲಿಲ್ಲ. ಅವಳೊಂದು ಮಗುವನ್ನು ಬಯಸಿದ್ದಳು. ತಾಯ್ತನದ ಹುಚ್ಚು ಹಂಬಲು ಅವಳಲ್ಲಿ ಮನೆಮಾಡಿತ್ತು.

ಕೂಸಿದ್ದಾಗಿನಿಂದಲೂ ಅಷ್ಟೆ—ನನ್ನ ಕೂಸು ಕೂಸು ಎಂದು ಮುರುಕು ಗೊಂಬೆಯನ್ನು ಸದಾ ಎದೆಗವಚಿಕೊಂಡೇ ಇರುತ್ತಿದ್ದಳು. ಕೊಂಚ ದೊಡ್ಡವ ಳಾದ ಮೇಲೆ ಆಚೆ ಈಚೆ ಮನೆಯ ಮಕ್ಕಳನ್ನು ಎತ್ತಿ ಆಡಿಸುವುದರಲ್ಲಿ ಹೆಚ್ಚು ಹೊತ್ತು ಕಳೆಯುತ್ತಿದ್ದಳು. ಅಂದಮೇಲೆ ಈಗ ದೊಡ್ಡವಳಾಗಿ ಗಂಡನ ಮನೆ ಸೇರಿದ ಮೇಲೆ ತಾನೇ ಒಂದು ಕೂಸಿನ ತಾಯಿಯಾಗಬೇಕೆಂಬ ಹಂಬಲ ಹೆಚ್ಚಿದ್ದು ಸಹಜ ತಾನೆ?

ಈಗ ಸುಬ್ಬರಾಯನ ಮಗುವನ್ನೆತ್ತಿಕೊಂಡಾಗ ಒಂದು ಕ್ಷಣ ತನ್ನ ಮಗುವೆಂದೇ ಮುತ್ತಿಡುವಳು. ಹಸಿದಾಗ ಹೊಟ್ಟೆಗೆ ಕೊಡಲು ಮಾತ್ರ ಸರಸ್ವತಿ ಯನ್ನು ರಾಜೀವಿ ತೊಡೆಯಮೇಲೆ ಹಾಕಿಕೊಳ್ಳುವಳು. ಇನ್ನುಳಿದ ಸಮಯ ದಲ್ಲಿ ಮಗು ಹೆಚ್ಚುಕಡಿಮೆ ಸುಶೀಲೆಯ ಹತ್ತಿರಲೇ ಇರುತ್ತಿತ್ತು.

"ಅಮ್ಮಾ, ಅವರು ಇನ್ನೂ ಎಷ್ಟು ದಿನ ತುಮಕೂರಿನಲ್ಲಿರುವವರೊ?" ಎಂದು ಕೇಳಿದಳು ರಾಜೀವಿ ತಾನು ಊರಿಗೆ ಹೊರಡುವ ದಿನಗಳು ಸಮಿಯಕ್ಕೆ ಬಂದಾಗ.

"ಅವರಿಂದ ಕಾಗದವೇ ಇಲ್ಲ—ಅದೇನು ಸರ್ಕೀಟೋ ಗಿರ್ಕೆಟೋ ಹೊರ ಟಿದ್ದಾರೇಂತ ಕಾಣತ್ತೆ".

"ಊರೂರು ತಿರುಗುವ ಕೆಲಸವೆ ಜನಾರ್ಧನಯ್ಯನವರದು?"

"ಈ ಜಮಾಬಂದಿ ಕಾಲ ಬಂದರೆ ಹಾಗೇ–ಅಮಲ್ದಾರರ ಜೊತೆ ಹಳ್ಳಿ ಹಳ್ಳಿ ತಿರುಗಬೇಕು–ಆಗ ಹೆಂಡತಿಗೆ ಕಾಗದಾ ಬರಿಯಲಿಕ್ಕೆ ಕೂಡಾ ಪುರುಸೊತ್ತಿರುವುದಿಲ್ಲ"

"ನೀವು ಊರಲ್ಲಿದ್ದಾಗ ಅವರು ಸರ್ಕೀಟು ಹೊರಟರೆ ಒಬ್ಬರೇ ಮನೆಯಲ್ಲಿರಬೇಕು"

"ಹೌದು–ಬಹಳ ಬೇಜಾರಾಗತ್ತಮ್ಮ ಆಗಲಂತೂ" ಎಂದಾಗ ತನಗೊಂದು ಮಗು ಇದ್ದಿದ್ದರೆ ಎಂದೆನಿಸುವುದು.

"ಮುಂದಿನ ವರ್ಷದ ಹೊತ್ತಿಗೆ ಎಲ್ಲಾ ಸರಿಹೋಗುತ್ತೆ"

"ಅದು ಹೇಗೆ ?"

"ಕೊಂಕಳಿಗೊಂದು ಕೂಸು ಬಂದಿರುತ್ತದೆ"

"....ಹೋಗಿ ರಾಜಮ್ಮ...." ಎಂದು ನಕ್ಕಳು ಸುಶೀಲೆ. ಅಂತರಂಗದಲ್ಲಿ ರಾಜಮ್ಮನ ಬಾಯಿ ಹರಕೆ ನಿಜವಾಗಲಿ ಎಂದೆನಿಸಿತು.

"ಹಾಗಾದರೆ ಯಾವಾಗ ನಿಮ್ಮ ಪ್ರಯಾಣ ?"

"ಅವರಿಂದ ಪತ್ರ ಬಂದಮೇಲೆ.... ನಾನು ಬಂದು ಆಗಲೆ ತಿಂಗಳಾಯಿತು. ನಾಳೆ ನಾಡಿದ್ದು ಕಾಗದ ಬರಬಹುದು...."

"ಯಾರ ಜೊತೆ ನಿಮ್ಮ ಪ್ರಯಾಣ ?"

"ಈ ಸಾರೆ ನಮ್ಮ ತಾಯಿ ಬರ್ತ್ತಾರೆ–ಅವರಿಗೂ ಕಳ್ಳೂರುಕಟ್ಟೆ, ಶಿವಮೊಗ್ಗಾ ಬೇಜಾರು. ನನ್ನ ಜೊತೆ ಸ್ವಲ್ಪ ದಿನವಿದ್ದಹಾಗೆ ಆಗುತ್ತೆ. ಅವರು, ನಾನು ಇಬ್ಬರೇ ಹೊರಡಬೇಕು"

"ನಮ್ಮ ಯಜಮಾನರ ಕಾಗದ ಬಂದಿದೆ. ಯಾರದ್ದಾರೂ ಜೊತೆಮಾಡಿಕೊಂಡು ಬಾ ಅಂತ ಬರೆದಿದ್ದಾರೆ...."

"ಒಂದು ಕೆಲಸ ಮಾಡೋಣ ರಾಜಮ್ಮ. ಇಬ್ಬರೂ ಒಟ್ಟಿಗೇ ಹೊರಡೋಣ–ನಾವು ಹೊಸದುರ್ಗ ರೋಡಿನಲ್ಲಿ ಇಳಿದುಬಿಡ್ತೇವೆ. ನೀವು ಮುಂದಕ್ಕೆ ಚಿತ್ರದುರ್ಗಕ್ಕೆ ಹೋಗಬಹುದು...."

ಈ ಮಾತಿಗೆ ಮಧ್ಯೆ ಮಾತು ಕೂಡಿಸುತ್ತಾ ತ್ರಿಪುರಸುಂದರಿ ಹೇಳಿದಳು.

"ಸುಶೀಲ ನೀವಿಬ್ಬರೂ ಇನ್ನು ಎಂಟುದಿನದ ತನಕ ಇದ್ದರೆ ನಾನೊಂದು ಒಳ್ಳೇ ಸಲಹೆ ಹೇಳ್ತೀನಿ"

"ಅದೇನು ಹೇಳಿ ?"

"ಹಾಗಾದರೆ ಇಬ್ಬರೂ ಇನ್ನ ಎಂಟು ದಿನ ಇರ್ತಿರೀನ್ನಿ ಹಾಗಾದರೆ...."

"ನಿಮ್ಮ ಅಣ್ಣಂದಿರಿಗೆ ಬರೆದುಬಿಡಿ, ನಾನಿರಲು ಸಿದ್ಧ."

"ನಾನೂ ಅವರಿಗೊಂದು ಕಾಗದಾ ಹಾಕಿದರೆ ತೀರಿತು. ನಿಮ್ಮ ಸಲಹೆ ಏನು ?"

"ಇವರು ಹೇಗೂ ರಜ ತೊಗೊಂಡಿದ್ದಾರೆ. ಚಿತ್ರದುರ್ಗಕ್ಕೆ ಹೋಗ ಬೇಕೆಂದೇ ಇದ್ದಾರೆ. ಅದೇನೋ ಸುಬ್ಬುಹತ್ತಿರಲೇ ಜರೂರು ಕೆಲಸವಂತೆ. ಅವರ ರಜಾ ಮಂಜೂರಾಗೋದು ಇನ್ನೂ ಎಂಟು ದಿನ ಆಗತ್ತಂತೆ...."

"ಒಳ್ಳೆ ಜೊತೆಯೇ ಆದ ಹಾಗಾಯ್ತಲ್ಲಾ...."

"ನಿಜವಾಗಲೂನೋ ಅಥವ ಎಂಟು ದಿನ ನಮ್ಮನ್ನ ಇಟ್ಟುಕೊಳ್ಳೋ ಉಪಾಯವೋ...."

"ನಿಜವಾಗಲೂ ನಿನ್ನೆ ರಾತ್ರಿ ಅವರೇ ಹೇಳಿದರು"

"ಸರಿ ಹಾಗಾದರೆ...." ಎಂದಳು ರಾಜೀವಿ. ಯಾರ ಜೊತೆ ಗಂಡ ನೂರು ಸೇರುವುದೆಂದು ಯೋಚಿಸುತ್ತಿದ್ದ ದೊಡ್ಡ ಸಮಸ್ಯೆ ಪರಿಹಾರ ವಾದಂತಾಗಿತ್ತು.

ಸುಶೀಲೆಗೂ ತಾನೂ ಸುಬ್ಬರಾಯನ ಮಗುವಿನೊಡನೆ ಇನ್ನೂ ಎಂಟು ದಿನವಿದ್ದು ಹೊಸದುರ್ಗರೋಡಿನ ತನಕ ಜೊತೆಗೇ ಇರಬಹುದಲ್ಲಾ ಎಂದು ಒಂದು ಸಂತೋಷವೇ ಆಗಿತ್ತು.

ಹಾಗೇ ಎಂಟು ದಿನ ಬಿಟ್ಟು ಸುಶೀಲೆ, ಅವರಮ್ಮ, ರಾಜೀವಿ, ಸರಸ್ವತಿ, ಶ್ರೀಧರಮೂರ್ತಿ ಜೊತೆ ಶಿವಮೊಗ್ಗೆಯಿಂದ ರೈಲು ಹತ್ತಿದರು.

## ೧೨

ಸುಶೀಲೆ–ರಂಗಮ್ಮ ಹೊಸದುರ್ಗ ರೋಡ್ ರೈಲ್ವೆ ಸ್ಟೇಷನ್ನಿನಲ್ಲಿ ಇಳಿದರು. ರೈಲು ಅಲ್ಲಿ ಒಂದೇ ನಿಮಿಷ ನಿಲ್ಲುವುದು. ಧಡಬಡನೆ ಹಾಸಿಗೆ, ಹಳದಿ ಟ್ರಂಕು, ಬಟ್ಟೆ ಇಳಿಸಿಕೊಂಡು, ರಾಜೀವಿಗೆ ಬಾರಿ ಬಾರಿ "ಮಗು ಹುಶಾರು ಹೋಗಿಬರ್ತಿರಾ'' ಎಂದು ಸುಶೀಲೆ ಹೇಳಿದಳು. ಸೊಂಟದಲ್ಲಿ ಸೆಕ್ಕಿದ ಬೆಳ್ಳಿರೂಪಾಯಿಯೊಂದನ್ನು ಬೇಡ ಬೇಡವೆಂದರೂ ಬಲವಂತದಿಂದ ಸರಸ್ವತಿಯ ಕೈಗೆ ಕೊಟ್ಟಳು. ರಾಜೀವಿ ಸುಶೀಲೆಗೆ "ಖಂಡಿತ ನಿಮ್ಮ ಯಜಮಾನರ ಜೊತೆ ಬರಬೇಕು" ಎಂದಳು. ಸಿಳ್ ಎಂದು ಸೀಟಿ ಹೊಡೆಯುತ್ತಾ ರೈಲು ಹೊರಟೇ ಹೋಯಿತು. ಒಂದು ಕ್ಷಣ ಅದನ್ನೇ ನೋಡಿದಳು. ದಪ್ಪವಾದ ಕರಿಯ ಹೊಗೆಯನ್ನು ಗುಳಿ ಕಣ್ಮರೆಯಾಯಿತು.

ಅದೇ ರೈಲಿನಿಂದ ಹೆಂಡತಿಯೊಡನೆ ವೆಂಕಟೇಶನೂ ಶಿವಮೊಗ್ಗೆಯಿಂದ ಬಂದಿದ್ದ. ಗಲಾಟೆಯಲ್ಲಿ ಭೆಟ್ಟಿಯಾದದ್ದು ರೈಲಿಳಿದು ಪ್ಲಾಟ್‌ಫಾರಂ ಮೇಲೆ ನಿಂತಾಗಲೇ.

"ಸುಶೀಲಮ್ಮನವರೇ, ಇದೇ ರೈಲಿಂದ ಇಳಿದಿರೇನು" ಎಂದು ತನ್ನನ್ನೇ ನೋಡುತ್ತಿದ್ದ ಸುಶೀಲೆಯನ್ನು ವೆಂಕಟೇಶ ಕೇಳಿದ. ರಂಗಮ್ಮ ಎತ್ತಲೋ ನೋಡುತ್ತಿದ್ದವಳು ಇಲ್ಯಾರು ಮಗಳನ್ನು ಮಾತಾಡಿಸಿದ್ದು ಎಂದು ತಿರುಗಿದಳು. ಗೊತ್ತಿದ್ದವನಾದ ವೆಂಕಟೇಶನನ್ನು ಕಂಡು ಆಶ್ಚರ್ಯವಾಯಿತು.

"ಇದೇನು ಇಲ್ಲಿ?...."

''ಇವರು ಇರುವುದೇ ಹೊಸದುರ್ಗದಲ್ಲಿ. ನಿನಗೆ ಗೊತ್ತಿರಲಿಲ್ಲವೇ?"

"ನನಗೆ ಹ್ಯಾಗೆ ತಿಳಿಯಬೇಕು?"

"ಇಲ್ಲಿ ನೋಡೇ–ಇವರು ನಮ್ಮೂರಿನವರೇ. ಜನಾರ್ಧನಯ್ಯ ಅಂತ ತಾಲ್ಲೋಕಾಫೀಸಿನಲ್ಲಿದ್ದಾರೆ. ಅವರ ಮನೆಯವರು, ಅವರ ತಾಯಿ. ನನ್ನ ಸ್ನೇಹಿತ ಸುಬ್ಬರಾಯ ಶಿವಮೊಗ್ಗೇಲಿದ್ದಾಗ ನಾವು ಇವರ ಮನೇಲಿ ಎಷ್ಟುಸಲ ತಿಂಡಿ ತಿಂದಿದ್ದೇವೊ–ರಂಗಮ್ಮನೋರು ಕೊಡುತ್ತಿದ್ದ ಕೋಡುಬಳೆ ಈಗಲೂ ಬಾಯಲ್ಲಿ ನೀರೂರುವ ಹಾಗಿದೆ...." ಎಂದು ತನ್ನ ಹೆಂಡತಿಗೆ ಸುಶೀಲೆಯನ್ನೂ

ರಂಗಮ್ಮನನ್ನೂ ಪರಿಚಯ ಮಾಡಿಕೊಟ್ಟ. ಊರೊಳಗೆ ಹೋಗಲು ತಯಾರಿದ್ದ ಬಸ್ಸಿಗೆ ಸಾಮಾನು ಹಾಕಲು ಕೂಲಿಗೆ ಹೊರಿಸಿ ಬಸ್ಸಿನ ಬಳಿ ಹೊರಟರು.

"ಸುಬ್ಬರಾಯರ ಹೆಂಡ್ತಿ, ಅವರ ಭಾವ ಇದೇ ಗಾಡೀಲೆ ಚಿತ್ರದುರ್ಗಕ್ಕೆ ಹೋದರಲ್ಲಾ" ಎಂದಳು ರಂಗಮ್ಮ.

''ಹೌದೇ.... ಅರರೇ ಎಂಥ ಕೆಲಸ, ನಾನು ಕಡೇ ಚಿಕ್ಕ ಗಾಡೀಲಿ ಹತ್ತಿ ಬೀರೂರಲ್ಲೂ ಅವಸರದಲ್ಲಿ ಗಾಡಿಯನ್ನು ಠಲಾಯಿಸಲಿಲ್ಲ. ಇವರೆಲ್ಲಾ ಗಾಡೀಲಿದ್ದದೇ ಗೊತ್ತಾಗಲಿಲ್ಲ...." ಎಂದು ಸುಬ್ಬರಾಯನ ಹೆಂಡತೀನ್ನ ಅವಳ ಭಾವನನ್ನ ನೋಡಲಾಗದ್ದಕ್ಕೆ ಕೈ ಕೈ ಹಿಸುಕಿಕೊಂಡ.

"ಏನಪ್ಪಾ ವೆಂಕಟೇಶು ನಿನ್ನ ಹೆಂಡ್ತಿ ಯಾವೂರಿನವಳು ?" ಎಂದು ರಂಗಮ್ಮ ಗಿಡ್ಡ ಹುಡುಗಿ, ಮೇಲುಕಚ್ಚೆ ಹಾಕಿಕೊಂಡು ನಿಂತ ವೆಂಕಟೇಶನ ಹೆಂಡತಿಯನ್ನೇ ನೋಡುತ್ತಾ ಕೇಳಿದರು.

"ನಮ್ಮ ಅಕ್ಕನ ಮಗಳನ್ನೇ ಮಾಡಿಕೊಂಡಿದ್ದೀನಿ"

"ಅದು ಸುಸೂತ್ರ ನೋಡು, ಹುಡುಕುವ ಗೋಜೇ ಇಲ್ಲ"

"ನಮ್ಮ ತಂದೆ ಹಟಹಿಡಿದು ಈ ಗಿಡ್ಡಿಯನ್ನು ಕೊರಳಿಗೆ ಕಟ್ಟಿದರು...." ಎಂದ ವೆಂಕಟೇಶ. ಮೊದಲಿಂದಲೂ ವೆಂಕಟೇಶನದು ಹ್ಯಾಸದ ಸ್ವಭಾವ. ಅವನ ಹಾಸ್ಯ ಹೆಚ್ಚಾಗಿ ಅವನನ್ನು, ಅವನ ಹೆಂಡತಿಯನ್ನು ಕುರಿತೇ ಇರುತ್ತಿತ್ತಲ್ಲದೆ ಮತ್ತೊಬ್ಬರನ್ನು ನೋಯಿಸುವ ಕುಚೋದ್ಯವಾಗಿರುತ್ತಿರಲಿಲ್ಲ. ಹೊಸದುರ್ಗ ಊರಿಗೆ ಕರೆದೊಯ್ಯುವ ಮೋಟಾರಿನ ಕಂಡಕ್ಟರು ''ಸ್ವಾಮೀ.... ಊರಿಗೆ ಬರುವವರೋ.... ಇಲ್ಲೇ ಇರುವವರೋ....'' ಎಂದು ಕೂಗಿದ.

''ನಡಿಯಿರಿ.... ಬಸ್ಸಿನವನು ನಮ್ಮನ್ನು ಇಲ್ಲೇ ಬಿಟ್ಟು ಹೋದಾನು" ಎಂದು ಮಾತು ಮುಗಿಸಿ ಮೋಟಾರು ಹತ್ತಿದರು.

ಪರಸಪ್ಪನವರ ಮೋಟಾರು ಗಲಾಟೆ ಮಾಡುತ್ತಾ ಸಾಗಿತ್ತು. ಮಧ್ಯದ ಸೀಟಿನಲ್ಲಿ ಕುಳಿತ ಸುಶೀಲೆ, ವೆಂಕಟೇಶನ ಹೆಂಡತಿ ಕಾಮಾಕ್ಷಿ ಆಗಲೇ ಸ್ನೇಹಿತರಾಗಿದ್ದರು. ರಂಗಮ್ಮ, ವೆಂಕಟೇಶ ಸುಬ್ಬರಾಯನ ವಿಚಾರವನ್ನೂ ಮಾತಾಡಿದರು. ಸುಶೀಲೆ ಏನೋ ಮಾತಾಡುತ್ತಿದ್ದವಳು ನಿಲ್ಲಿಸಿದಳು. ಆ ಸಂಗತಿ ನೆನಪಿಗೆ ಬಂದರೆ ಸುಬ್ಬರಾಯನ ಸುಂದರಮೂರ್ತಿ ಎದುರುಬಂದು

ನಿಲ್ಲುತ್ತಿತ್ತು. ಅವನ ಚಿತ್ರವನ್ನೇ ಧ್ಯಾನಿಸುತ್ತಾ ಹೊರಗೆ ನೆಲದತ್ತ ದಿಟ್ಟಿಸಿ ದಳು. ಸರಸರನೆ ರಸ್ತೆ ಭರದಿಂದ ಸಾಗಿತ್ತು.

ಮತ್ತೆ ಅವಳಿಗೆ ಎಚ್ಚರವಾದದ್ದು ಊರ ಮುಂದಿನ ದೊಡ್ಡ ಗಣಪತಿ ವಿಗ್ರಹ ಕಣ್ಣಿಗೆ ಬಿದ್ದಾಗಲೇ. ಮೋಟಾರು ಹೊಸದುರ್ಗ ತಲುಪಿತೆಂದು ಆಗ ಅವಳಿಗೆ ಅರಿವಾಯಿತು. ಮೋಟಾರು ನಿಂತಾಗ ನಗುತ್ತಾ ನಿಂತ ಜನಾರ್ಧ ನಯ್ಯ ಕಣ್ಣಿಗೆ ಬಿದ್ದ. ಹೆಂಡತಿಯ ಮುದ್ದು ಮುಖ ನೋಡಿ ಹಿಗ್ಗಿ ನಕ್ಕ. ಆದರೆ ಸುಶೀಲೆಯ ಮುಖ ಗಂಭೀರವಾಗೇ ಇತ್ತು. ವೆಂಕಟೇಶನನ್ನೂ ನೋಡಿ ಜನಾರ್ಧನ ಕುಶಲವೇ ಎಂದು ವಿಚಾರಿಸಿದ.

ವೆಂಕಟೇಶ ಕೂಲಿಯವನ ಹತ್ತಿರ ಸಾಮಾನು ಹೊರಿಸಿಕೊಂಡು ಹೊರಟ. ಮತ್ತೆ ಸುಶೀಲೆ–ಕಾಮಾಕ್ಷಿಗೆ ಮನೆಗೆ ಬರುತ್ತಿರುವಂತೆ ಆಹ್ವಾನಿ ಸಿದಳು. ಜನಾರ್ಧನಯ್ಯ ಹೆಂಡತಿ, ಅತ್ತೆಯೊಡನೆ ಕೋಟೆಯಲ್ಲಿದ್ದ ತನ್ನ ಮನೆಯ ಕಡೆ ಹೊರಟ.

ಮನೆಯ ಸ್ಥಿತಿ ಕಂಡು ಸುಶೀಲೆ ಗಂಡನಿಗೆ ಗದರುವಂತೇ ಹೇಳಿದಳು.

''ಇದೇನು ಮನೆಯನ್ನು ತಿಪ್ಪೆಯಂತೆ ಮಾಡಿದ್ದೀರಿ! ಹೆಂಗಸರು ಊರ ಲಿಲ್ಲದಿದ್ದರೆ ಗಂಡಸರು ಸೋಮಾರಿಗಳೇ ಆಗಬೇಕೇನು ?''

ಅತ್ತೆಯವರಿದ್ದಾಗಲೇ ಹೀಗೆ ಮಾತಾಡಿದ್ದು ಜನಾರ್ಧನನಿಗೆ ಅವಳು ಹೀಗೆನ್ನಬಾರದಿತ್ತೆಂದು ಮೂಗಿನ ತುದಿಗೆ ಸಿಟ್ಟು ಕಾಣಿಸಿತು. ಬಂದ ಸಿಟ್ಟನ್ನು ನುಂಗಿಕೊಂಡು

''ಸರ್ಕೀಟು ಕೆಲಸದಲ್ಲಿ ಮನೆಯನ್ನೆಲ್ಲಿ ನೋಡಿಕೊಳ್ಳಲಿ ?'' ಎಂದು ಹೇಳಿದ.

"ಗಂಡಸರು ಮನೆ ನೋಡಿಕೊಳ್ಳುತ್ತಾರೆಯೇ ಬಿಡು ಸುಶಿ...." ಎಂದು ರಂಗಮ್ಮ ಆ ಚಿಕ್ಕ ಮನೆಯನ್ನು ಓರಣಮಾಡ ತೊಡಗಿದಳು.

ಸುಶೀಲೆ ಜನಾರ್ಧನರಲ್ಲಿ ಸಾಮರಸ್ಯ ಮೂಡಿರಲಿಲ್ಲ. ಸುಶೀಲೆ ತನ್ನರಿ ವಿಲ್ಲದೆ ಒಂದಲ್ಲ ಒಂದು ಕಾರಣ ಅವನೊಡನೆ ವಿರಸ ಪ್ರಸಂಗವಾಗಲು ಅವ ಕಾಶ ಕೊಡುವಳು; ಸದಾ ಸಿಡಿಸಿಡಿ ಗುಟ್ಟುತ್ತಲೇ ಅವನನ್ನು ನೋಡುವಳು.

ಹೊಸದುರ್ಗಕ್ಕೆ ಬರುವುದಕ್ಕೆ ಮುಂಚೆ ಚಿಕ್ಕ ಅತ್ತೆಯ ಮಡಿವಂತಿಕೆ ಯಿಂದ ಪಾರಾಗಿ ಬರಲು ಸುಶೀಲೆ ಹಾಕಿದ ಹೊಂಚು ಜನಾರ್ಧನನನ್ನು

ಮರುಳು ಮಾಡುವ ಮೋಹದ ಮೋಡಿ ಹಾಕಿ ಇಲ್ಲಿಗೆ ಬರುವಂತೆ ಮಾಡಿತು. ಹೊಸ್ನಾಳಿಯಲ್ಲೇ ಬಂದು ಕೆಲವೇ ದಿನಗಳಾದ ಮೇಲೆ ಜನಾರ್ಧನನ ಬಗ್ಗೆ ಒಂದು ತರಹ ಅನಾದರಣೆ ಹುಟ್ಟಿ ತೊಡಗಿತ್ತು ಸುಶೀಲೆಗೆ.

ತಾನು ಸುರಸುಂದರಿ, ಸುಶಿಕ್ಷಿತೆ. ತನ್ನ ಸೊಗಸುಗಾರಿಕೆಗೆ ತಕ್ಕ ಪತಿ ತನಗೆ ದೊರೆಯಲಿಲ್ಲವಲ್ಲಾ ಎಂಬ ಅಂಥ ಅಹಂಕಾರ ಅವಳಲ್ಲಿ ತಲೆದೋರ ತೊಡಗಿತ್ತು. ಚಿಕ್ಕತ್ತೆ ಗೌರಮ್ಮನವರಿಗೂ ಇವಳ ಈ ರೀತಿಯ ವರ್ತನೆಯ ವಾಸನೆ ಬಡಿದಿತ್ತು. ಗಂಡನ ಬಗ್ಗೆ ಹೇಗಿರಬೇಕೆಂಬುವರ ಬಗ್ಗೆ ಎರಡು ಬುದ್ಧಿ ವಾದದ ಮಾತು ಹೇಳಿದ್ದೇ ಅವರ ತಪ್ಪಾಯಿತು. ಸೊಸೆಯನ್ನು ಅತ್ತೆ ಕಾಡಿ ಉರಿಸುತ್ತಿದ್ದಾಳೆಂದು ಬೊಬ್ಬೆಯಿಡಲು ಅದೇಕಾರಣವಾಗಿತ್ತು. ಆ ರಾತ್ರಿ ಕಿರುಮನೆಯಲ್ಲಿ ಜನಾರ್ಧನನಿಗೆ ಹೆಂಡತಿಯ ಕಡುಕೋಪದ ಪ್ರಥಮ ಅನುಭವ ವಾಯ್ತು. ಅವತ್ತು ಮಣಿದ ಜನಾರ್ಧನನ ದೌರ್ಬಲ್ಯದ ಕುರುಹನ್ನು ಸಂಪೂರ್ಣವಾಗಿ ಸುಶೀಲೆ ಉಪಯೋಗಿಸತೊಡಗಿದ್ದಳು.

ದಿನ ಕಳೆದಂತೆ ಅವಳ ಕೈ ಮೇಲಾಯಿತು. ಗೌರಮ್ಮನವರು ಕೂಡಾ ಒಮ್ಮೊಮ್ಮೆ ಬೇಜಾರುಮಾಡಿಕೊಳ್ಳುವರು. ಹೊಸದುರ್ಗಕ್ಕೆ ಹೊರಟು ನಿಂತಾಗ ಅವರಿಗೆ "ಬಾಯಿಲೆಯ ಯಜಮಾನರು ಈ ಸೊಸೆಯ ಕಿರಿಕಿರಿಯಿಂದ ಸದ್ಯ ಪಾರಾದರು" ಎಂದು ಅಂದುಕೊಂಡಿದ್ದಳು.

ಅಮಲ್ದಾರರ ಹೆಂಡತಿ, ಡಾಕ್ಟರ ಹೆಂಡತಿ ಮತ್ತೆ ಊರಿನ ಇತರ ಗಣ್ಯರ ಹೆಂಡಂದಿರ ಜೊತೆಗೇ ಇವಳ ಸ್ನೇಹ. ಅಚ್ಚುಗಟ್ಟಾಗಿ ಶೃಂಗರಿಸಿಕೊಂಡು ಅವರಿವರ ಮನೆಗೆ ಹರಟೆಗೆ ಹೊರಡುವುದು ಅವಳಿಗೆ ಪ್ರಿಯವಾಗಿತ್ತು.

ತಾಯಿ ರಂಗಮ್ಮ ಮಗಳಿಗೆ "ಇದೆಲ್ಲ ಸರಿಯಲ್ಲ; ಮೊದಲು ಗಂಡನ ಮನೆಯ ವ್ಯವಸ್ಥೆ, ಆ ಮೇಲೆ ಶೃಂಗಾರ, ಸ್ನೇಹಿತರು" ಎಂದು ಹೇಳಿದ್ದು ಅವಳ ಕಿವಿಗೇ ಇಳಿಯಲಿಲ್ಲ.

ಜನಾರ್ಧನನ ಕಚೇರಿ ಕೆಲಸದ ವೈಖರಿಯೂ ಇದಕ್ಕೆ ಹೆಚ್ಚು ಕಾರಣ ವಾಗಿತ್ತು. ಮುಂಜಾನೆ, ಹೋದರೆ ಊಟಕ್ಕೆ ಬರುವುದು. ಮತ್ತೆ ಊಟ ಮಾಡಿ ರುಮಾಲು ಹಾಕಿದರೆ ರಾತ್ರಿಯೇ ಬರುವುದು. ಮನೆಯಲ್ಲಿನ ವಾತಾ ವರಣವರ್ಧ ಕಚೇರಿಯ ಇಳಿಮೇಜು ಅವನನ್ನು ಆಕರ್ಷಿಸಲು ಕಾರಣವಾ ಗಿತ್ತು. ಅವನೂ ಭಯಸ್ತ, ಮೇಲಧಿಕಾರಿಗಳಿಗೆ ಅಂಜಿ ನಡೆಯುವ. ಸದಾ

ಕಚೇರಿಯ ಕಾಗದ ಪತ್ರಗಳಲ್ಲೇ ಕೈ ಆಡಿಸುತ್ತಿದ್ದ. ಹೀಗಾಗಿ ನೆಚ್ಚಿನ ಮಡದಿಯಿಂದಲೂ ದಿನದ ಬಹುಭಾಗ ಹೊರಗಿರುತ್ತಿದ್ದ. ಇನ್ನು ಗಂಡ ಹೀಗಿಂದ ಮೇಲೆ ಹೆಂಡತಿಗೆ ಬೇಸರವಾಗುವುದಿಲ್ಲವೆ? ಅದಕ್ಕೆ ಅವಳೂ ತನ್ನ ಸ್ನೇಹಿತರು, ಹೊಸ ಕಸೂತಿಗಳಲ್ಲಿ ಹೆಚ್ಚು ಆಸಕ್ತಿ ವಹಿಸಿ ಕಾಲ ಕಳೆಯುವಳು.

ವೆಂಕಟೇಶನ ಹೆಂಡತಿ ಕಾಮಾಕ್ಷಮ್ಮ ಆಗಾಗ್ಗೆ ಮನೆಗೆ ಬಂದು ಹೋಗುವಳು. ಒಮ್ಮೆ ಹೀಗೇ ಬಂದಾಗ ತನ್ನ ಯಜಮಾನರು ಅವರ ಸ್ನೇಹಿತರಾದ ಸುಬ್ಬರಾಯ ಎನ್ನುವವರು ಸುಶೀಲೆಯನ್ನು ಹರಿಯುವ ತುಂಬು ಹೊಳೆಯಿಂದ ಪಾರುಮಾಡಿದ ಸಂಗತಿ ಹೇಳಿದ್ದನ್ನು ತಿಳಿಸಿದ್ದಳು.

ಸುಶೀಲೆಗೆ ಸುಬ್ಬರಾಯನ ನೆನಪು ಬಂದರೆ ಮೈ ಪುಳುಕಿತವಾಗುವುದು. ಆವಾಗ ವೃಥಾ ಜನಾರ್ಧನನ ಮೇಲೆ ರೇಗುವಳು. ಪಾಪ ಪ್ರಾಣಿ ಆಫೀಸಲ್ಲೂ ಮನೆಯಲ್ಲೂ ಜೈಸಿಕೊಂಡು ಪರಿತಪಿಸಬೇಕಾಗುತ್ತಿತ್ತು. ಕಾಮಾಕ್ಷಿ ಈ ಸಂಗತಿ ಹೇಳಿದ ದಿನವೂ ಹೀಗೆ ಆಯಿತು. ಗಂಡ ಹೆಂಡಿರಿಬ್ಬರೂ ಮಾತಿಗೆ ಮಾತು ಬೆಳಸಿ ಉಪವಾಸ ಮಲಗಿದರು.

ರಂಗಮ್ಮ ಮಗಳ ವರ್ತನೆ ಖಂಡಿಸಿದಳು. ಬುದ್ಧಿ ಹೇಳಿದಳು. ಅವಳು ಕೇಳಬೇಕಲ್ಲ? ಮೊಂಡು ವಾದ ಸಾಧಿಸಿದಳು. ಮಗಳ ಗುಣ ಹೀಗೆ ಬೆಳೆದು ಬಂದದ್ದು ಅವರಿಗೇ ಆಶ್ಚರ್ಯವಾಯಿತು ಶಿವಮೊಗ್ಗೆಯ ಸುಶೀಲೆಗೂ. ಮದುವೆಯಾದ ಜನಾರ್ಧನನ ಹೆಂಡತಿ ಸುಶೀಲೆಗೂ ಅಜಗಜಾಂತರವಿತ್ತು.

ಕಳ್ಳೂರುಕಟ್ಟೆಯಿಂದ ಅಣ್ಣನ ಕಾಗದ ಬಂದು ರಂಗಮ್ಮ ಹೊರಡಬೇಕಾಯಿತು. ಮಗಳಿಗೆ ಹೇಳುವುದರಿಂದ ಪ್ರಯೋಜನವಿಲ್ಲವೆಂದು ಅಳಿಯದೇವರಿಗೇ ಅವಳನ್ನು ದಾರಿಗೆ ತರುವಂತೆ ಹೇಳಿ ಹೊರಟುಹೋದರು.

ಈ ಎಲ್ಲ ಅಶಾಂತಿ ಅಸಮಾಧಾನದ ಅವಾಂತರಕ್ಕೆ ಕಾರಣ ಸುಶೀಲೆಗೆ ಮಕ್ಕಳಾಗದ್ದು. ತನಗೊಂದು ಮಗುವಾಗಬೇಕೆಂದು ಬಯಸಿ ಬಯಸಿದಂತೆ ತಿಂಗಳುಗಳುರುಳಿದಂತೆ ತಾನು ಬಂಜೆಯಾಗೇ ಉಳಿಯುವೆನೇ ಎನ್ನುವ ಭೀತಿ ಅವಳಲ್ಲಿ ಮನೆ ಮಾಡಿತು.

ಈ ಭೀತಿ ಜನಾರ್ಧನನ ಮೇಲೆ ಆ ಕ್ರೋಶಕ್ಕೆ ಎಡೆ ಕೊಟ್ಟಿತ್ತು. ಆ ಕ್ರೋಶದ ದೆಸೆಯಿಂದ ವಿನಾಕಾರಣ ಅವನ ಮೇಲೆ ಇಲ್ಲದ್ದು ಸಲ್ಲದ್ದಕ್ಕೆ ಬೇಜವಾಬ್ದಾರಿಯಿಂದ ಮಾತಾಡುವ ಮನೋಭಾವ ಅವಳಲ್ಲಿ ಬೆಳೆದು

ಬಂದಿತ್ತು. ಇವೆಲ್ಲ ಅಸಮಾಧಾನ ಅಪ್ರಿಯ ವಾತಾವರಣಕ್ಕೆ ಕಚೇರಿಯೇ ಸಿದ್ಧೌಷಧವೆಂದು ಜನಾರ್ಧನ ಸದಾ ತಾಲ್ಲೋಕು ಕಚೇರಿಯಲ್ಲೇ ಕಾಲ ಕಳೆಯುವ.

ದಿನ ಕಳೆದಂತೆ ಮನೆಯ ಮೇಲಿನ ಮೋಹವೇ ಕುಂಠಿತವಾಗುತ್ತಾ ಬಂದಿತ್ತು. ಮದುವೆಯಾದ ಹೊಸದರಲ್ಲಿ ಅಪ್ಸರೆಯನ್ನು ಆಳುವ ಅಮರನಂತಿರುವೆನೆಂದು ಹಿಗ್ಗಿದ ಜನಾರ್ಧನಯ್ಯ ಅಪ್ಸರೆಗೆ ಸೆರೆಸಿಕ್ಕಿ ಆಳಿನ ಪಾಡು ತನಗಾಗಿರುವುದನ್ನು ಅರಿಯದಿರಲಿಲ್ಲ.

ಸಂಬಳ ಬಂದಕೂಡಲೆ ಅವಳ ಕೈಗೆ ಹಾಕಿಬಿಡಬೇಕು. ಮತ್ತೆ ಒಂದಾಣೆ ನಸ್ಯದ ಪುಡಿಗೆ ಅವಳಿಂದಲೇ ಕೇಳಿ ತೆಗೆದುಕೊಳ್ಳುವ ಪಾಡಾಗುತ್ತಿತ್ತು. ಅನ್ನಲಾರದೆ ಅನುಭವಿಸುತ್ತಿದ್ದ ಜನಾರ್ಧನ. ಅವನಿಗೂ ಈ ಮನೆಯ ವಾತಾವರಣ ಹರ್ಷ ರೂಪ ತಾಳಬೇಕಾದರೆ ಒಂದು ಪುಟ್ಟ ಪಾಪ ಇದ್ದರೆ ಒಳ್ಳೆಯದೆಂದು ಅನ್ನಿಸುವುದು. ಇದಕ್ಕೆ ಕಾರಣ ವೆಂಕಟೇಶನ ಹೆಂಡತಿ ಹೆತ್ತದ್ದೇ ಕಾರಣ. ವೆಂಕಟೇಶನೂ ಕಾಮಾಕ್ಷಿಯ ಮೇಲೆ ಸಿಡಿಮಿಡಿಗುಟ್ಟಿ ಬಲವಂತಕ್ಕೆ ಗಂಟುಬಿದ್ದ ಕುಜ್ಜೆ ಎಂದು ಕಾಡುತ್ತಿದ್ದುದು ಈ ಪುಟ್ಟ ಕೂಸಿನ ನಗುವಿನಿಂದ ಮಾಯವಾಗಿತ್ತು. ಗಂಡ ಹೆಂಡಿರಲ್ಲಿ ಸಂಸಾರ ಸುಖದ ಸರಪಣಿಗೆ ಶಾಶ್ವತವಾಗಿ ಹಾಕಿದ ಬೆಸಿಗೆಯಂತಿತ್ತು ಆ ಕೂಸು ಮನೆಯಲ್ಲಿ ಅವತರಿಸಿದ್ದು. ಹೀಗೆಯೇ ತನ್ನ ಮನೆಯೂ ಬೆಳಗೀತೆಂದು ಅವನು ಆ ಸುದಿನಕ್ಕಾಗಿ ಕಾದು ಅಂದಿನ ನಗುವಿಗೆ ಇಂದಿನ ನೋವನ್ನು ಸಹಿಸಿದ್ದ.

ಸುಮಿತ್ರೆ ಸದಾ ಡಾಕ್ಟರ ಮನೆಯಲ್ಲಿ ಅವರ ಹೆಂಡತಿಯೊಡನೆ ಕಸೂತಿ ಕುಸುರಿ ಕೆಲಸಗಳಲ್ಲಿ ನಿರತಳಾಗಿ ಒಮ್ಮೊಮ್ಮೆ ಗಂಡನೇ ಬಂದು ಮನೆಯ ಬೀಗದ ಕೈ ಕೇಳಿ ಕೊಂಡೊಯ್ಯಬೇಕಾಗುತ್ತಿತ್ತು. ಸಹನೆಯಿಂದ ಬಾಗಿ ನಡೆಯುತ್ತಿದ್ದ ಜನಾರ್ಧನ.

೧೩

"ಅಯ್ಯೋ ಅಕ್ಕನ ಗತಿ ಕಡೆಗೂ ಹೀಗಾಯಿತೇ! ಬನ್ನಿರೆಂದು ಬೇಡಿದರೂ ಬಾರದೆ ದೇಹವನ್ನೇ ಸವೆಸಿ ಇಲ್ಲದಾದರೇ; ಮನೆಯೇ ಹಾಳಾಗಿ ಹೋಯಿತೇ" ಎಂದು ಗಟ್ಟಿಯಾಗಿ ರೋದಿಸಿದಳು ರಾಜೀವಿ. ಪದ್ಮಾವತಮ್ಮ ಸಮಾಧಾನ ಹೇಳಿದರು.

ದುಃಖಪೂರಿತ ಕಣ್ಣುಗಳಿಂದ ತಲೆಯ ಮೇಲೆ ಕೈಹೊತ್ತು ಕುಳಿತಿದ್ದ ಸುಬ್ಬರಾಯ. ಪಕ್ಕದ ಮನೆಯ ರಾಮುಸ್ವಾಮಿಗಳ ಹೆಂಡತಿ ಪದ್ಮಾವತಮ್ಮನವರು ಇವರಿಗೋಸ್ಕರ ಎಸರಿಗಿಟ್ಟು ಇನ್ನು ಹತ್ತು ದಿನದ ಸೂತಕ ಕಳೆಯುವವರೆಗೂ ಬೇಕಾದ ಸಾಮಾನು ಹೊರಕ್ಕೆ ತೆಗೆದುಕೊಟ್ಟರು. ರಾಮುಸ್ವಾಮಿ ಸಂತೈಸುತ್ತಿದ್ದ.

"ಹೀಗೇ ಸುಬ್ರಾಯ–ಜವರಾಯ ಯಾವ ಘಳಿಗೇಲಿ ಕರೆದೊಯ್ತಾನೋ ಹೇಳಲಿಕ್ಕೆ ಆಗೋಲ್ಲ"

"ಒಂದೊಂದುಸಲ ಸುತ್ತಮುತ್ತಲೂ ಇರುವವರೇ ಜವರಾಯರಾಗುತ್ತಾರೆ"

"ಅಂದರೆ...."

"ಅಂದರೇ ಈ ನಮ್ಮ ಅತ್ತಿಗೆಗೆ ನಮ್ಮ ಅಣ್ಣನೇ ಜವರಾಯನಂತಿದ್ದ"

"ಇದೇನು ಮಾತು ಸುಬ್ಬರಾಯ?"

"ಮತ್ತಿನ್ನೇನು ರಾಮುಸ್ವಾಮಿ, ಸಾವಿರಸಲ ಹೇಳಿದ್ದಾಯಿತು. ಇದು ಆಸವಾಲದ ಖಾಯಿಲೆ, ಶಿವಮೊಗ್ಗಾಕ್ಕೋ, ಬೆಂಗಳೂರಿಗೋ ಕರೆದುಕೊಂಡು ಹೋಗಿ ಒಳ್ಳೆಯ ಡಾಕ್ಟರಿಗೆ ತೋರಿಸಬಾರದೇ ಅಂತ....ಮತ್ತೂ ಆ ಮೂಲಿಕೆ ಈ ತೈಲ, ಅರ್ಧಂಬರ್ಧ ಆಯುರ್ವೇದ ಕಲಿತ ನಕಲಿ ಪಂಡಿತರ ಗುಳಿಗೆ ಭಸ್ಮಗಳಿಗೆ ಅತ್ತಿಗೆಯೇ ಭಸ್ಮವಾದರು"

"ಅಷ್ಟೂ ತಿಳಿಯೋಲ್ಲವೆ ನಿನ್ನ ಅಣ್ಣಂದಿರಿಗೆ?"

"ಅದೇನು ಮಂಕು ಕವಿದಿತ್ತೊ! ಅನ್ಯಾಯವಾಗಿ ಅತ್ತಿಗೆಯನ್ನು ಕೊಂದ ಆ ಅತ್ತೆ ಒಬ್ಬಾಕೆ ಮನೆಯಲ್ಲಿ ಸೇರಿಕೊಂಡು ಮಗಳಿಗೇ ಮೃತ್ಯುವಂತಾದಳು. ಅವಳದ್ದೇ ಔಷಧ ಬೇರೆ ನಡೆದಿತ್ತು"

"....ಆಗಿಹೋದ ಮೇಲೆ ಅಂದೇನು ಪ್ರಯೋಜನ ಬಿಡಿ"

"....ಅತ್ತಿಗೆಯವರಂಥ ಹೆಣ್ಣು ಸಿಕ್ಕುವುದು ಅಪುರೂಪ. ಸಂಸಾರದಲ್ಲಿ ಎಷ್ಟು ಅಚ್ಚುಗಟ್ಟು ಏನು ತಾನು! ಮನೆಯನ್ನು ಎಷ್ಟು ಚೆನ್ನಾಗಿಟ್ಟಿರುತ್ತಿದ್ದರು? ನೆನೆಸಿಕೊಂಡರೆ ದುಃಖವಾಗುತ್ತೆ. ಒಳ್ಳೆಯವರು ಬಹಳ ದಿನ ಬದುಕೋಲ್ಲ ಅನ್ನೋದು ನಿಜ....ಮಹತಾಯಿ ಸತ್ತು ಸ್ವರ್ಗದಲ್ಲಿದ್ದಾಳೆ. ನಮ್ಮನ್ನು ಬಿಟ್ಟು ಹೋದರಲ್ಲಾ ಅನ್ನೋದೊಂದೇ ವ್ಯಥೆ ರಾಮಸ್ವಾಮಿ"

"ನಿಜ ಸುಬ್ಬರಾಯ, ಪ್ರಿಯವಾದ ವಸ್ತು ಇಲ್ಲವಾದಾಗ ಅತೀವ ಯಾತನೆ ಆಗುವುದು ಸ್ವಾಭಾವಿಕ. ಏನುಮಾಡಲಿಕ್ಕಾಗತ್ತೆ? ಸಮಾಧಾನ ತಂದುಕೊಬೇಕು"

"ಏನು ಸಮಾಧಾನವೋ ಏನೋ–ಪ್ರಪಂಚ ಹೀಗೇ ಅಲ್ಲವೆ?"

"ಹುಟ್ಟಿದಾಗ ನಗು–ಸತ್ತಾಗ ದುಃಖ"

"....ರಾಮಸ್ವಾಮಿ ಈ ರಜದ ಚೀಟಿ ಸಾಹೇಬರಿಗೆ ತಲುಪಿಸಿ ಬಿಡಪ್ಪ...."

"ಎಷ್ಟುದಿನ ರಜಾ ಹಾಕಿದ್ದಿ?"

"ಇವತ್ತು, ನಾಳೆ"

"ಅಮ್ಮೇನಹಳ್ಳಿಗೆ ಹೋಗಬೇಕೇನು?"

"ಮೊನ್ನೆ ತಾನೇ ಹೋಗಿ ಬಂದಿದ್ದೇನೆ.... ಹೋದರೆ ಹನ್ನೆರಡನೇ ದಿನ ಹೋಗಿಬರಬೇಕು. ಅಣ್ಣನ ಸಮಾಧಾನಕ್ಕಲ್ಲದಿದ್ದರೂ, ಆ ಮಹತಾಯಿಯ ಆತ್ಮಶಾಂತಿಗೆ ಹೋಗಬೇಕು. ನೋಡೋಣ ಆ ಹೊತ್ತಿಗೆ ಏನು ಬುದ್ಧಿ ಬರುತ್ತೋ!

"....ಸರಿ ನಾನು ಬರ್ತಿನಿ ಸುಬ್ರಾಯ–ಕಚೇರಿಗೆ ಹೊತ್ತಾಯಿತು"

"ಮುರುಗಯ್ಯನಿಗೆ ಹೇಳು – ಇವತ್ತು ಸಿದ್ದವ್ವನಹಳ್ಳಿ ರಂಗಪ್ಪ ಬರ್ತಿನೀಂತ ಹೇಳಿದ್ದ–ಅವನು ಬಂದರೆ ಇಲ್ಲಿಗೇ ಕಳಿಸಿಕೊಡಲಿ"

"ಏನು ವಿಚಾರ...."

"ಇರುತ್ತಲ್ಲಪ್ಪಾ ಶಾಖಾಯ ಲವಣಾಯ....ನಿನಗೆ ಬಿಚ್ಚಿಹೇಳಬೇಕೇ...."

"ಸರಿ.... ಲೇ ಅಡಿಗೆಮಾಡಿ ಬಡಿಸಿಬಿಡೇ ಇವರಿಗೆಲ್ಲಾ" ಎಂದು ಪದ್ಮಾವತಿಗೆ ಹೇಳಿ ರಾಮಸ್ವಾಮಿ ಹೊರಬಿದ್ದ.

ಸರಸ್ವತಿಗೆ ಒಂದು ವರ್ಷದ ಹುಟ್ಟಿದ ಹಬ್ಬ ಮಾಡಬೇಕೆಂದು ಗಂಡ ಹೆಂಡತಿ ಸವರಿಸುತ್ತಿದ್ದ ಸಮಯಕ್ಕೆ ಸುಮಿತ್ರೆಯ ಸಾವಿನ ಸುದ್ದಿ ಬಂದಿತ್ತು. ಅನಿವಾರ್ಯವಾಗಿ ಹುಟ್ಟಿದ ಹಬ್ಬ ಮುಂದುವರೆದಿತ್ತು.

ರಾಜೀವಿಗೆ ನಿಜಕ್ಕೂ ಸ್ವಂತ ಅಕ್ಕನನ್ನು ಕಳೆದುಕೊಂಡ ದುಃಖವಾಗಿತ್ತು. ಎಲ್ಲಕ್ಕಿಂತ ರಾಜೀವಿಗೆ ಕೋಪ ಬಂದಿದ್ದು ವೆಂಕಮ್ಮನ ಮೇಲೆ. ಆ ರಾಕ್ಷಸಿಯೇ ಮಗಳ ಸಾವಿಗೆ ಕಾರಣವೆಂದು ಅವಳ ನಂಬಿಕೆ. ಈ ವಿಚಾರವನ್ನು ಅತಿಪ್ರಯಾಸದಿಂದ ಸುಬ್ಬರಾಯನಿಗೆ ಹೇಳದೆ ಬಚ್ಚಿಟ್ಟಿದ್ದಳು ರಾಜೀವಿ. ಹೇಗೆ ಹೇಳುವುದು ? ಇವರಿದನ್ನು ನಂಬುವರೆ ? ಅಣ್ಣ ತಮ್ಮಂದಿರಲ್ಲಿ ವಿರಸ ಹೆಚ್ಚಲು ಇದು ಕಾರಣವಾದೀತಲ್ಲವೆ ? ಎಂಬ ಹತ್ತಾರು ಪ್ರಶ್ನೆ ಅವಳನ್ನು ತಡೆದಿತ್ತು. ಅನೇಕಬಾರಿ ಹೇಳಲು ತುಟಿಗೆ ಬಂದದ್ದನ್ನು ಮತ್ತೆ ಪ್ರಯಾಸದಿಂದ ನುಂಗಿದ್ದಳು.

ಇಷ್ಟು ದಿನ ತಡೆದದ್ದು ಅಂದು ರಾತ್ರಿ ತುಂಬಿದ ಕೆರೆಯ ಕೋಡಿಯಂತೆ ಆ ಸುದ್ದಿಯನ್ನು ಹೊರಗೆಡಹಿದಳು. ಈ ವಿಚಾರಕ್ಕೆ ಪ್ರವೇಶ ದೊರೆತದ್ದು ಸುಬ್ಬರಾಯನಿಂದಲೆ.

"ಲಕ್ಷ್ಮಣ ಕೂಡಾ ಆ ಖಾಯಿಲೆಯ ಹೆಂಡತಿಯೊಡನೆ ತುಂಬಾ ದಿನ ಏಗಿ ಕಷ್ಟಪಟ್ಟಿದ್ದ ಪಾಪ" ಎನ್ನುವ ಪಶ್ಚಾತ್ತಾಪದ ಮಾತು ರಾಜೀವಿಗೆ ಹಿಡಿಸಲಿಲ್ಲ"

"....ಏನು ಪಟ್ಟಿದ್ದು ಮಹಾಕಷ್ಟ ?"

"ಬಿಡಿಸಿ ಹೇಳಬೇಕೆ ರಾಜೀವಿ–ನೀನು ಊರಲ್ಲಿ ಇಲ್ಲದಾಗ ನನ್ನ ವ್ಯಥೆ ಏನು ಹೇಳಲಿ ?"

"ಅಗಲಿದ್ದೂ ಸುಖ ಅನುಭವಿಸುವವರಿಗೆ ವ್ಯಥೆ ಎಲ್ಲಿಂದ ಬಂತು ?"

"ನಿನ್ನ ಮಾತಿನ ಅರ್ಥ ತಿಳಿಯಲಿಲ್ಲ"

"ತಿಳಿಯದಿದ್ದರೇ ಉತ್ತಮ"

"ಅದು ಹೇಗೆ ಹೇಳಬಾರದೇ....?"

"....ಹೇಗೆ ಹೇಳಲಿ.... ನನ್ನ ಅಕ್ಕನಿಗೆ ದ್ರೋಹಬಗೆದ ವಿಚಾರವನ್ನು"

—ಎಂದಾಗ ಸುಬ್ಬರಾಯನಿಗೆ ಕುತೂಹಲ ಕೆರಳಿತು, ''ಅದು ಏನು ಹೇಳಬಾರದೇ ? '' ಎಂದು ಕೇಳಿದ.

"........................"

''ಏಕೆ ರಾಜೀವಿ....ಗಂಡನೊಡನೆ ಹೇಳಲಾರದಂಥ ಗುಟ್ಟಿ? "

"ಯಾವ ಬಾಯಿಂದ ಹೇಳಲಿ ?"

"...................." ಕಾತುರನಾಗಿ ಕಾದಿದ್ದ.

"ವೆಂಕಮ್ಮ....ನಿಮ್ಮಣ್ಣಂದಿರಿಗೆ ಏಕಾಕಿಯಾಗಿ ಮಲಗಲು ಬೇಸರವೆಂದು ಅವರ ಜೊತೆ ಗೂಡಿ ಮಲಗಿ ಬೇಸರ ಕಳೆದಿದ್ದರು"

ಸುಬ್ಬರಾಯನಿಗೆ ಸಿಡಿಲು ಬಡಿದಂತಾಯಿತು. ಅಂದು ತಿಪ್ಪಯ್ಯ ವೆಂಕಮ್ಮನ ಮೇಲೆ ಲಕ್ಷ್ಮಣನ ಮೇಲೆ ರೇಗಿ ಮಾತಾಡಿದ ಕಾರಣ ಇಂದು ಅವನಿಗರ್ಥವಾಯಿತು.

"ನಿನಗೆ ಹೇಗೆ ಗೊತ್ತು ? ಅನ್ಯಥಾ ಅಣ್ಣನನ್ನು ನಿಂದೆಗೆ ಗುರಿಮಾಡ ಬೇಡ. ಸುಳ್ಳಾಗಿದ್ದರೆ ಸೀಳಿ ತೋರಣ ಕಟ್ಟೇನು'' ಎಂದು ಗದರಿ ಮಾತಾಡಿದ.

"ಗಂಡನೊಡನೆ ಸುಳ್ಳು ಹೇಳಿದ್ದರೆ ಸೀಳಿಸಿಕೊಳ್ಳಲು ಸಿದ್ಧ.... ಕಣ್ಣಾರೆ ಕಂಡವಳಿಗೇ ಗೊತ್ತು ಆ ಹೊಲಸು ಜೀವನದ ವೈಖರಿ...."

ಎಂದು ಅಮ್ಮೇನಹಳ್ಳಿಯಲ್ಲಿ ಅಂದು ನಡೆದ ಸಂಗತಿಯನ್ನು ಸವಿಸ್ತಾರ ವಾಗಿ ಹೇಳಿದಳು ರಾಜೀವಿ.

ಇದನ್ನು ಕೇಳಿ ಹನ್ನೊಂದನೆಯ ದಿನವೂ ಅಲ್ಲಿಗೆ ಹೋಗುವುದು ಬೇಡ ಎಂದೆನ್ನಿಸಿತು ಸುಬ್ಬರಾಯನಿಗೆ.

ವೆಂಕಮ್ಮನ ಬಗ್ಗೆ ಲಕ್ಷ್ಮಣನ ಬಗ್ಗೆ ಅಸಹ್ಯ ವೇದನೆಯೊಡನೆ ಅತ್ಯಂತ ತಿರಸ್ಕಾರ ಭಾವ ಮೂಡಿ ಬಂದು ''ಎಂತಹ ಅಣ್ಣನಿವ" ಎಂಬ ವ್ಯಥೆಯೂ ತನ್ನ ತಂದೆಯವರಂಥ ನಿಷ್ಠಾವಂತ ಪಟ್ಟಾಭಿರಾಮದೇವರ ಭಕ್ತರ ಹೊಟ್ಟೆ ಯಲ್ಲಿ ಅನಾಚಾರ ಪ್ರವೃತ್ತಿಯ ಜೇಷ್ಟಪುತ್ರ ಹುಟ್ಟಿದ್ದು ಎಂತಹ ಅಜಗಜ ನ್ಯಾಯವೆಂಬ ಯೋಚನೆಯೂ ಸುಬ್ಬರಾಯನನ್ನು ಕಾಡಿತು. ಮುಂದೆ ಮನೆಯ ಗತಿಯೇನು ? ಖಾಯಿಲೆಯವಳಾದರೂ ಸುಮಿತ್ರೆ ಇದ್ದದ್ದು ಮನೆಗೆ ಲಕ್ಷಣವಿತ್ತು, ಯಜಮಾನತಿಯಿದ್ದ ಮನೆಯ ಕಳೆಯಿತ್ತು.

ತಿಪ್ಪಯ್ಯನಿಗೆ ಕಾಗದ ಬರೆದು ವಿಷಯಗಳನ್ನು ತಿಳಿದುಕೊಳ್ಳುವುದೆಂದು ಯೋಚಿಸಿದ್ದ ಸುಬ್ಬರಾಯ ಬರೆದೂ ಬರೆದ.

ಹತ್ತನೆಯ ದಿನ ಪದ್ಮಾವತಮ್ಮನವರು ಬಂದು ರಾಜೀವಿಗೆ ನೀರು ಹಾಕಿದರು. ಸೂತಕ ತೀರಿಹೋಯಿತು.

ಮನೆಯನ್ನೆಲ್ಲಾ ಸಾರಿಸಿ ಗುಡಿಸಿ, ದೇವರ ಗೂಡನ್ನು ಶುಭ್ರಮಾಡಿ ದೀಪಹಚ್ಚಿ ಪೂಜೆ ಮಾಡಿದಳು. ಸುಮಿತ್ರಕ್ಕನ ಆತ್ಮಕ್ಕೆ ಶಾಂತಿ ದೊರಕಲೆಂದು ದೇವರಲ್ಲಿ ಪ್ರಾರ್ಥಿಸಿದಳು.

ಸುಬ್ಬರಾಯನ ಕಾಗದಕ್ಕೆ ತಿಪ್ಪಯ್ಯನಿಂದ ಬಂದ ಉತ್ತರ ಅವನನ್ನು ಅಧೀರನನ್ನಾಗಿ ಮಾಡಿತು. ಕೈಲಿದ್ದ ಕಾಗದ ಜಾರಿಬಿತ್ತು....ರಾಜೀವಿ ಅದನ್ನೆತ್ತಿಕೊಂಡು ಓದಿದಳು–

"ಇನ್ನೇನು ಗತಿ...."

"ದೇವರೇ ಗತಿ"

"ಹಾಗಂದರೆ ಆಗುತ್ತದೆಯೇ–ನೀವು ಹೋಗಿ ಬನ್ನಿ"

"ಅಣ್ಣನಿಂದ ಒಂದು ಕಾಗದ ಬರಬೇಡವೆ–ಸತ್ತ ಸುದ್ದಿಯನ್ನು ಮುಟ್ಟಿಸಿದ ಆರುಕಾಸಿನ ಕಾರ್ಡು ವಿನಃ ಮತ್ತೇನೂ ಸುದ್ದಿಯನ್ನೆ ಬರೆಯಬಾರದೆ ಅವನು ?"

"ಭಾವನವರು ಕಾಗದ ಬರೆಯುವುದೇ ಅಪರೂಪ"

"ಅದೇನೋ ನಿಜ. ಇಂಥಾ ವಿಷಯಗಳಿಗೇ ಆತ ಬರೆಯುವುದು"

"ಈಗೇನು ಮಾಡ್ತೀರಿ ?"

"ಏನು ಮಾಡಲೀಂತ಼್ಲೆ ಯೋಚನೆ ಮಾಡ್ತಾ ಇದ್ದೀನಿ"

"ಕೈಮೀರಿ ಹೋಗಿದೆಯೇ ?"

"ಕಾಗದ ನೋಡಿಗೆಯೋ ಇಲ್ವೋ ?"

"ಅವರು ಬರೆದಿರುವುದರಲ್ಲಿ,–ಈ ವ್ಯವಹಾರದಲ್ಲಿ ನಾನು ತಲೆಹಾಕಬಾರದು. ನನ್ನ ಮಾತಿಗೆ ಬೆಲೆಕೊಡದೆ ಇದ್ದರೆ ನನಗೆ ಅವಮಾನಾಂತ ಅಂದಮೇಲೆ ಮೊದಲಿನಂತೆ ಪರಿಸ್ಥಿತಿ ಈಗಿಲ್ಲ ಅಂತ ಆಯ್ತು"

"ನೀನೊಬ್ಬಳು.... ಎಲ್ಲಾವೂ ವೆಂಕಮ್ಮನ ಕೈಯ್ಯಲ್ಲಿದೆ ಅಂದೆ. ಸ್ಪಷ್ಟ ವಾಗಿ ಬರೆದಿರೋದು ನೋಡು–ಲಕ್ಷ್ಮಣನ ಅಧಿಕಾರವೇ ನಡೆಯೋಲ್ಲ ಅಂತ ಮತ್ತೆ ಬೇರೆ ಕೇಳ್ತಿಯ ? "

"ಇನ್ನೊಂದು ಲಗ್ನ ಅಂತ ಏನೋ ಬರೆದಿದ್ದಾರೆ"

"ಅದೇ ಆ ವೆಂಕಮ್ಮನ ಮಸಲತ್ತು–ಅದೂವೆ. ಆಕೆ ಅಕ್ಕನ ಮಗಳು. ನೀನು ನೋಡಿಲ್ಲವೆ ? "

"ನಾನು ನೋಡಿಲ್ಲ"

"ಅದೇ ಕಣೆ–ನಮ್ಮ ಮನೆಗೂ ಒಂದುಸಲ ಕರ್‍ಕೊಂಡು ಬಂದಿದ್ರು ನೋಡು...."

"ಯಾವಾಗ ಹೇಳಿ ? "

"ಸರಿ ಸರಿ ನೀನು ಇರಲಿಲ್ಲ ಅವಾಗ. ಒಂದು ಸಲ ಬಂದಿತ್ತು ಆ ಹುಡುಗಿ"

"ಚೆನ್ನಾಗಿದೆಯೋ ? "

"ಸುಮಾರಾಗಿದೆ. ಅಲ್ವೆ, ಅತ್ತಿಗೆ ಹೋಗಿ ಇನ್ನು ಹನ್ನೆರಡು ದಿನ ಕೂಡಾ ಆಗಿಲ್ಲ; ಲಕ್ಷ್ಮಣನ ಮದುವೆಗೆ ಏರ್ಪಾಟು ಮಾಡ್ತಾಇದ್ದಾರಲ್ಲಾ! ಅವ ರೇನು ಮನುಷ್ಯ ಜಾತೀವಲ್ಲ ಅಂತ ಕಾಣುತ್ತೆ. ರಾಮರಾಮ–ಊಹಿಸೋಕೂ ಅಸಾಧ್ಯವಾದ ಸಂಗತಿ...."

"ಭಾವನವರೇಕೆ ಹೀಗಾದರು ? "

"ಇವರ ಪರಿವಾರವೆಲ್ಲಾ ಸಿಕ್ಕೊಂಡು ಮುತ್ತಿ ಅವನನ್ನ ದಿಕ್ಕು ಕೆಡಿಸಿ ಬುದ್ಧಿಭ್ರಮಣೆ ಆಗೋ ಹಾಗೆ ಮಾಡಿರಬೇಕು........"

"....ನೀವು ಹೋಗಿ ಬಂದರೆ ವಾಸಿ"

"ಹೌದು, ನಾನು ಹೋಗಿ ಮೊದಲು ಪಾಲಿನ ವಿಚಾರ ಇತ್ಯರ್ಥಮಾಡಿ ನನ್ನ ಪಾಲಿಂದು ನಾನು ಬಂದೋಬಸ್ತು ಮಾಡಿಕೊಂಡರೇ ಬದುಕಿದೆ. ಇಲ್ದೆ ಇದ್ರೆ ಆ ಹಿರೇಕೆರೂರು ಬಳಗ ಮನೆಯನ್ನು ನಿರ್ನಾಮ ಮಾಡುತ್ತವೆ ಅಷ್ಟೆ...."

"ಹೌದು. ಅದೇ ಸರೀಂತ ಕಾಣುತ್ತೆ. ನಮ್ಮ ತಂದೆಗೆ ಒಂದು ಕಾಗದ ಹಾಕಲೆ ? "

"ಅವರೇನು ಮಾಡ್ತಾರೆ? "

"ಅವರೂ ನೀವೂ ಕೂಡಿ ಹೋದರೆ ಒಳ್ಳೇದು ಅಂತ ತೋಚತ್ತೆ"

"ಹೂಂ ಹಾಗೆ ಮಾಡು. ನೀನು ಕಾಗದಾ ಬರಿ ಅದೂ ಒಳ್ಳೇದೇ"

ಮಲಗಿದ್ದ ಸರಸ್ವತಿ ಎದ್ದು ಅಳತೊಡಗಿದಳು. ಎರೆದು ಮಲಗಿಸಿದ್ದಳು. ರಾಜೀವಿ ಎದ್ದುಹೋಗಿ ಎತ್ತಿಕೊಂಡು ಹೊಟ್ಟೆ ಉಣಿಸುತ್ತಾ ಕುಳಿತಳು.

ಸುಬ್ಬರಾಯ ಹೆಗಲ ಮೇಲೆ ಟೌಲು ಹಾಕಿಕೊಂಡು ರಜಾ ಮಂಜೂರು ಮಾಡಿಸಿಕೊಂಡು ಸಾಹೇಬರ ಮನೆಗೆ ಬರಲು ಹೊರಟ.

ಈ ಎಲ್ಲ ಕೆಲಸಗಳಾಗಲಿಕ್ಕೆ ದೊಡ್ಡವರು ಹೇಳುವಂತೆ ಕಾಲ ಒದಗಿ ಬರಬೇಕು. ಇದು ನಿಜ ಎಂದು ಹಲವಾರುಬಾರಿ ಅನ್ನಿಸುತ್ತದೆ. ಸುಬ್ಬರಾಯನ ಮಟ್ಟಿಗಂತು ಇದು ನಿಜ. ರಜವೇನೋ ಮಂಜೂರಾಯಿತು. ಮನೆಗೆ ಬರುವ ವೇಳೆಗೆ ಸರಸ್ವತಿಗೆ ಕೆಂಡದಂಥ ಜ್ವರ ಬಂದಿತ್ತು. ಇನ್ನು ಇಂಥ ಸ್ಥಿತಿಯಲ್ಲಿ ಹೇಗೆ ಇಬ್ಬರನ್ನು ಬಿಟ್ಟು ಹೋಗುವುದು ?

ತೆಗೆದುಕೊಂಡ ರಜ ವ್ಯರ್ಥವಾಯಿತು. ಮಗುವಿನ ಶುಶ್ರೂಷೆಯಲ್ಲೇ ಆಯಿತು. ಎರಡೇ ದಿನಕ್ಕೆ ಕೂಸು ಹುಶಾರಾಗಲೂ ಇಲ್ಲ. ಪದ್ಮಾವತಮ್ಮನವರು ಮಗುವನ್ನು ದಿಟ್ಟಿಸಿ ನೋಡಿ ಮೈಮೇಲೆಲ್ಲಾ ಕೈಯಾಡಿಸಿ "ಮಾರಮ್ಮನ ಗುಡಿಗೆ ಮೊಸರು ಅಕ್ಕಿ ಕಳಿಸಿಕೊಡಿ. ಇದು ಧಡಾರದಮ್ಮ" ಎಂದರು. ರಾಜುವಿಗೆ ಜಂಘಾಬಲವೇ ಬಿದ್ದುಹೋಯ್ತು. ನಗುನಗುತ್ತಾ ಆಡಿಕೊಂಡಿದ್ದ ಮಗು ನರಳುತ್ತಾ ತೊಟ್ಟಿಲಲ್ಲಿ ಮಲಗಿದ್ದು ಕಂಡ ಅವಳ ತಾಯಿ ಕರುಳು ಮಿಡಿಯಿತು. ಅದು ಸಂಕಟಪಟ್ಟಾಗ ಇವಳಿಗೆ ಅತೀವಯಾತನೆಯಾಗುವುದು– ಪದ್ಮಾವತಮ್ಮನವರನ್ನು ಕೂಗಿ "ಏನೂ ಭಯವಿಲ್ಲವೆ ಪದ್ದಮ್ಮ ? " ಎಂದು ಕೇಳಿದಳು.

"ಯಾತರದೂ ಭಯವಿಲ್ಲ ರಾಜಮ್ಮ, ಒಂದು ವಾರ ಇದರ ಭರ. ಆ ಮೇಲೆ ಇಳಿಮುಖವಾಗುತ್ತೆ"

"ಔಷಧ ಹಾಕ್ತಾ ಇದ್ದೀನಿ...."

"ಬೇಡಿ ಬೇಡಿ! ಆಸ್ಪತ್ರೆ ಔಷ್ಧಿ ಇದಕ್ಕೆ ಬೀಳಲೇ ಕೂಡದು, ತಕ್ಷಣ ಅದನ್ನ ನಿಲ್ಲಿಸಿಬಿಡಿ"

"ಹೌದೇ....ತಿಳೀದೆ ಹಾಕಿದೆನಲ್ಲಾ ! "

"ಪರವಾಗಿಲ್ಲ, ಇನ್ನುಮೇಲೆ ಹಾಕಬೇಡಿ. ಒಂದಿಷ್ಟು ಬೇವಿನಸೊಪ್ಪು ತಂದು ತೊಟ್ಟಿಲಲ್ಲಿ ಮಗುವಿನ ತಲೆ ಕೆಳಗೆ ಇಡಿ"

"ಇವರು ಬರ್‍ಲಿ ಹೇಳಿ ತರಿಸುತ್ತೇನೆ"

''ಅಯ್ಯೋ ಅವರಿಗ್ಯಾಕೆ ತೊಂದರೆ–ನಮ್ಮ ಸೀನುಗೆ ಹೇಳಿ ತರಸ್ತೀನಿ...."

"ವಿಪರೀತ ಸಂಕಟಪಡುತ್ತಲ್ಲಾ ಕೂಸು...."

"ಮಹಾ ಉರಿ ಅಲ್ಲವೆ ಅದು ಮೈಯ್ಯಲ್ಲಿ? ನಾನೇನು ಹೇಳಿದ್ದೇಂತ ನೋಡ್ತಾಯಿರಿ. ಇನ್ನು ಒಂದೇ ವಾರ"

"ನನಗೆ ಭಯವಾಗುತ್ತಲ್ಲ ಪದ್ದಮ್ಮ?''

"ಅದ್ಯಾಕೆ ಭಯ, ನಮ್ಮ ಹುಡುಗರಿಗೆಲ್ಲಾ ಧಡಾರ ಎದ್ದಿತ್ತು ನೀವು ಕಾಣೆರಾ? ಅದೇನೂ ಮಾಡೋಲ್ಲ. ಇಂಗ್ಲೀಷು ಔಷಧಿ ಮಾತ್ರ ಹಾಕಬೇಡಿ ಅಷ್ಟೆ...."

"ನೀವು ಧೈರ್ಯ ಹೇಳಿದ್ದು ನನಗೆ ಸಮಾಧಾನವಾಯಿತು ನೋಡಿ"

"ನೀವು ಧೈರ್ಯವಾಗಿರಿ. ಏನಾದರೂ ಹೆಚ್ಚುಕಡಿಮೆಯಾದರೆ ಹೇಳಿ ಕಳಿಸಿ ಬರ್ತೇನೆ. ನಾನು ಬರಲೇ?"

ಎಂದು ರಾಮಸ್ವಾಮಿಗಳ ಹೆಂಡತಿ ಹೊರಟುಹೋದರು. ಸುಬ್ಬರಾಯ ಬಂದವನು ಸುಸ್ತಾಗಿ ಮಲಗಿದ ಬಾಡಿದ ಹೂವಿನಂತಿದ್ದ ಸರಸ್ವತಿಯನ್ನು ನೋಡಿ ನಿಟ್ಟುಸಿರುಬಿಟ್ಟ. ಧಡಾರವೆಂದು ಕೇಳಿ ಅಧೀರನಾದ. ಪದ್ಮಾವತಮ್ಮನವರು ಹೇಳಿದ ಧೈರ್ಯದ ಮಾತು ಅವನನ್ನು ಕೊಂಚ ಸಮಾಧಾನಗೊಳಿಸಿತ್ತು. ಆಡಿಕೊಂಡಿದ್ದ ಪಾದರಸದಂತಹ ಕೂಸು ನರಳುತ್ತಾ ಬಳಲಿ ಮಲಗಿಕೊಂಡಾಗ ಹೆತ್ತೊಡಲು ಸಂಕಟಪಡದೆ ಉಂಟೆ?

ಸರಸ್ವತಿಗೆ ಧಡಾರ ಮೈಮೇಲೆ ಕಾಣಿಸಿಕೊಂಡು ಅದು ಸಂಪೂರ್ಣ ಇಳಿದು ಕೊಂಚ ಗೆಲುಮುಖವಾಗುವತನಕ ಇಬ್ಬರಿಗೂ ಜೀವದಲ್ಲಿ ಜೀವವಿರಲಿಲ್ಲ. ಒರಗೇರಮ್ಮನ ಗುಡಿಗೆ ಅಕ್ಕಿ ಮೊಸರು ಕಳಿಸಿದಳು ರಾಜೀವಿ. ಕೂಸು ಕೊಂಚ ಚೇತರಿಸಿಕೊಳ್ಳುವ ಹೊತ್ತಿಗೆ ಹಲ್ಲು ಬರುವ ಸಂಭ್ರಮ. ಈ ಹಲ್ಲು ಬರುವ ಭಾರಕ್ಕೆ ಕೂಸು ವಿಪರೀತ ವಾಂತಿ ಭೇದಿ ಮಾಡಿಕೊಂಡು ತೆಳ್ಳಗಾಗಿ ಹೋಯಿತು.

ದೃಷ್ಟಿ ಬರುವಂತಿದ್ದ ಸರಸ್ವತಿ ತೆಳ್ಳಗಾಗಿಹೋದಳು. ಆಚೆ ಈಚೆ ಮನೆಯವರು ಕೂಡ ನೋಡಿ "ಅಯ್ಯೋ ಹೇಗಾಯ್ತು ಹೇಗಿದ್ದದ್ದು" ಎಂದು ಮರುಗಿದರು.

ಮತ್ತೆ ಮಗು ಚೇತರಿಸಿಕೊಳ್ಳಬೇಕಾದರೆ ಅದಕ್ಕೆ ಬೇಕಾದ ಗ್ಲಾಕ್ಸೋ-ಗ್ರೈಪ್ ವಾಟರ್‌ಗಳಿಗಾಗಿ ವಿಪರೀತ ವೆಚ್ಚವಾಯಿತು.

ಇಷ್ಟು ದಿನ ತಲೆದೋರದ ಹಣದ ತಾಪತ್ರಯದ ಬಿಸಿ ಸುಬ್ಬರಾಯನಿಗೆ ಕೊಂಚ ತಗುಲಿತು.

ಅಣ್ಣನಿಂದ ಕಾಗದವಿಲ್ಲ. ತಿಪ್ಪಯ್ಯನ ಕಾಗದದಂತೆ ವೆಂಕಮ್ಮನ ಅಕ್ಕನ ಮಗಳನ್ನು ಆಗಲು ಲಕ್ಷ್ಮಣ ತಯಾರಿದ್ದಾನಂತೆ. ವೆಂಕಮ್ಮನ ಪರಿವಾರ ಅಲ್ಲೇ ಇದ್ದು ಮನೆಯಲ್ಲಿ ಆಕೆಯದೇ ಯಜಮಾನಿಕೆಯಾಗಿ ಹೆಸರಿಗೆ ಒಂದು ಹೆಣ್ಣು ಗಂಟುಹಾಕಿ, ಅಳಿಯನ ಮಂಚದಲ್ಲೂ ತಾನು ಭಾಗಿಯಾಗುತ್ತಾ ಇಡೀ ಆಸ್ತಿಯನ್ನೇ ಅನುಭವಿಸಲು ಅವಳು ಮಾಡಿದ ಮಸಲತ್ತು ಇದು ಎಂದು ಅರ್ಥವಾಗುತ್ತಿತ್ತು.

ರಾಜೀವಿ ಕೂಡ ಕೊಂಚ ದಿನ ಖಾಯಿಲೆ ಬಿದ್ದಳು. ಸುಬ್ಬರಾಯನಿಗೂ ಮಲೇರಿಯಾ ಕಾಡಿತು. ಎಲ್ಲರಿಗೂ ಬೇಕಾದ ಔಷಧಿ ಪಥ್ಯದಲ್ಲಿ ಸುಬ್ಬರಾಯ ಹಣ್ಣು ಹಣ್ಣಾದ. ನಗು ನಗುತ್ತಾ ಇದ್ದ ಸಂಸಾರದಲ್ಲಿ ತಾಪತ್ರಯ ಪ್ರಾರಂಭವಾಗಿ ವೃಥಾ ಸಿಡುಕು ಸಿಟ್ಟುಗಳು ಪ್ರಾರಂಭವಾದವು. ಎಂದೂ ಒಂದು ಮಾತೂ ಅನ್ನಿಸಿಕೊಳ್ಳದ ರಾಜೀವಿ ಈಗ ಬೈಗಳ ರುಚಿ ಕಂಡಳು.

ಅಣ್ಣನ ಮೇಲಿನ ಕೋಪ ಹೆಂಡತಿ ಮೇಲೆ ತೀರಿಸುವ. ಕಚೇರಿಯಲ್ಲಿ ಸಾಹೇಬರು ಸಿಡಿಗುಟ್ಟಿದರೆ ಆ ಸಿಟ್ಟು ಮನೆಯಲ್ಲಿ ರಾಜೀವಿಯ ಮೇಲೆ ಮರುಕಳಿಸುವುದು. ಹೊಸಪರಿಯಲ್ಲಿ ದುಂಬಿಯಂತೆ ಹಾಡಿ ನಲಿದ ದಂಪತಿಗಳು ಗುಮಾಸ್ತೆ ಜೀವನದ ಗಾಣಕ್ಕೆ ಸಿಕ್ಕು ಚಿಂತೆ ದುಃಖಗಳ ಮಡುವಲ್ಲಿ ಮುಳುಗಿದರು.

ಅರಳಿದ ನಸು ಗುಲಾಬಿಯಂತಿದ್ದ ರಾಜೀವಿ ಬೆಂಕಿಗೆ ಸೋಕಿದಂತಾಗಿ ಬಾಡಿದಳು. ಮುಖದಲ್ಲಿನ ಮಂದಹಾಸ ಮಾಯವಾಗಿ ಗಂಭೀರ ಸಮಸ್ಯೆ

ಎದುರಿಸುವ ಯೋಧಳ ಕಳೆ ಮುಖದಲ್ಲಿ ಮೂಡಿತು. ತರಗೆಲೆಯಂತೆ ತತ್ತರಿಸಿದಳು.

ವಿನಾಕಾರಣ ತನ್ನ ಅಸಹಾಯ ಆರ್ಥಿಕ ಪರಿಸ್ಥಿತಿಯ ಸಿಟ್ಟಿನಲ್ಲಿ ಒಮ್ಮೆ ಬೈದ ಸುಬ್ಬರಾಯ ನೇರವಾಗಿ ಗುಡ್ಡ ಹತ್ತಿ ಗೋಪಾಲಸ್ವಾಮಿ ಹೊಂಡದ ಬಳಿಯ ಕೊಡುಗಲ್ಲಿನ ಮೇಲೆ ಕೂಡುವನು. ತಣ್ಣನೆಯ ಹವೆ ಗಂಭೀರವಾಗಿ ಬೀಸುತ್ತಿದ್ದು, ಯುಗಯುಗಾಂತರದಿಂದ ಶಾಂತವಾಗಿ ನಿಂತ ಬಂಡೆಗಳನ್ನು ದಿಟ್ಟಿಸಿದಾಗ ಕೊಂಚ ಸಮಾಧಾನವಾಗುವುದು.

ನಾಯಕರುಗಳ, ನಾಗತಿಯರ, ದಳವಾಯಿಗಳ, ಸೈನಿಕರ ಸಾವಿರ ಕೊಲೆ, ಕೋಟಿ ಆರ್ತ ಧ್ವನಿ ಕೇಳಿದ ಕೋಡುಗಲ್ಲು ಅಂದಿನಂತೆ ಇಂದೂ ಶಾಂತವಾಗಿ ಹೊಂಡದಲ್ಲಿ ತನ್ನ ಮುಖದ ಪ್ರಶಾಂತತೆಯನ್ನು ನೋಡಿಕೊಳ್ಳುತ್ತಿದೆ. ಅಂಥಾದ್ದರಲ್ಲಿ ದುರ್ಬಲ ಮಾನವ ಕೇವಲ ಕೆಲವು ತೊಡರು ಕಾಲಿಗೆಟಕಿದರೆ ಅಶಾಂತವಾಗಿ ಮನೆಯಲ್ಲಿ ಅಬಲೆಯನ್ನು ಹಿಂಸಿಸಿ ದುಃಖಕ್ಕೀಡು ಮಾಡಿ ತಾನೂ ಮನಸ್ಸಿನಲ್ಲಿ ಕಿರಿಕಿರಿ ಮಾಡಿಕೊಂಡು ಕಸವಿಸಿ ಪಡುವುದು ಸರಿಯಲ್ಲ ಎಂದು ಯೋಚಿಸುವನು.

ಸ್ವಲ್ಪ ಸಮಯಾನಂತರ ಮನಸ್ಸು ಸ್ಥಿಮಿತಕ್ಕೆ ಬಂದು, ಹಿಡಿತಕ್ಕೆ ಬಂದು ಇಂತಹ ಕೇವಲ ಸಣ್ಣ ಕಷ್ಟಕ್ಕೆ ಹೀಗೆ ಅಧೀರನಾದರೆ ನಾನೆಂತಹ ಹೇಡಿ? ಸಂಸಾರ ಪ್ರಾರಂಭಿಸಿದ ಹೊಸತರಲ್ಲೇ ಹೀಗೆ ಆದರೆ ಇನ್ನೂ ವರ್ಷಾನು ವರ್ಷ ಬಾಳ್ವೆ ನಡೆಸಲು ನಾನು ಸಮರ್ಥನೆ?" ಎಂದೆಲ್ಲಾ ಯೋಚಿಸಿ ಬಾರದ ನಗು ಮುಖದಲ್ಲಿ ಮೂಡಿಸಿ ಗುಡ್ಡದಿಂದ ಇಳಿದು ದೀಪ ಹಚ್ಚುವ ಹೊತ್ತಿಗೆ ಮನೆ ಸೇರುವ.

ಮಂದವಾದ ಲಾಂದ್ರದ ಬೆಳಕಿನಲ್ಲಿ ತೊಟ್ಟಿಲಲ್ಲಿ ಮಲಗಿದ ಮಗುವನ್ನು ತೂಗುತ್ತಾ ರಾಜೀವಿ ಜೋಗುಳ ಹಾಡುತ್ತಿದ್ದಳು. ಮುಂಬಾಗಿಲಿಗೆ ಬಂದ ಸುಬ್ಬರಾಯ ಹಾಗೇ ನಿಂತು ಕೇಳಿದ. ರಾಜೀವಿ ತನ್ನ ಪ್ರಿಯವಾದ ಶಿವಮೊಗ್ಗೆಯಲ್ಲಿ ಲಕ್ಷ್ಮಿನಾರಾಯಣ ದೇವರ ಗುಡಿಯಲ್ಲಿ ಹೇಳುತ್ತಿದ್ದ, ಕಡೆಯದಾಗಿ ದೇವರಿಗೆ ಹೇಳುತ್ತಿದ್ದ, ಲಾಲಿಯನ್ನು ಸುಮಧುರವಾಗಿ ತನ್ನದೇ ವೈಶಿಷ್ಟ್ಯದೊಡನೆ ಹಾಡುತ್ತಿದ್ದಳು.

"ಕನಕಾಡ ತೊಟ್ಟಿಲಲ್ಲಿ ಇನಕುಲೇಂದ್ರಾ....ವಿನಯದಿಂದ ಪವಡಿಸಯ ಸುಗುಣಾಸಾಂದ್ರ" ಎಂದು ಹೇಳಿದಾಗ ಸುಬ್ಬರಾಯ ಹಿಗ್ಗಿದ. ಬಿದುರಿನ ತೊಟ್ಟಿಲನ್ನೆ ಕನಕದ ತೊಟ್ಟಿಲೆಂದು ತಿಳಿಯುವ ಮನಸ್ಸು ಖಾಯಿಲೆಯಿಂದ ಸೊಣಕಲಾದ ಕೂಸು ಇನಕುಲೇಂದ್ರನಂತೆ ಕಂಡಿತು ಈ ಹೆತ್ತ ತಾಯಿಗೆ.

"ರಾಜೀವೀ...." ಎಂದು ಕೂಗಿದಾಗ ಎದ್ದುಬಂದು ಬಾಗಿಲು ತೆಗೆದಳು.

"ರಾಜೀವಿ ಏನು ಅಡಿಗೆ ಮಾಡಿದ್ದಿ....ಕೂಸು ಮಲಗಿತೇನು ?"

"ಹೂಂ....ಸಾರು ಅನ್ನ ತಿಳಿಮಜ್ಜಿಗೆ...."

"ಬಡಿಸೇಳು ತುಂಬಾ ಹಸಿವು"

"ಆಗದೆ ಉಂಟೆ ? ಬೆಳಿಗ್ಗೆ ಕೂಡ ಸರಿಯಾಗಿ ಊಟ ಮಾಡಲಿಲ್ಲ"

"ಹೌದು ಬೆಳಿಗ್ಗೆ ಸೇರಲೇ ಇಲ್ಲ...."

"ನೀವೆಲ್ಲಿ ಹಾ ಹಾರಿ ರೇಗಾಡುವಿರೋಂತ ಹೆದರಿದ್ದೆ"

"ಯಾಕೇ–ಹಸಿದ ಹಾವ ಎಂತಲೆ ?"

"ಯಾರಿಗೆ ಗೊತ್ತು, ಈಗ ತಿಂಗಳಿಂದ ನಾನು ಸಹಿಸಿದ್ದು ದೇವರಿಗೇ ಪ್ರೀತಿ"

"ನಾನೇನು ಮಾಡ್ಲಿ ರಾಜೀವಿ, ಹಾಗೆಲ್ಲಾ ಅಂದೆನೆಂದು ಕೋಪವೆ ?"

"ಕೋಪವಿಲ್ಲ, ನಾನು ಹೊಸದಾಗಿ ಮನೆಗೆ ಬಂದಾಗ ಇದ್ದ ಸಂತೋಷ ವೆಲ್ಲಾ ಮಾಯವಾಯಿತಲ್ಲಾ ಎಂದು ವ್ಯಥೆ"

"ರಾಜೀವಿ....ಗುಮಾಸ್ತೆಗಳ ಬಾಳೇ ಹೀಗೆಂದು ಅನ್ನಿಸುತ್ತೆ............"

"ಇದಕ್ಕೆ ಪರಿಹಾರವೇ ಇಲ್ಲವೇ ?"

"ನನಗಂತೂ ಗೊತ್ತಿಲ್ಲ. ಈಗ ಹಸಿದಿದ್ದು ನಿನಗೆ ಹೇಳಲಿಲ್ಲವೇ....?"

"ಬನ್ನಿ ಸಧ್ಯ, ಬಡಿಸುತ್ತೇನೆ. ಆಮೇಲೆ ರೇಗಿ ಕಪಾಳಕ್ಕೆ ಎರಡು ಬಿಗಿದುಬಿಟ್ಟೀರ...."

"ಹಹಹ....ಹೆದರಬೇಡ, ಅಷ್ಟು ಮೂರ್ಖನಲ್ಲ ನಾನು"

ಎಂದು ಅಂಗಿ ಬಿಚ್ಚಿ ಅಡಿಗೆ ಮನೆಗೆ ಹೋದ. ರಾಜೀವಿ ಮಾಡಿದಡಿಗೆ ಬಡಿಸಿದಾಗ ಸರಬರನೆ ಹೊಟ್ಟೆ ತುಂಬಾ ಉಂಡ. ಗೋಪಾಲಸ್ವಾಮಿ ಗುಡ್ಡ ದಲ್ಲಿನ ಯೋಚನೆ ಅವನಲ್ಲಿ ಹೊಸ ಚೇತನ ಕೊಟ್ಟಿತ್ತು. ಅಳುವಿನಲ್ಲೂ ನಕ್ಕು ನೋವಿನಲ್ಲೂ ನವ್ಯ ಸುಖ ಕಾಣುವ ಮನೋಭಾವ ಮೂಡಿಸಿತ್ತು.

ಅದಕ್ಕೇ ರಾಜೀವಿಯನ್ನು ನಕ್ಕು ಮಾತಾಡಿಸಿದ. ಹೊಚ್ಚ ಹೊಸ ದಂಪತಿಗಳಂತೆ ಸರಸವಾಡುತ್ತಾ ಹಾಸಿಗೆಯಲ್ಲಿ ಹೊರಳಿದರು. ರಾಜೀವಿ ಕೂಡ ಯಜಮಾನರ ನಗುಮುಖ, ಸರಸ, ಉತ್ಸಾಹ ಕಂಡು ಹೊಟ್ಟೆ ತುಂಬ ನಕ್ಕಳು. ಸುಬ್ಬರಾಯನನ್ನು ನಗಿಸಿದಳು.

ಚಿತ್ರದುರ್ಗದಲ್ಲಿ ಮತ್ತೊಂದು ವರ್ಷ ಕಳೆಯಿತು. ದಿನಗಳೇನು ಬೈಗು ಬೆಳಗು ಚಕ್ರದಂತೆ ಒಂದರ ಹಿಂದೊಂದು ಉರುಳುತ್ತಿದ್ದುವು. ಒಮ್ಮೆ ನಗು ಒಮ್ಮೆ ಅಳು, ಮತ್ತೊಮ್ಮೆ ಬಿಡಿಸಲಾರದ ಸಮಸ್ಯೆಯ ತೆರೆ, ಮಗದೊಮ್ಮೆ ನೊರೆನೊರೆಯಾಗಿ ಉಕ್ಕಿಬಂದ ಉತ್ಸಾಹದ ವಾಹಿನಿ ಹೀಗೆ ಸಾಗಿತ್ತು.

ಪಕ್ಕದ ಮನೆಯ ರಾಮುಸ್ವಾಮಿ ಅವರ ಹೆಂಡತಿ ಪದ್ದಮ್ಮನಿಗೂ ಸುಬ್ಬರಾಯ ರಾಜೀವಿಯರಿಗೂ ವಿಪರೀತ ಸ್ನೇಹ ಬೆಳೆದು ಒಂದೇ ಮನೆಯವರಂತೆ ಇದ್ದರು.

ಪದ್ಮಾವತಮ್ಮ ರಾಜೀವಿಗೆ ಬಗೆಬಗೆಯ ತಿಂಡಿ ಮಾಡುವುದನ್ನು ಹೇಳಿಕೊಟ್ಟಿದ್ದರು. ಕುರುತಿಂಡಿಯ ಪ್ರಿಯನಾದ ಸುಬ್ಬರಾಯನಿಗೆ ಇದೆಲ್ಲಾ ರಾಜೀವಿ ಕಲಿತುದು ಅವನನ್ನು ಇನ್ನೂ ತಿಂಡಿಪೋತನನ್ನಾಗಿ ಮಾಡಿತ್ತು.

ಸರಸ್ವತಿ ಎರಡು ವರ್ಷದ ಕೂಸು ಮನೆ ತುಂಬಾ ಪುಟ್ಟ ಪುಟ್ಟ ಹೆಜ್ಜೆ ಇಟ್ಟು ಓಡಾಡುತ್ತಿದ್ದಳು. ಮುಂದಲೆಹಿಕ್ಕಿ ತಿರುಪಿನ ಹೂವಿಟ್ಟು ಜಡೆಹಾಕಿ ಜರತಾರಿ ಖಣದ ಅಂಗಿಹಾಕಿ ಕಾಡಿಗೆ ಹಚ್ಚಿ ಕಿವಿಗೆ ಲೋಲಕ್ಕು ಹಾಕಿದಾಗ ಗಂಡಹೆಂಡಿರಿಬ್ಬರಿಗೂ ಹಿಗ್ಗೋ ಹಿಗ್ಗು. "ಪುಟ್ಟಮ್ಮಳಿ" "ಕೂಸುಮರೀ...." "ಪಾಪಚ್ಚೀ" ಎಂದು ಮುದ್ದಾಡಿ ಆಟ ಆಡಿಸುವ ಸುಬ್ಬರಾಯ. ಕಿಲಕಿಲನೆ ತುಂಬುನಗೆ ನಗುವುದು ಆ ಕೂಸು.

ತಂದೆ ಮಗಳ ಈ ಸಂತೋಷದ ನಗು ಕಂಡು ರಾಜೀವಿಗೂ ಕಣ್ಣಂಚಿನಲ್ಲಿ ಆನಂದ ಭಾಷ್ಪ ಮೂಡುವುದು.

ಇಂತಹ ಸೊಗಸಾದ ಊರು, ಸಹೃದಯ ನೆರೆಹೊರ್ಕೆ ಎಲ್ಲವನ್ನೂ ಬಿಟ್ಟು ಚಳ್ಳಕೆರೆಗೆ ಹೊರಡಬೇಕೆಂದಾಗ ರಾಜೀವಿಯ ಮುಖ ಕುಂದಿತು.

ಸುಬ್ಬರಾಯನಿಗೆ ಚಳ್ಳಕೆರೆಗೆ ವರ್ಗವಾಗಿತ್ತು. ಮುರುಗಯ್ಯ, ವಿಠ್ಠಲಸಾ, ಕೊಟ್ರಪ್ಪ, ರಾಮುಸ್ವಾಮಿ ಇವರಿಗಂತೂ ದುರ್ಗದ ಗುಡ್ಡವೇ ಕುಸಿದು ಬಿದ್ದಂ

ತಾಗಿತ್ತು. ಈ ಮಿತ್ರಮಂಡಲಿಯನ್ನಗಲಿ ಹೋಗುವುದು ಸಾಧ್ಯವಿಲ್ಲ ಎನ್ನು ವಷ್ಟು ಚಿಂತೆ ಸುಬ್ಬರಾಯನಿಗೆ ಹತ್ತಿತು.

ಸಬ್ ರಿಜಿಸ್ಟ್ರಾರರ ಗುಮಾಸ್ತೆಯಾಗಿ ಹೋಗಲಿದ್ದ ಸುಬ್ಬರಾಯ ವರ್ಗ ವನ್ನೂ ಬೇಡವೆಂದು ಕೇಳಿಕೊಳ್ಳುವಂತಿರಲಿಲ್ಲ. ಇವನ ಕೆಲಸ ಮೆಚ್ಚಿ ಅಮ ಲ್ದಾರರು ಪ್ರಯಾಸದಿಂದ ಶಿಫಾರ್ಸು ಮಾಡಿ ಡೆಪ್ಟಿ ಕಮೀಷನ್ನರಿಗೆ ಹೇಳಿ ಈ ವರ್ಗಕ್ಕೆ ಏರ್ಪಾಟು ಮಾಡಿದ್ದರು. ಆದ್ದರಿಂದ ಸುಬ್ಬರಾಯನಿಗೆ ಒಂದು ಬಗೆ ಯಿಂದ ಸಂತೋಷವೇ ಆಗಿತ್ತು. ಆದರೂ ಚಿತ್ರದುರ್ಗ, ಆ ಗುಡ್ಡ ಬೆಟ್ಟ, ಸ್ನೇಹಿತರು, ಹೊಂದಿಕೊಂಡ ನೆರೆಹೊರ್ಕೆ ಬಿಟ್ಟುಹೋಗಲು ಚಿಂತೆಯೂ ಆಗಿತ್ತು.

ಸಾಮಾನು ಕಟ್ಟಲು ಪದ್ದಮ್ಮ ಸಹಾಯ ಮಾಡಲು ಮುಂದೆ ಬಂದರು.

"ಅಯ್ಯೋ ಬಿಡಿ ಪದ್ದಮ್ಮ, ನಿಮಗೇಕೆ ತೊಂದರೆ!"

"ತೊಂದರೆ ಎಂಥಾದ್ದು ಬಿಡಿ, ನೀವು ಈ ಚಿಕ್ಕ ಮಗೂನ್ನ ಕಟ್ಟಿಕೊಂಡು ಹೇಗೆ ಸಾಮಾನು ಸರಿಂಜಾಮು ಕಟ್ಕೊತೀರಿ?"

"ನೀವು ಖಂಡಿತ ಚಳ್ಳಕೆರೆಗೆ ಬಂದು ನಮ್ಮನೇಲಿ ಎರಡು ದಿನ ಇದ್ದು ಹೋಗಬೇಕು...."

"ನಮ್ಮವರಿಗೂ ಅಲ್ಲಿಗೇ ವರ್ಗಮಾಡಿಸಿಕೊಳ್ಳಿ ಅಂತ ಹೇಳ್ತೀನಿ...."

"ಹಾಗೆಮಾಡಿ....ಚೆನ್ನಾಗಿರುತ್ತೆ...."

"ಎಲ್ಲಾ ಒಟ್ಟಿಗೇ ಹೊರಡ್ತಿರಾ?"

"ಇಲ್ಲ, ಇವರು ಮೊದಲು ಹೋಗಿ ಮನೆ ಮಾಡಿ ಬಂದು ಕರೆದೊಯ್ಯು ತ್ತಾರೆ"

"ಅದಕ್ಕೆ ಈಗಲೇ ಸಾಮಾನು ಕಟ್ಟೋದೆ?"

"ಬೇಡವೇ, ಆಮೇಲೆ ಅವಸರವಾಗುತ್ತೆ. ಚಳ್ಳಕೆರೆ ಒಳ್ಳೆ ಊರೆ?"

"ಪರವಾಗಿಲ್ಲಮ್ಮ ಚಳ್ಳಕೆರೆಯೂ ಒಳ್ಳೆ ಊರು. ಹಿಂದೆ ಅಲ್ಲಿದ್ದೆವು ಸಂತೆ, ದೊಡ್ಡ ಸಂತೆ ಆಗುತ್ತೆ. ಸಾಮಾನುಗಳೆಲ್ಲಾ ವಿಪರೀತ ಅಗ್ಗ, ಅಕ್ಕಿ ಯಂತು ಬಲು ಸುಲುಭ. ಚಳ್ಳಕೆರೆ ಅಕ್ಕಿ ರೂಪಾಯಿಗೆ ಹನ್ನೆರಡು ಸೇರು ಈಗ ಇನ್ನೂ ಅಗ್ಗವಾಗಿರಬಹುದು...."

ಹೌದೆ? — ಹಾಗಾದರೆ ಸಂಸಾರ ಸಾಗಿಸೋದು ಅತಿ ಸುಲುಭ ಅಲ್ಲೀನ್ನಿ...."

"ಈ ಊರಿಗಿಂತ ಅಲ್ಲಿ ಸುಸೂತ್ರ, ಇಷ್ಟು ನಿಜ"

"ಹಾಗಾದರೆ ಬೇಕಾದಷ್ಟು ಹಣ ಮಿಗಿಸಬಹುದೂನ್ನಿ"

"ನೋಡ್ರಿರಿ ನಾನೇನು ಹೇಳಿದ್ದೇಂತ. ನೀವು ಚೈನುಸರ ಮಾಡಿಸಿಕೊಂಡೇ ಮಾಡಿಸಿಕೊಳ್ತೀರಿ"

"ನಿಜವೇ ?"

"ಖಂಡಿತ"

"ನಿಮ್ಮ ಬಾಯಿಹರಕೆಯಿಂದ ಹಾಗೇ ಆಗಲಿ ಪದ್ದಮ್ಮ"

ಎಂದು ಗೋಣಿಚೀಲಕ್ಕೆ ಪಾತ್ರೆ ತುಂಬಿ ದಬ್ಬಣದಿಂದ ಹೊಲಿಗೆ ಹಾಕಿದರು. ಇಷ್ಟುಹೊತ್ತಿಗೆ ಸುಬ್ಬರಾಯನೂ ಬಂದ.

"ಬೇಕಾದ ಪಾತ್ರೆ ಮೇಲಿಟ್ಟುಕೊಂಡಿದ್ದೀಯೋ ಎಲ್ಲಾ ಚೀಲಕ್ಕೆ ತುಂಬಿದ್ದೀಯೋ ..."

"ಇಲ್ಲ ಎಲ್ಲಾ ತುಂಬಿ ಹೊಲೆದೆ. ನೀವು ಹೋಗಿಬರುವತನಕ ಪದ್ದಮ್ಮನವರ ಮನೇಲ್ಲೇ ಊಟ...." ಎಂದೆನ್ನುತ್ತಾ ಪದ್ಮಾವತಮ್ಮನನ್ನು ನೋಡಿದಳು. ಅವರು "ಆಗಲಿ ಅದಕ್ಕೇನಂತೆ" ಎಂದು ನಕ್ಕು ಅಂದರು. ಸಾಮಾನು ಕಟ್ಟಿದ್ದಾಗ ಸಂಜೆಯಾಗಿತ್ತು.

ಚಳ್ಳಕೆರೆಗೆ ಹೊರಡುವ ದಿನವೂ ಬಂತು.

ಮರುಗಯ್ಯನ ಹೆಂಡತಿ ರುದ್ರಮ್ಮ ಸುಬ್ಬರಾಯ ದಂಪತಿಗಳನ್ನೂ ಮನೆಗೆ ಕರೆದು ಎಲೆ ಅಡಿಕೆ ಕೊಟ್ಟು ಕುಂಕುಮ ಹಚ್ಚಿ ಕಳಿಸಿದಳು.

ರಾಮುಸ್ವಾಮಿಯಂತು ಅಳುವುದೊಂದು ಬಾಕಿ. ಪದ್ಮಾವತಮ್ಮ ಸರಸ್ವತಿಯನ್ನು ಬೆಳಗಿನಿಂದ ಎತ್ತಿಕೊಂಡು ಮೋಟಾರಿನಲ್ಲಿ ಕೂಡುವತನಕ ರಾಜೀವಿಯ ಕೈಗೆ ಕೊಡಲಿಲ್ಲ. ರಾಮುಸ್ವಾಮಿ ಮಕ್ಕಳೂ ರಾಜೀವಿಯನ್ನು ತುಂಬಾ ಹಚ್ಚಿಕೊಂಡಿದ್ದು ಚಿಕ್ಕವಳಂತೂ "ನಾನೂ ಅತ್ತೆ ಜೊತೆಗೆ ಹೋಗ್ತೀನೀೀ" ಅಂತ ರಾಗವನ್ನೇ ತೆಗೆಸಿದ್ದಳು. ಮೋಟಾರಲ್ಲಿ ಕುಳಿತರು. "ಪದ್ದಮ್ಮ, ಖಂಡಿತ ಬರಬೇಕು ಚಳ್ಳಕೆರೆಗೆ"

"ಮಗು ಹುಶಾರು ರಾಜಮ್ಮ"

"ಬರ್ತೀನೆ ರಾಮುಸ್ವಾಮಿ, ಮುರುಗಯ್ಯ - ವಿಠ್ಠಲ್‌ಸಾ ಮರ್ತು ಬಿಟ್ಟೇರಿ...."

"ಎಲ್ಲಾದರೂ ಉಂಟೆ ? ಕಾಗದ ಬರೀರಿ. ಅಲ್ಲಿಯೋ ಸೂರಪ್ಪನವರೊಂತ ರೆವಿನ್ಯೂ ಕ್ಲಾರ್ಕು ಆಗಲೇ ಹೇಳಿದ್ದೀನಲ್ಲಾ, ಅವರನ್ನು ಕಾಣಿ. ಎಲ್ಲಾ ಅನುಕೂಲ ಮಾಡ್ಕೊಡ್ತಾರೆ...."

"ಸರಿ ಕಾಣ್ತೀನಿ....ನಮಸ್ಕಾರ''

"ರೈಟ್...." ಎಂದ ಕಂಡಕ್ಟರು.

ಧೂಳು ಚೆಲ್ಲುತ್ತಾ ತಿಪ್ಪೆಸ್ವಾಮಿ ಮೋಟಾರು ಚಿತ್ರದುರ್ಗದಿಂದ ಚಳ್ಳಕೆರೆಗೆ ಹೊರಟಿತು. ಮೋಟಾರು ಸ್ಟ್ಯಾಂಡಿನಲ್ಲಿ ನಿಂತಿದ್ದ ಮಿತ್ರಮಂಡಲಿ ಭಾರವಾದ ಮನಸ್ಸಿನಿಂದ ಹಿಂದಿರುಗಿದರು.

## ೧೪

ಅಮ್ಮೀನಹಳ್ಳಿಯಲ್ಲಿ ಲಕ್ಷ್ಮಣನ ಪರಿಸ್ಥಿತಿ ಶೋಚನೀಯವಾಗಿತ್ತು. ಮಾಡಿದ ಪಾಪ–ಕರ್ಮವೇ ಇದಕ್ಕೆ ಕಾರಣವೆಂದು ಅವನ ವಾದ. ವೆಂಕಮ್ಮ ಗಂಟುಹಾಕಿದ್ದ ಎರಡನೆ ಹೆಂಡತಿಗೆ ಮೂರ್ಛೆರೋಗ ಬರುತ್ತಿತ್ತು.

ಮೋಸದಿಂದ ಈ ಲಗ್ನ ಹೂಡಿಸಿದ್ದರು. ಲಕ್ಷ್ಮಣ ಈ ಹಿರೇಕೆರೂರಿನ ಗುಂಪಿನಲ್ಲಿ ಸಿಕ್ಕು ತನ್ನ ಸ್ವತಂತ್ರ ಮನೋವೃತ್ತಿಯನ್ನು ಕಳೆದುಕೊಂಡಿದ್ದ.

ಅವತ್ತು ಕಬ್ಬಿಣದ ತಿಜೋರಿಯಲ್ಲಿನ ಬಂಗಾರದ ನಗಗಳನ್ನು ತೆಗೆದು ಲಕ್ಷ್ಮಣ ಪರೀಕ್ಷಿಸುತ್ತಿದ್ದ. ಹಿಂಬದಿಗೆ ಅವನ ಎರಡನೆ ಹೆಂಡತಿ ಪಂಕಜ ನಿಂತಿದ್ದಳು. ಅವಳ ಹಿಂದೆ ವೆಂಕಮ್ಮ ನಿಂತಿದ್ದರು. ಪಂಕಜಳನ್ನು ಮುಂದೆ ಮಾಡಿಕೊಂಡು ನಗಗಳ ವಿಚಾರ ತಿಳಿಯುವ ಆಸೆ ಕಣ್ಣಲ್ಲಿ ಕುಣಿಯುತ್ತಿತ್ತು.

ಪಿಸುಮಾತಿನಲ್ಲಿ "ಕೇಳಿ....ಕೇಳಿ" ಎಂದೆನ್ನುತ್ತಾ ಪಂಕಜಳ ಪಕ್ಕೆ ತಿವಿದಳು.

"ಇದೆಲ್ಲಾ ಏನೂಂದ್ರೆ...." ಎಂದು ಬಾಯಿಂದ ಶಬ್ದ ಬೆದರುವ ಧ್ವನಿಯಲ್ಲಿ ಹೊರಡಲು ಅವಳಿಗೆ ಸಾಕು ಸಾಕಾಯಿತು.

"ಏನಾದರೇನು ನಿನಗೆ ?"

"..............." ಇದಕ್ಕೆ ಏನು ಹೇಳಬೇಕೋ ಪಂಕಜಳಿಗೆ ಗೊತ್ತಾಗಲಿಲ್ಲ. ಹಿಂದಿರುಗಿ ವೆಂಕಮ್ಮನನ್ನು ನೋಡಿದಳು. ತಾನು ಮಾತಾಡದಿದ್ದರೆ ವಿಷಯ ತಿಳಿಯುವುದಿಲ್ಲವೆಂದು ಅರಿತ ವೆಂಕಮ್ಮ—

"ಮನೆಯಲ್ಲಿನ ಆಗುಹೋಗು ಹೆಂಡತಿಗಲ್ಲದೆ ಮತ್ತ್ಯಾರಿಗೆ ತಿಳಿಯಬೇಕು ?" ಎಂದಳು.

"ಹೆಂಡತಿ.... ಹ್ಹಹ್ಹಹ್ಹ...." ಎಂದೆಂದು ನಕ್ಕ. ಆ ನಗುವಿನಲ್ಲಿ ಗತಿಸಿದ ಸುಮಿತ್ರೆಯ ದಿನಗಳ ನೆನಪಿನ ನೋವು ತುಂಬಿದಂತಿತ್ತು. ತನಗೆ ಮೋಸವಾಗಿದ್ದು ಮೂರ್ಛೆ ರೋಗದ ಹೆಣ್ಣು ಗಂಟು ಬಿದ್ದದ್ದು, ತನ್ನ–ವೆಂಕಮ್ಮನ ಬಗ್ಗೆ ಊರಲ್ಲಿ ಆಡುತ್ತಿದ್ದ ಮಾತೂ, ತಾನು ತಲೆ ಎತ್ತಿ ತಿರುಗುವಾಗ ಪರಿ

ಚಿತರ ಮುಖ ಕಂಡಾಗ ಅಪರಾಧಿಯಂತೆ ವರ್ತಿಸಲು ಕಾರಣವಾದ ಈ ಹಿರೇಕೆರೂರು ಮಂಡಲಿಯ ಮೇಲೆ ನಖಶಿಖಾಂತ ಕೋಪ ಮೂಡಿತ್ತು.

"ಈ ಒಡವೆಗಳನ್ನು ಎಲ್ಲಿಗೆ ಒಯ್ಯುತ್ತೀರಿ ?"

"ಅದು ಕಟ್ಟಿಕೊಂಡು ನಿಮಗೇನು ?"

"ಹಾಗಂದರೆ ಹ್ಯಾಗೆ.... ನಿಮ್ಮ ಬಗ್ಗೆ ನಾವಲ್ಲದೆ ಇನ್ಯಾರು ಚಿಂತೆ ಮಾಡಬೇಕು ?"

"ನಿಮ್ಮ ಮನಸ್ಸನ್ನೆ ಕೇಳಿಕೊಳ್ಳಿ. ವ್ಯಥಾ ನನ್ನನೊಡನೆ ವಾದ ಬೇಕಾಗಿಲ್ಲ...."

—ಈ ಮಾತಿಗೆ ವೆಂಕಮ್ಮನಿಗೆ ದುಃಖ ಬಂತು. ಕಣ್ಣಲ್ಲಿ ನೀರು ಕಾಣಿಸಿತು, ಜೊತೆಗೆ ಕೋಪ ಕಾಣಿಸಿಕೊಂಡಿತು.

"ನಡಿ ಪಂಕಜ–ಬಟ್ಟೆ ಬರಿ ಕಟ್ಟು. ನಾವು ಬೇರೆಯವರು. ನಮಗಿನ್ನೇನು ಕೆಲಸ ಇಲ್ಲಿ ?"

ಲಕ್ಷ್ಮಣ ದುಮು ದುಮು ಮುಖಮಾಡಿಕೊಂಡೇ ಒಡವೆಗಳನ್ನು ಹೊರಕ್ಕೆ ತೆಗೆಯುತ್ತಿದ್ದ. ಗದ್ಗ ಸ್ವರದಲ್ಲಿ ವೆಂಕಮ್ಮನೇ ಹೇಳಿದಳು.

"....ಇವರ ಮನೆತನ ಬೆಳೆಯಲೆಂದು ಮಗಳನ್ನು ಕೊಟ್ಟುದ್ದಾಯಿತು. ಅವಳ ಖಾಯಿಲೆಯ ದೆಸೆಯಿಂದ ವರ್ಷಾನು ವರ್ಷ ನಾನಿಲ್ಲಿ ದುಡಿದುದಾಯಿತು. ದಿಕ್ಕಿಲ್ಲದಂತಿದ್ದ ಪರದೇಶಿಯ ಮನೆ ಬೆಳಗಿಸಲು ಮಾಡಿದ ನನ್ನ ಯತ್ನಕ್ಕೆ ಒಳ್ಳೆ ಉಡುಗರೆ ಬಂತು, ಪಂಕಜ ನಡಿ ಹೋಗೋಣ"

—ಎತ್ತಿದ ತಲೆ ತಗ್ಗಿಸಿದ ಲಕ್ಷ್ಮಣ. ವೆಂಕಮ್ಮ ಎದುರಾಳಿನ ದೌರ್ಬಲ್ಯ ಚೆನ್ನಾಗಿ ಅರಿತವಳು. ಹಿಂದೊಮ್ಮೆ ಇಂಥದೇ ಪ್ರಸಂಗ ಎದುರಿಸಬೇಕಾದಾಗ ಇದೇ ಅಸ್ತ್ರ ಪರಿಣಾಮಕಾರಿಯಾಗಿತ್ತು.

"........ನಡಿ ಪಂಕಜ, ನಾವೆಲ್ಲ ಇವರ ಹಿತೈಷಿಗಳಲ್ಲ. ಅಳಿಯಂದಿರೆಂಬ ಅಭಿಮಾನದಿಂದ ಈ ಮನೆ ಒಂದು ಹದಕ್ಕೆ ಬರಲೀಂತ ಪ್ರಯತ್ನಿಸಿದ್ದು ನಮ್ಮ ತಪ್ಪು. ನನ್ನ ಮಗಳು ಸುಮಿತ್ರೆಯನ್ನು ಈ ಮನೆಗೆ ಬಲಿಯಾಗಿ ಮಾಡಿದ್ದು ನೆನೆದೂ ಇನ್ನಿಲ್ಲಿ ಇರಬಾರದು. ಅವಳು ವರ್ಷಾನು ವರ್ಷ ನೋವಿನಿಂದ ನರಳಿದಾಗ ಆರೈಕೆ ಮಾಡಿ ಪ್ರಯೋಜನವಾಗದಾಗ........ಪಂಕಜ ಅದೇ ಅಂತಃ

ಕರಣ ನಿನ್ನನ್ನು ಈ ಮನೆ ಸೇರುವಂತೆ ಮಾಡಿದ್ದು. ನಮ್ಮ ತಪ್ಪು....ನಡಿ ಪಂಕಜ ಒಳ್ಳೆಯದು ಬಯಸುವುದು ನಮ್ಮ ಕೆಲಸ....ತಪ್ಪು ಎಣಿಸುವುದು ಅವರ ಕೆಲಸ. ಇದೇ ಮೊದಲಿನಿಂದ ನಡೆದುಬಂದಿದ್ದು. ಇಂದಿಗೆ ಕಡಿದು ಹೋಗಲಿ. ಸುಮಿತ್ರೆಯ ಜೊತೆಗೇ ನಾವು ಹೋಗಬಾರದಾಗಿತ್ತೇ....ಒಳ ಸಂಚು ನಡಿಸಿ ಯಾರಮನೆ ಉದ್ಧಾರ ಮಾಡಲು ನಾವಿಲ್ಲಿ ನಿಲ್ಲಬೇಕಾಗಿತ್ತು? ....ಸುಮಿತ್ರೆಯ ಹೆಣದ ಮೇಲೆ ಹೊರಳಾಡಿ 'ನನ್ನ ಪರದೇಶಿಯಾಗಿ ಮಾಡಿ ಹೋದೆಯಲ್ಲೇ....' ಎಂದು ಅತ್ತಾಗ ನನ್ನ ಕರುಳು ಕಿತ್ತುಬಂತು. ಇವರು ಪರದೇಶಿಯಂತಾಗಬಾರದಲ್ಲಾ ಒಂಟಿ ಜೀವಕ್ಕೆ ನೆಂಟು ಇರಲೆಂದು ಪಂಕಜ ನಿನ್ನ ಇವರಿಗೆ ಧಾರೆ ಎರೆದದ್ದು ನನ್ನ ಒಳಸಂಚು....ನಡಿ ಪಂಕಜ...."

—ಇಷ್ಟು ಮಾತಾಡುವುದರಲ್ಲಿ ಪಂಕಜ ವೆಂಕಮ್ಮನ ಹೆಗಲಲ್ಲಿ ಮುಖ ಮುಚ್ಚಿ ಮುಸು ಮುಸು ಅಳುತ್ತಿದ್ದಳು. ಲಕ್ಷ್ಮಣ ಅಧೀರನಾಗಿ ಕರಗಿ ಹೋಗಿದ್ದ. ವೆಂಕಮ್ಮ ತನ್ನ ಶಕ್ತಿಗೆ ತಾನೇ ಅಚ್ಚರಿಪಟ್ಟು—ಇದೇ ಬಿಸಿಯಲ್ಲಿ ಕಾದ ಕಬ್ಬಿಣ ಬಡಿದಂತೆ ಬಡಿದರೆ ತನಗೆ ಜೀವದ ಆಕಾರಕ್ಕೆ ತಿರುಗುವುದೆಂದು ಎಂದೋ ಅರಿತ ಅವಳು ಮುಕ್ತಾಯದ ಮಾತು ಎಂಬಂತೆ

"ಋಣಾನುಬಂಧ—ಮಾಡಿದ ಕರ್ಮ ನೀವೇನು ಮಾಡೀರಿ? ನಾವಿನ್ನು ಹೊರಡುತ್ತೇವೆ...." ಎಂದಳು.

ತೀಕ್ಷ್ಣವಾದ ನೋಟದಿಂದ ಲಕ್ಷ್ಮಣನನ್ನು ನೋಡಿದಳು. ಅವಳ ಮುಖವನ್ನು ಕಂಡ ಲಕ್ಷ್ಮಣನ ಮನದಲ್ಲಿ ವಿಲಕ್ಷಣ ಬಯಕೆ ಮೂಡಿತು. ಅವಳು ಹೇಳಿದ ಪ್ರತಿ ಮಾತೂ ನಿಜವಾಗಿತ್ತು. ತನ್ನನ್ನು ಉದ್ಧಾರ ಮಾಡಲು ಬಂದ ದೇವತೆ ಈಕೆ, ಅನ್ಯಾಯವಾಗಿ ಅಪಾದನೆಯ ಮಾತಾಡಬಾರದಾಗಿತ್ತು ಎಂದವನಿಗನ್ನಿಸಿತು.

"ಅದಕ್ಕಲ್ಲ ನಾನಂದದ್ದು—ನನ್ನ ವ್ಯಥೆ ತಡೆಯಲಾರದೆ. ಆ ದುಃಖ ಈ ಮಾತು ಆಡಿಸಿತು.... "

"........ನಮಗೇನು ವ್ಯಥೆಯಿಲ್ಲವೆ?"

"ಇಲ್ಲ ಎಂದವರುಂಟೆ?"

"ನಿಮ್ಮ ಹಿತೈಷಿಗಳು ಅಂದಮೇಲೆ ನೀವೀಗ ಈ ಒಡವೆ ಎಲ್ಲಿಗೊಯ್ಯು ವಿರಿ ಎಂದು ಕೇಳಬಹುದೆ?"

" ...ಒಂದು ಪೂಜೆ ಮಾಡಿಸಬೇಕಾಗಿದೆ"

"ಏನು ಪೂಜೆ ? "

"ಕೊಮಾರನ ಹಳ್ಳಿಯಿಂದ ದೊಡ್ಡ ಯೋಗೀಶ್ವರರು ಬಂದು ಊರ ಹೊರಗಿನ ಚಾವಡಿಯಲ್ಲಿ ಇರುವುದು ಗೊತ್ತೆ ? "

"....ಹೌದು ಗೌಡರ ಮನೆಯವರು ಹಾಗಂಡದ್ದು ಕೇಳಿದೆ"

"ಕನಕ ಪೂಜೆ ಮಾಡಿಸಿದರೆ....ಮನೆತನ ನಿಲ್ಲುತ್ತದೆ... ವಿರೂಪಾಕ್ಷಪ್ಪನೂ ಮಾಡಿಸಿದ್ದಾನೆ....ನಾವೇಕೆ ಮಾಡಿಸಬಾರದು ?...."

"ಇಷ್ಟು ಹೇಳಲಿಕ್ಕೆ ಎಂತಹ ಕಷ್ಟವಾಯಿತು ನಿಮಗೆ! "

"ಆ ಪೂಜೆಯಿಂದ ಮನೆಗೆ ಒಳ್ಳೆಯದಾಗುತ್ತದೆಯೆ ? " ಎಂದವಳು ಪಂಕಜ.

"ನಿಶ್ಚಯವಾಗಿ ಮಕ್ಕಳಿಲ್ಲದ ಈ ಮನೆ ಬೆಳಗೀತು"

—ಪಂಕಜ ನಾಚಿದಳು. ಮಾದಕದಾದ ನಗೆ ಬೀರಿದಳು ವೆಂಕಮ್ಮ. ಆ ನಗುವಿನ ಮುಂದೆ ಲಕ್ಷ್ಮಣನ ಶಕ್ತಿಯೇ ಉಡುಗಿಹೋಗಿತ್ತು. ಕೊಮಾರನ ಹಳ್ಳಿಯಿಂದ ಯೋಗೀಶ್ವರರೊಬ್ಬರು ಅಮ್ಮೀನಹಳ್ಳಿಗೆ ಬಂದಿದ್ದರು. ಅವರು ಪೂಜೆ ಮಾಡಿಸುವ ವಿಧಾನವೇ ಒಂದುತರಹ. ಮಹಾ ಜ್ಞಾನಿಗಳು, ತಪಸ್ವಿಗಳು.

ಪಟೇಲ ಪುಟ್ಟಯ್ಯನಿಗೆ ಅವರೇ ನೂರು ರೂಪಾಯಿ ಕೊಟ್ಟಿದ್ದರು. ಅದನ್ನಿಟ್ಟು ಪೂಜೆಮಾಡುತ್ತಾ ಬಂದಂತೆ ಮನೆಯಲ್ಲಿ ಧನಕನಕಾದಿಗಳು ರಾಶಿ ರಾಶಿ ಕೂಡಿಬರುತ್ತವೆಂದು ಹೇಳಿದ್ದರು. ಹಾಗೇ ಮಾಡುತ್ತಿದ್ದ ಪುಟ್ಟಯ್ಯ.

ದೇವಾಂಗದ ಸೋಮಪ್ಪ, ಹಿರೇಹಳ್ಳಿ ಭಟ್ಟರು, ತ್ರಿವಿಕ್ರಮರಾಯ, ನಂಜಪ್ಪ, ಈಶ್ವರಯ್ಯ, ಚಂದ್ರಣ್ಣ ಒಬ್ಬರೇ, ಇಬ್ಬರೇ ಊರಿನ ಮುಖ್ಯಸ್ಥರೆಲ್ಲಾ ಅವರ ಪೂಜೆಗೆ ಮರುಳಾಗಿದ್ದರು. ಅವರ ಪ್ರಭಾವಕ್ಕೊಳಗಾಗದ ಗಣ್ಯರೇ ಅಮ್ಮೀನಹಳ್ಳಿಯಲ್ಲಿರಲಿಲ್ಲ. ಶ್ರೀ ಪಟ್ಟಾಭಿರಾಮ ದೇವರಿಗೆ ಸೊಗಸಾದ ಚಂದ್ರಹಾರ ಮಾಡಿಸಿಕೊಟ್ಟಿದ್ದರು ಆ ಯೋಗೀಶ್ವರರು. ಅಂದಮೇಲೆ ಲಕ್ಷ್ಮಣನೂ ಅವರ ಕೈಲಿ ಪೂಜೆಮಾಡಿಸಿ ಆಶೀರ್ವಾದ ಪಡೆಯುವುದೆಂದು ನಿರ್ಧರಿಸಿದ್ದುದರಲ್ಲಿ ಯಾವ ಅಚ್ಚರಿಯೂ ಇರಲಿಲ್ಲ.

ಪಂಕಜಳ ಮೂರ್ಛೆರೋಗ ವಾಸಿಯಾಗಿ ತನಗೊಂದು ಗಂಡುಮಗು ವಾಗಬೇಕೆಂದು ಲಕ್ಷ್ಮಣನ ಆಸೆ. ಹಿಂದಿನ ದಿನವೇ ಯೋಗೀಶ್ವರರು ಪೂಜೆ ಮಾಡಲು ಒಪ್ಪಿದ್ದರು. ಅವರು ಹಾಗೆಲ್ಲಾ ಒಂದೇಬಾರಿಗೆ ಒಪ್ಪುವವರಲ್ಲ. ತ್ರಿವಿಕ್ರಮರಾಯರ ನಿರಂತರ ಪರಿಶ್ರಮದಿಂದ ಒಪ್ಪಿಸಬೇಕಾಗಿದ್ದರೆ ಸಾಕು ಸಾಕಾಗಿ ಹೋಗಿತ್ತು. ಹೀಗೆ ಒಪ್ಪಿದ್ದು ತನ್ನ ಮನೆಯ ಭಾಗ್ಯ ದೇವತೆ ಬಾಗಿಲು ತೆರೆದುಬಂದಿದ್ದಳೆಂದೇ ನಂಬಿದ್ದ ಲಕ್ಷ್ಮಣ.

ಯೋಗೀಶ್ವರರು ಮೌನವ್ರತ ತಾಳಿ ಐದು ವರ್ಷವಾಗಿತ್ತು. ಅವರು ಬರೆದೇ ಶಿಷ್ಯರಿಗೆ ತಮ್ಮ ಅಭಿಪ್ರಾಯ ತಿಳಿಸುವರು. ಸಪ್ತಾಹ, ಅಖಂಡ ಭಜನೆ, ತಪಸ್ಸು ಇವೇ ಅವರ ಸಾಧನ. ಬಾಯಿಲ್ಲದವರಿಗೆ ಬಾಯಿ, ಐಶ್ವರ್ಯ ಬೇಕಾದವರಿಗೆ ಐಶ್ವರ್ಯ, ಹಳೇ ಖಾಯಿಲೆ ಕಸಾಲೆಯಿಂದ ನರಳುತ್ತಿದ್ದವರಿಗೆ ರೋಗ ಪರಿಹಾರ, ಇಂಥದ್ದೊಂತ ಇಲ್ಲದೆ ನಂಬಿಬಂದ ಭಕ್ತರಿಗೆ 'ಓ' ಕೊಡದೆ ಕಳಿಸುತ್ತಿರಲಿಲ್ಲ–ಈ ಕನಕೇಶ್ವರರು.

ಈ ಎಲ್ಲ ವಿವರಗಳನ್ನು ಕೇಳಿದ ವೆಂಕಮ್ಮ–ಪಂಕಜರಿಗೆ ಪೂಜೆಯ ಆಸಕ್ತಿ ಹುಟ್ಟಿತು. ಆದರೆ ನಗನಾಣ್ಯಗಳ ಪೂಜೆ ಎಂಥದಿದು ಎಂಬ ಸಂದೇಹ ವೆಂಕಮ್ಮನಿಂದ ದೂರವಾಗಲಿಲ್ಲ.

"ಪೂಜೆ ಮಾಡಲಿಕ್ಕೆ ಚಿನ್ನದ ಒಡವೆಗಳೇಕೆ ?"

"ಅವರ ಪೂಜಾವಿಧಾನಕ್ಕೆ ನಾವು ಹೊಂದಿಕೊಳ್ಳಬೇಕು. ಅದೇಕೆ ಇದೇಕೆ ಎಂದು ಕೇಳಿದವರುಂಟೆ ? ಅವರು ಹೇಳಿದಂತೆ ಕೇಳಿದರೇ ಶ್ರೇಯಸ್ಕರ...."

"ಹಾಗೆಂದು ವಸ್ತುಗಳನ್ನು ಅವರಿಗೆ ಕೊಟ್ಬಿಟ್ಟು ಬರ್ತೀರಾ ?"

"ಅವರಿದನ್ನು ಕಟ್ಟಿಕೊಂಡೇನು ಮಾಡಿಯಾರು ? ಇದನ್ನೆಲ್ಲಾ ಪೆಟ್ಟಿಗೆಯಲ್ಲಿರಿಸಿ ನಮ್ಮ ಮನೆಯಲ್ಲೇ ಪೂರ್ವ ದಿಕ್ಕಿನಲ್ಲಿರಿಸಿ ಅವರೇ ಮೂರು ಹಗಲು ಮೂರು ರಾತ್ರಿ ಪೂಜೆ ಮಾಡುತ್ತಾರಂತೆ. ಆಮೇಲೆ ನಾವೇ ಐದುವಾರ ಭಕ್ತಿಯಿಂದ ಪೂಜೆ ಮಾಡಿದರೆ ನಮ್ಮ ಇಷ್ಟಾರ್ಥಸಿದ್ಧಿಯಾಗುತ್ತದೆಂದು ಹೇಳಿದರು...."

"ಯಾವಾಗ ಬರುತ್ತಾರೆ ಹಾಗಾದರೆ ?"

"ನಾಳೆ....ಅದಕ್ಕೆ ಇವತ್ತಿನಿಂದ ಅಣಿಮಾಡ್ತಾ ಇದ್ದೀನಿ...."

"....ಸರಿಯೆ"

—ಎಂದು ಅಡಿಗೆಮನೆಗೆ ಇಬ್ಬರೂ ಹೊರಟುಹೋದರು. ಒಡವೆಗಳನ್ನು ಲಕ್ಷ್ಮಣ ಬೆತ್ತದ ಬುಟ್ಟಿಯಲ್ಲಿರಿಸಿ ಭದ್ರಪಡಿಸಿ ಪೂರ್ವ ದಿಕ್ಕಿನಲ್ಲಿ ಹಾಕಿ ಅದರ ಮೇಲಿರಿಸುತ್ತಿದ್ದಂತೆ ತಿಪ್ಪಯ್ಯ ಬಂದು ಮುಂಬಾಗಿಲಲ್ಲಿ ನಿಂತು ಕೂಗಿದ.

"ಲಕ್ಷ್ಮಣಾ.... ಓ ಲಕ್ಷ್ಮಣಾ"

"ಬಂದೇ-ಯಾರು ? ಓ ತಿಪ್ಪಯ್ಯನವರೇ ಬರಬೇಕು ಬರಬೇಕು. ಎಷ್ಟುದಿನವಾಯ್ತು ಏನು ತಾನು.... ಎಲ್ಲಾ ಕ್ಷೇಮವೆ ?....ಕೂತುಕೊಳ್ಳಿ"

"........ಶ್ರೀರಾಮಾ ಕಾಪಾಡು........ಎಲ್ಲಾ ಆರಾಮಪ್ಪ........ಸುಬ್ಬರಾಯನಿಂದ ಕಾಗದ ಬಂದಿತ್ತೆ ? " ಎನ್ನುತ್ತ ಕುಳಿತರು.

"ಹೂಂ ಒಂದು ವಾರದ ಹಿಂದೆ ಬಂದಿತ್ತು. ಚಳ್ಳಕೆರೆ ಒಳ್ಳೆ ಊರು, ಅನುಕೂಲವಾಗಿದೆ ಅಂತ ಬರೆದಿದ್ದಾನೆ"

"ಇನ್ನೇನೂ ವಿಷಯವಿಲ್ಲವೆ ?...."

"ಇನ್ನೇನಿದೆ...."

"ನನಗೊಂದು ಕಾಗದ ಬರೆದಿದ್ದಾನೆ-ನಿನಗೂ ಬರೆದಿರಬೇಕಲ್ಲವೆ ಪಾಲಿನ ವಿಷಯ...."

"ಹೂಂ ಬರೆದಿದ್ದಾನೆ."

"ಏನಾದರೂ ಒಂದು ತರಹ ಇತ್ಯರ್ಥವಾಗಿಬಿಡಲಿ. ಎಷ್ಟು ದಿನ ಈ ಮೀನಾಮೇಷ ? ಅವನಿಗೂ ಒಂದು ತರಹ ನೆಮ್ಮದಿಯಾಗುತ್ತೆ, ನಿಶ್ಚಿಂತೆಯಾಗಿರುತ್ತಾನೆ...."

"ಬೇಡಾಂದವರು ಯಾರು ತಿಪ್ಪಯ್ಯ-ಮಹರಾಯನ ಹಾಗೆ ಬರಲಿ ತನ್ನ ಪಾಲು ತಾನು ತೆಗೆದುಕೊಂಡುಹೋಗಲಿ...."

"ಸರ್ಕಾರಿ ಕೆಲಸದವನು ರಜವೆಲ್ಲಿ ಸಿಕ್ಕುತ್ತದೆ ಬೇಕು ಬೇಕಾದಾಗ ? "

"ಹಾಗಾದರೆ ನನ್ನ ಏನುಮಾಡು ಅಂತೀರ ? "

"ಒಂದುದಿನದ ಮಟ್ಟಿಗೆ ಬಂದು ಪಂಚಾಯಿತಿದಾರರ ಎದುರಿಗೆ ಪಾಲು ಪಟ್ಟಿ ತಯಾರಿಸಿಬಿಡೋಣ, ಅವರ ಮಾವನಿಗೂ ಬರುವಂತೆ ಹೇಳಿ ಕಳಿ

ಸೋಣ. ಅವನು ಬೇಕಾದರೆ ವಾಪಸ್ಸು ಹೋಗಲಿ. ಆಮೇಲೆ ಅವರ ಮಾವಂದಿರು ಮುಂದಿನ ಕೆಲಸ ಮಾಡಬಹುದಲ್ಲ ?"

ಈ ಮಾತಿಗೆ ಲಕ್ಷ್ಮಣನಿಗೆ ಮನಸ್ಸು ಮುದುಡಿದಂತಾಯಿತು. ತನ್ನ ಮೇಲೆ ನಂಬಿಕೆ ಇಲ್ಲದೆ ಇವರೆಲ್ಲಾ ಹೀಗೆ ಮಾಡುತ್ತಿದ್ದಾರಲ್ಲಾ ! ನಾನೇನು ಸುಬ್ಬರಾಯನಿಗೆ ಮಾಡಿರುವ ಅನ್ಯಾಯ ? ಈಗೇನು ನಾನು ಹೊಲ ಮನೆ ಮಾರಿ ಹಾಳುಮಾಡುತ್ತಿದ್ದೇನೆಯೇ ? ಎಂದೆಲ್ಲಾ ಯೋಚಿಸಿ ಇದೆಲ್ಲಾ ಈ ತಿಪ್ಪಯ್ಯನೇ ಸುಬ್ಬುವಿಗೆ ಹೇಳಿಕೊಟ್ಟು ಪಾಲಿನ ವಿಷಯ ಪ್ರಧಾನ್ಯಕ್ಕೆ ತರುತ್ತಿರುವನೆಂದು ಅವನ ಯೋಚನೆ.

"ಇದಕ್ಕೆ ಈಗೇನು ಅವಸರ, ನಾನೇನು ಆಸ್ತಿ ಹಾಳುಮಾಡುತ್ತಿದ್ದೇನೆಯೇ, ಮನೆ ಮಾರುತ್ತಿದ್ದೇನೆಯೇ ಹೇಳಿ ತಿಪ್ಪಯ್ಯ"

"....ನನ್ನ ಅವಸರವಲ್ಲ ಲಕ್ಷ್ಮಣ, ಇದೇನು ಹೀಗೆ ಮಾತಾಡ್ತಿ ? ಸುಬ್ಬರಾಯ ನನಗೆ ಕಾಗದಾ ಬರೆಯದಿದ್ದರೆ ನಾನೇಕೆ ಬಂದು ಈ ವಿಚಾರವಾಗಿ ಹೇಳುತ್ತಿದ್ದೆ ? ಇದರಲ್ಲಿ ನನ್ನದೇನೋ ಸ್ವಾರ್ಥವಿದೆ ಅಂತ ನೀನು ಸಂಶಯ ಪಡೋಹಾಗಿದೆ...."

"ಸಂಶಯದ ವಿಚಾರಕ್ಕಲ್ಲ ನಾನು ಹೇಳಿದ್ದು, ನೀವು ತಪ್ಪು ತಿಳಿಯಬಾರದು"

"ತಪ್ಪೇಕೆ ತಿಳಿಯಲಿ ? ನಿನ್ನ ಮಾತು ನನ್ನಿಂದ ಹೀಗೆ ಮಾತಾಡಿಸಿತು"

"....ಸರಿ ನನಗೇಕಪ್ಪ ಈ ಜವಾಬ್ದಾರಿ ? ಹಿತಚಿಂತಕ ಅನ್ನೊ ಅಭಿಮಾನದಿಂದ ಅವನು ಕಾಗದಾ ಬರೀತಾನೆ. ನನ್ನ ಮನಸ್ಸು ನಿಲ್ಲದೆ ನಿನ್ನ ಹತ್ತಿರ ಬಂದು ವಿಷಯ ತಿಳಿಸಿದೆ. ನಾನಿಲ್ಲಿಗೆ ಬರುವುದೇ ನಿನಗೆ ಬೇಡವಾದರೆ ಹಾಗೆಂದೇ ನಾನು ಸುಬ್ಬರಾಯನಿಗೆ ಬರೆಯುತ್ತೇನೆ"

"ನಾನು ಹಾಗೆಂದೆನೆ ತಿಪ್ಪಯ್ಯ ? ಸುಮ್ಮನೆ ನನ್ನ ಮೇಲೆ ಅಪಾದನೆಯ ಮಾತಾಡಬೇಡಿ"

"ಹಾಗಾದರೆ ಈಗ ನಾನು ಅವನಿಗೇನು ಬರೆಯಲಿ ?"

"ಆಗಲೇ ಹೇಳಿದೆನಲ್ಲ...."

“ಅದೇ ರಾಗ ಹಾಡಬೇಡ ಲಕ್ಷ್ಮಣ-ಸುಬ್ಬರಾಯನೂ ಮಕ್ಕಳಂದಿಗ ಗುಮಾಸ್ತೆಗಿರಿಯಲ್ಲಿ ಅವನು ಪಡ್ತಾ ಇರೋ ಪಾಡು ನಿನಗೆ ಗೊತ್ತಿದೆ. ನೀನು ಮನಸ್ಸುಮಾಡಿ ಈ ಪಾಲಿನ ವಿಷಯ ಒಂದು ನಿರ್ಧಾರಕ್ಕೆ ತಂದುಬಿಡು”

“ಆಗಲೀಂತ ನಾನು ಹೇಳಿದೆನಲ್ಲಾ''

“ಸರಿ ಹಾಗಂತಲೇ ಬರಿತೀನಿ”

“ಹಾಗೇ ಬರೆಯಿರಿ ಯಾರೂ ಬೇಡಾಂತ ಅಂದವರು!”

“ಸರಿ, ನಾನು ಬರ್ತೀನಿ....”

“ಒಳ್ಳೇದು ನಮಸ್ಕಾರ”

‘ರಾಮರಾಮ’ ಎನ್ನುತ್ತಾ ಎದ್ದು ಹೊರಟುಹೋದ ತಿಪ್ಪಯ್ಯ. ತಿಪ್ಪಯ್ಯ ಹೋಗುತ್ತಲೇ ಲಕ್ಷ್ಮಣ ಮತ್ತೆ ಪೂಜೆಗೆ ಅಣಿಮಾಡತೊಡಗಿದ. ವೆಂಕಮ್ಮ ನಿಗೆ ಪಂಕಜಳಿಗೆ ಹೇಳಿ ಪೂಜೆಗಾಗಿ ಮನೆ ಸಾರಿಸಿ ಗುಡಿಸಿ ತೋರಣ ಕಟ್ಟಿ ಸಿದ. ಯೋಗೀಶ್ವರರ ಪವಿತ್ರ ಪಾದಧೂಳಿ ಮನೆಯಲ್ಲಿ ಬಿದ್ದರೆ ತಾನು ಪಾವನ ನಾದೆನೆಂದು ಲಕ್ಷ್ಮಣನ ನಂಬಿಕೆ.

ಆ ದಿನವೂ ಬಂತು. ಇಡೀ ಅಮ್ಮೇನಹಳ್ಳಿಯೇ ಬಂದು ಸೇರಿತ್ತು ಪೂಜೆಗೆ. ಯೋಗೀಶ್ವರರು ಕಣ್ಣುಮುಚ್ಚಿ ಭಾವ ಪರವಶರಾಗಿ ಭಕ್ತಿ ಪರವಶ ರಾಗಿ ಏಕೈಕ ಚಿತ್ತದಿಂದ ಪೂಜೆ ಮಾಡಿದಾಗ ಲಕ್ಷ್ಮಣನಿಗೆ ತಾನಿನ್ನು ಉದ್ಧಾರ ವಾದೆನೆಂದೆನಿಸಿತು. ಪಂಕಜ–ಲಕ್ಷ್ಮಣ ಒಟ್ಟಿಗೇ ಉದ್ದಂಡ ನಮಸ್ಕಾರ ಹಾಕಿ ದರು.

ಎರಡು ಹಗಲು, ಎರಡು ರಾತ್ರಿ ಪೂಜೆ ನಡೆಯುವುದಿತ್ತು. ಮಂತ್ರವನ್ನು ಲಕ್ಷ್ಮಣನಿಗೆ ಉಪದೇಶಿಸಿ ಮೊದಲ ದಿನದ ರಾತ್ರಿ ಮೊದಲ ಜಾವದ ಪೂಜೆ ಮಾಡಿ ಗುರುಗಳು ಬಳಿಯಲ್ಲಿನ ಸ್ಲೇಟಿನಲ್ಲಿ ಬರೆದರು:

‘‘ಭಕ್ತಿಯಿಂದ ಕನಕಾಧಿದೇವತೆಯನ್ನು ಆರು ವಾರ ಮೂರು ದಿನ ನಾಲ್ಕು ತಾಸು ಪೂಜೆ ಮಾಡು. ಅನಂತರ ಅಲ್ಲಿಂದ ಐದನೇ ರಾತ್ರಿ ಹನ್ನೆ ರಡು ಘಂಟೆಗೆ ಪೆಟ್ಟಿಗೆಯಲ್ಲಿನ ಒಡವೆ ತೆಗೆದಿಟ್ಟುಕೋ. ಪೆಟ್ಟಿಗೆಯಲ್ಲಿನ ಅಕ್ಕಿ ಯಿಂದ ಪರಮಾನ್ನಮಾಡಿ ನೀನು, ನಿನ್ನ ಸಹಧರ್ಮಿಣಿ ಸ್ವೀಕಾರ ಮಾಡಿ. ಹೀಗೆ ಮಾಡಿದಲ್ಲಿ ನಿನ್ನ ಮನೋಭಿಲಾಷೆ ತೀರಿತು. ನಿನಗೆ ಪರಮಾತ್ಮ

ಧನಕನಕಾದಿ ಸೌಭಾಗ್ಯ ಕೊಟ್ಟು ಕಾಪಾಡುತ್ತಾನೆ. ನಮಗೂ ನಿನ್ನ ಭಕ್ತಿಯಿಂದ ತೃಪ್ತಿಯಾಗಿದೆ. ಶುಭಮಸ್ತು ಹರಿಃ ಓಂ"

ಇದನ್ನೋದಿಕೊಂಡ ಲಕ್ಷ್ಮಣನ ಮುಖ ಕರಿದ ಹಪ್ಪಳದಂತೆ ಹಿಗ್ಗಿತು. ಪಂಕಜಳ ಮುಖ ಅರಳಿತು. ವೆಂಕಮ್ಮ ತನ್ನ ಮಸಲತ್ತಿನಿಂದ ಆದ ಈ ಮದುವೆಯಿಂದ ಸಂತಾನ ಪ್ರಾಪ್ತಿಯಾದರೆ ಬಂದ ಕೆಟ್ಟ ಹೆಸರು ಮುಚ್ಚೀತು ಎಂದು ಅವಳೂ ಅಡ್ಡಬಿದ್ದಳು.

ಲಕ್ಷ್ಮಣಸ್ವಾಮಿಗಳಿಗೆ ಬೆಳ್ಳಿ ತಟ್ಟೆಯಲ್ಲಿ ಇಪ್ಪತ್ತು ರೂಪಾಯಿ ಕಾಣಿಕೆ ಇಟ್ಟು ಕೈಮುಗಿದ. ಅವರು ಸ್ವೀಕರಿಸಲಿಲ್ಲ. ಗಡ್ಡದಮೇಲೆ ಕೈಆಡಿಸುತ್ತಾ "ತೃಪ್ತೋಽಸ್ಮಿ" ಎಂದು ಬರೆದು ಆಶೀರ್ವದಿಸಿ ಪರಿವಾರದೊಡನೆ ಹೊರಟು ಹೋದರು ಕನಕೇಶ್ವರರು.

ಬಹು ಭಕ್ತಿಯಿಂದ ಲಕ್ಷ್ಮಣ ಪೂಜೆ ಮಾಡಿದ. ಪಂಕಜ ಆರತಿ ಎತ್ತಿದಳು, ವೆಂಕಮ್ಮ ಹೂರಣದ ನೇವಿದ್ಯ ಮಾಡಿದಳು. ಹಾಡು ಹೇಳಿ ಆರತಿ ಬೆಳಗಿದಳು.

ಆರು ವಾರ ನಿರಂತರ ಪೂಜೆ ನಡೆಯಿತು. ಈ ಮಧ್ಯೆ ಯೋಗೀಶ್ವರರು ಆ ಊರು ಬಿಟ್ಟು ಮಂಗಳೂರಿಗೆ ಪ್ರಯಾಣ ಮಾಡಿದರು. ಊರಿಗೆ ಊರೇ ಅವರನ್ನು ಸತ್ಕರಿಸಿ ಬೀಳ್ಕೊಟ್ಟಿತು.

ಎಂದಿಗೆ ಆರು ವಾರ ಮುಗಿದೀತು, ಎಂದು ಪರಮಾನ್ನ ತಿಂದೇನು ಎಂದಿನಿಂದ ನಾನು ತಾಯಿಯಾಗಲು ಅಗೆಮಾಡಿಕೊಂಡೇನು ಎಂದು ಹಾತೊರೆದಿದ್ದಳು ಪಂಕಜ.

ಆ ಸುಮುಹೂರ್ತದ ದಿನ ರಾತ್ರಿ ಆ ಕಡೆ ಈ ಕಡೆ ಎತ್ತರವಾದ ಕಂಚಿನ ದೀಪಸ್ತಂಭ ಸ್ಥಾಪಿತವಾಗಿದ್ದವು. ದೀಪದ ಬೆಳಕು ಕಾತುರರಾದ ಲಕ್ಷ್ಮಣ ಪಂಕಜ, ವೆಂಕಮ್ಮನವರ ಮುಖದ ಮೇಲೆ ಚೆಲ್ಲಿತ್ತು. ಕಡೆಯ ಧೂಪಾರತಿ ಎತ್ತಿ ಭಕ್ತಿಯಿಂದ ಮಂಗಳಾರತಿ ತೆಗೆದುಕೊಂಡು ಬೆತ್ತದ ಬುಟ್ಟಿಯನ್ನು ಮಡಿಯಿಂದ ತೆಗೆದು ನೋಡಿದರು.

ಲಕ್ಷ್ಮಣ ಚೀರಿ ಮೂರ್ಛೆಹೋದ. ವೆಂಕಮ್ಮ ಮಂಕು ಬಡಿದು ನಿಂತಿದ್ದಳು, ಪಂಕಜ ಮೊದಲೇ ಮಲರೋಗದಾಕೆ ಇನ್ನು ಗರಬಡಿದರೆ ಕೇಳಬೇಕೆ? ನೊರೆನೊರೆಯಾಗಿ ಬಾಯಲ್ಲಿ ನೊರೆ ಚೆಲ್ಲಿಕೊಂಡು ತತ್ತರಿಸಿ ಬಿದ್ದಳು.

ಲಕ್ಷ್ಮಣನ ಮನೆ ಹಾಳಾಗಿಹೋಗುವ ಸ್ಥಿತಿ ಒದಗಿತ್ತು. ಯೋಗೀಶ್ವರರ ಮಂಕುಬೂದಿಗೆ ಬಲಿಯಾದ ಈ ಮೂರ್ಖರು ಪೂರಾ ಮೋಸ ಹೋಗಿದ್ದರು. ಇದ್ದ ಬಂಗಾರ ಮಂಗಮಾಯವಾಗಿತ್ತು. ಎಚ್ಚರವಾದ ಮೇಲೆ ಹುಚ್ಚನಂತೆ ಹೊರಳಾಡಿದ ಲಕ್ಷ್ಮಣ.

ಇವನ ಗತಿಯೇ ಆ ಯೋಗೀಶ್ವರನನ್ನು ನಂಬಿದ ಇತರ ಭಕ್ತರಿಗಾಗಿತ್ತು. ತಿಪ್ಪಯ್ಯನಿಗೆ ಈ ಸುದ್ದಿ ತಿಳಿದು ತುಂಬಾ ಪೇಚಾಡಿದ. ಅವಿಭಕ್ತ ಕುಟುಂಬದ ಆಸ್ತಿಯನ್ನು ಠಕ್ಕ ಗುರುವಿನ ಪಾಲುಮಾಡಿದ ಈ ಮೂರ್ಖ ಲಕ್ಷ್ಮಣನ ಭಕ್ತಿ ತಿಪ್ಪಯ್ಯನಿಗೆ ಕಡುಕೋಪ ತಂದಿತು. ಇವನಲ್ಲದೆ ಸುಬ್ಬರಾಯನೂ ಇವನ ಮೂರ್ಖತನದಿಂದ ಹಾಳಾಗಬೇಕೆ? ಮೊದಲೇ ಈ ಚಿನ್ನದೊಡವೆಯಲ್ಲಿ ಸುಬ್ಬರಾಯ ತನ್ನ ಪಾಲಿನದನ್ನು ಕೊಂಡೊಯ್ದಿದ್ದರೆ ಚೆನ್ನಾಗಿರುತ್ತಿತ್ತೆಂದು ಯೋಚಿಸಿದ. ವಿಚಾರ ಕೈಮೀರಿಹೋಗಿತ್ತು.

ಇದನ್ನು ಕುರಿತು ಸುಬ್ಬರಾಯನಿಗೆ ಪತ್ರ ಬರೆಯುವುದಲ್ಲದೆ ಬೇರಿನ್ನೇನೂ ತಿಪ್ಪಯ್ಯನಿಂದ ಸಾಧ್ಯವಿರಲಿಲ್ಲ.

೧೫

ಕ್ಷೇಮ ಶ್ರೀರಾಮ ಚಳ್ಳಕೆರೆ

ತಾ||...............

ತಿ|| ಭಾವನವರಿಗೆ—

ಸುಬ್ಬರಾಯನ ಸಾಷ್ಟಾಂಗ ನಮಸ್ಕಾರಗಳು. ಅದಾಗಿ ಉಭಯ ಕುಶಲೋಪರಿ ಸಾಂಪ್ರತ. ನಿಮ್ಮ ಪತ್ರ ಕೈಸೇರಿ ಸಕಲವೂ ಅಭಿಪ್ರಾಯವಾಯಿತು. ಸರಸ್ವತಿಯ ನಾಲ್ಕನೆ ವರ್ಷದ ಹುಟ್ಟಿದ ಹಬ್ಬ ಅಲ್ಲೇ ಮಾಡಬೇಕೆಂದು ನೀವು ಬರೆದಿರುವುದನ್ನು ಓದಿದ ರಾಜೀವಿಯ ಮನಸ್ಸು ಆಗಲೇ ಶಿವಮೊಗ್ಗೆಯಲ್ಲಿದೆ. ಅವಳ ಉತ್ಸಾಹ ಹೇಳತೀರದು. ಚಿ|| ತ್ರಿಪುರಸುಂದರಿಗೂ ಇದರ ಜೊತೆಗೆ ರಾಜೀವಿ ಒಂದು ಕಾಗದ ಇಟ್ಟಿದ್ದಾಳೆ, ಕೊಡುವುದು.

ಚಿತ್ರದುರ್ಗ ಬಿಟ್ಟು ಒಂದು ವರ್ಷವಾದರೂ ಅಲ್ಲಿನ ನೆನಪು ಮರೆಯುವಂತಿಲ್ಲ. ರಾಮಸ್ವಾಮಿಗಳು ಇಲ್ಲಿಗೆ ಬಂದಿದ್ದರು. ಅವರಿಗೆ ಈಗ ಶಿವಮೊಗ್ಗಾಕ್ಕೆ ವರ್ಗವಾಗಿರುವುದಾಗಿ ತಿಳಿದುಬಂದಿದೆ. ನಿನ್ನ ವಿಳಾಸ ತಿಳಿಸಿ ನಿನ್ನನ್ನು ಕಾಣುವಂತೆ ಬರೆದಿದ್ದೇನೆ. ಅವರಿಗೊಂದು ಒಳ್ಳೆ ಮನೆ ಮಾಡಿ ಕೊಡುವುದು ನಿನ್ನ ಭಾರ.

ಹುಡುಗರನ್ನು ನೋಡಬೇಕೆಂದೆನಿಸಿದೆ—ನೀನು ಖಂಡಿತ ತ್ರಿಪುರಸುಂದರಿಯನ್ನು ಕಳಿಸಿಕೊಡಬೇಕು. ಅವಳ ಜೊತೆಗೆ ರಾಜೀವಿಯನ್ನೂ ಕಳಿಸುತ್ತೇನೆ. ಸರಸ್ವತಿಯ ಹುಟ್ಟಿದ ಹಬ್ಬದ ನಂತರ ಇಲ್ಲಿಗೆ ವಾಪಸ್ಸು ಬರಬಹುದು.

ಸರಸ್ವತಿಯ ತುಂಟಾಟ ಹೇಳತೀರದು. ವಿಪರೀತ ಹಟ ಮಾಡುವುದನ್ನು ಕಲಿತಿದ್ದಾಳೆ. ನಾನು ಕಚೇರಿಗೆ ಹೊರಟರೆ ಸಾಕು, ಬೆನ್ನು ಹತ್ತಿಬಿಡುತ್ತಾಳೆ. 'ಅಪ್ಪಾ....ಎತ್ತೊ....ನಾನು ಬರು" ಎಂದು ಮುದ್ದು ಮಾತಾಡಿದಾಗ ಅವಳನ್ನು ಎತ್ತಿಕೊಂಡು ಕೊಂಚ ದೂರ ಕರೆದೊಯ್ದು ಕರೆತಂದರೇ ಸರಿ ಇಲ್ಲವಾದರೆ ಆರ್ಭಟ ಮಾಡಿ ರಂಪ ಮಾಡಿಬಿಡುತ್ತಾಳೆ.

ಇನ್ನು ನಿನ್ನ ಲಕ್ಷ್ಮೀನಾರಾಯಣಸ್ವಾಮಿ ಗುಡಿಯ ಕಾರ್ಯ ಕಲಾಪಗಳು ಹೇಗಿದೆ? ನಾನು ಅಲ್ಲಿಗೆ ಬಂದು ಶಾನೇ ದಿನವಾಯಿತು. ಹಳೆಯ

ನೆನಪು ಬಂದಾಗ ಅಲ್ಲಿದ್ದಾಗ ಎಷ್ಟು ಚೆನ್ನಾಗಿತ್ತು ಎಂದೆನಿಸುತ್ತದೆ. ಈ ಸಲ ರಾಮನವಮಿ ಮಂಗಳದ ಹೊತ್ತಿಗೆ ಖಂಡಿತ ಬರಬೇಕೆಂದು ಮನಸ್ಸು. ಇನ್ನೇನು ವಿಶೇಷವಿಲ್ಲ. ಹುಡುಗರಿಗೆ ಆಶೀರ್ವಾದಗಳು.

ಇತಿ ನಿನ್ನವ,
ಸುಬ್ಬರಾಯ

* * * *

ಹೊಸದುರ್ಗ
ತಾ||...............

ಕ್ಷೇಮ ಮಾ|| ತಾಯಿಯವರ ಸ| ಕ್ಕೆ.

ಸಂಪ್ರದಾಯಕ್ಕೆ ಕ್ಷೇಮ ಎಂದು ಬರೆಯಬೇಕಾಗಿದೆ. ಬರೆದಿದ್ದೇನೆ. ಏನು ಕ್ಷೇಮವೋ ದೇವರಿಗೇ ಪ್ರೀತಿ. ಅಮ್ಮ, ನೀನು ಕಳ್ಳೂರುಕಟ್ಟೆಯಿಂದ ಶಿವಮೊಗ್ಗೆಗೆ ಯಾವಾಗ ಬರುತ್ತೀ ಬರಿ. ನಾನು ಅಲ್ಲಿಗೆ ಬರಬೇಕೆಂದು ಇದ್ದೇನೆ. ಇಲ್ಲಿ ನನಗೆ ತುಂಬಾ ಬೇಜಾರು. ನನ್ನ ಸ್ನೇಹಿತರು ಡಾಕ್ಟರ ಹೆಂಡತಿ ಇದ್ದಾಗ ಹಾಗೂ ಹೀಗೂ ಬೇಸರ ಕಳೆಯುತ್ತಿದ್ದೆ. ಈಗ ಡಾಕ್ಟರಿಗೂ ವರ್ಗವಾಗಿ ಅವರು ಊರು ಬಿಟ್ಟರು.

ತ್ರಿಪುರಸುಂದರಮ್ಮನವರಿಗೂ ಕಾಗದಾ ಬರೆದಿದ್ದೇನೆ. ರಾಜಮ್ಮನ ವಿಳಾಸ ತಿಳಿಸುವಂತೆ ಬರೆದಿದ್ದೇನೆ. ಅವರು ಚಿತ್ರದುರ್ಗ ಬಿಟ್ಟ ಮೇಲೆ ಅವರ ಸಮಾಚಾರವೇ ತಿಳಿಯದಂತಾಗಿದೆ. ರಾಜಮ್ಮನ ಮಗಳು ಸರಸ್ವತಿ ತುಂಬಾ ಚೆನ್ನಾಗಿರಬಹುದು ಈಗ.

ನಿನ್ನ ಅಳಿಯಂದಿರ ವಿಚಾರ ಏನು ಬರೆಯಲಿ? ನ್ಯಾಯವಾಗಿ ತಾಲ್ಲೋಕು ಆಫೀಸು ಮೇಜು ಕುರ್ಚಿಯನ್ನೇ ಅವರು ಲಗ್ನವಾಗಬೇಕಿತ್ತು. ತಪ್ಪಿ ನನಗೆ ತಾಳಿ ಕಟ್ಟಿ ಗೋಳು ಹುಯ್ದುಕೊಳ್ಳುತ್ತಾರೆ. ಮನೆಯಕಡೆ ಇವರಿಗೆ ಲಕ್ಷ್ಯವೇ ಇಲ್ಲ. ಸದಾ ಕಚೇರಿಯ ಕಾಗದ ಪತ್ರಗಳ ವಿಚಾರದಲ್ಲಿ ಮುಳುಗಿರುತ್ತಾರೆ.

ಈ ಬೇಜಾರಿಗೇ ನನಗೆ ಶಿವಮೊಗ್ಗೆಗೆ ಬರಬೇಕೆಂದೆನಿಸಿದೆ. ತ್ರಿಪುರ ಸುಂದರಿಯ ಮಕ್ಕಳ ಜೊತೆ ಕಾಲ ಕಳೆಯಬೇಕೆನಿಸಿದೆ. ನನ್ನ ಮೊರೆ ಕೇಳಿ

ಬೇಗ ಶಿವಮೊಗ್ಗೆಗೆ ಬಂದು ನನ್ನ ಕರೆಸಿಕೊಳ್ಳಲಾರೆಯಾ? ಮತ್ತೇನು ವಿಶೇಷವಿಲ್ಲ.

ನಮಸ್ಕಾರಗಳು.

ಇತಿ ನಿನ್ನ ಮಗಳು,
ಸುಶೀಲ.

* * * *

ಕುಶಲ. ಶ್ರೀರಾಮ ಅಮ್ಮೇನಹಳ್ಳಿ,
ತಾ||...............

ಚಿ|| ಸುಬ್ಬರಾಯನಿಗೆ—

ತಿಪ್ಪಯ್ಯನ ಆಶೀರ್ವಾದಗಳು. ನಿನ್ನ ಕಾಗದ ನೋಡಿದರೆ ನೀನು ಈ ವಿಚಾರ ತುಂಬಾ ಮನಸ್ಸಿಗೆ ಹಚ್ಚಿಕೊಂಡಂತೆ ತೋರುತ್ತದೆ. ಅಂತಹ ಮುಳುಗಿಹೋಗುವ ಪ್ರಸಂಗ ಒದಗಿಲ್ಲವೆಂದು ಮಾತ್ರ ಹೇಳಬಲ್ಲೆ. ಲಕ್ಷ್ಮಣನ ಮೂರ್ಖತನವೇ ನಿನಗೂ ಅರ್ಧ ಸಲ್ಲಬೇಕಾದ ಬಂಗಾರದ ಒಡವೆ ಕಳೆದುದಕ್ಕೆ ಕಾರಣ. ಅಂದಮೇಲೆ ಬಂಗಾರದ ಕಿಮ್ಮತ್ತಿಗೆ ಸರಿದೂಗುವಂತೆ ಹೊಲ ದಲ್ಲೋ ಅಥವ ತೋಟದಲ್ಲೋ ಒಂದು ಭಾಗ ಹೆಚ್ಚಾಗಿ ನಿನ್ನ ಪಾಲಿಗೆ ಬರು ವಂತೆ ಮಾಡಿದರೆ ಸರಿ. ಆದರೂ ನೀನು ಈ ಬಗ್ಯೆ ಒಂದು ಇತ್ಯರ್ಥಕ್ಕೆ ಬರ ಬೇಕಾದರೆ ನೀನು ಇಲ್ಲಿಗೆ ಬಂದು ನಿಂತು ಕೆಲಸ ಸಾಧಿಸಿಕೊಂಡರೇ ಉತ್ತಮ. ಇಲ್ಲದಿದ್ದರೆ ಇದು ಆಗುವ ಕೆಲಸವಲ್ಲ.

ಹಿಂದಿನ ಕಾಗದದಲ್ಲಿ ಬರೆದಿದ್ದಂತೆ ಇನ್ನೂ ವೆಂಕಮ್ಮನವರದೇ ಮನೆ ಯಲ್ಲಿ ಆಡಳಿತ. ಬಂಗಾರ ಹೋದರೂ ಬುದ್ಧಿ ಬರಲಿಲ್ಲ.

ನಿಮ್ಮ ತಂದೆಯ ಕಾಲದಲ್ಲಿದ್ದ ಮನೆಯ ಸ್ಥಿತಿಗೂ ಈಗ್ಗ್ಯೂ ಹೋಲಿಸಿ ದರೆ ಅಜಗಜ ನ್ಯಾಯ. ಅವರ ಪಟ್ಟಾಭಿರಾಮ ದೇವರ ಸೇವೆಯೆಲ್ಲಿ, ಈತನ ವೆಂಕಮ್ಮ ದೇವರ ಸೇವೆ ಎಲ್ಲಿ? ಮನೆ ನೋಡಿದರೆ ವ್ಯಥೆಯಾಗುತ್ತದೆ. ನೀನು ಇಲ್ಲೆ ಬಂದು ಇದ್ದು ತಂದೆಯ ಹೆಸರು ಉಳಿಸಬಹುದೆಂಬ ನಂಬಿಕೆ ನನಗಿಲ್ಲ. ನೀನು ಸರ್ಕಾರಿ ನೌಕರಿಯ ಬೆನ್ನು ಬಿದ್ದಮೇಲೆ ಸ್ಥಳ-ಮನೆಯಕಡೆ ಗಮನವೆಲ್ಲಿ ಬರುತ್ತದೆ?

ಎಲ್ಲಾದರೂ ಇರು, ನೀನು ಚೆನ್ನಾಗಿರಬೇಕೆಂದು ನಾನು ದೇವರಲ್ಲಿ ಬೇಡುತ್ತೇನೆ. ಪಾಲಿನ ವಿಚಾರ ಜವಾಬ್ದಾರಿ ತೆಗೆದುಕೊಂಡು ನಿನಗೆ ಅನ್ಯಾಯವಾಗದಂತೆ ನೋಡಿಕೊಳ್ಳುವ ಭಾರ ನನಗಿರಲಿ.

ಮೊನ್ನೆ ನಾಲ್ಕು ದಿನದ ಕೆಳಗೆ ಹಿರೇಹಳ್ಳಿಗೆ ಹೋಗಿದ್ದೆ. ನಿಮ್ಮ ಮಾವನ ಮನೆಯಲ್ಲಿ ಎಲ್ಲಾ ಚೆನ್ನಾಗಿದ್ದಾರೆ. ಸರಸ್ವತಿಯ ಮೂರನೆ ವರ್ಷದ ಹುಟ್ಟಿದ ಹಬ್ಬ ಶಿವಮೊಗ್ಗೆಯಲ್ಲಿ ಮಾಡ್ತೀನೀಂತ ಬರೆದಿದ್ದೀಯಂತಲ್ಲಾ? ಅವಾಗ ಖಂಡಿತ ಹಿರೇಹಳ್ಳಿಗೆ ಬಂದೇ ಹೋಗಬೇಕೆಂದು ನಿನ್ನ ಅತ್ತೆಯವರ ಬಲವಂತ.

ನಿನ್ನ ಅಗ್ರಜ ಈಚೀಚೆಗಂತೂ ಮಂಕು ಕವಿದುಕೊಂಡಹಾಗಿದ್ದಾನೆ. ಅದೇನು ಮಂಕುಬೂದಿ ಚೆಲ್ಲಿದ್ದಾಳೆಯೋ ಆ ಮಹರಾಯಿತಿ. ಹೆಂಡ್ತಿ ಅನ್ನೋ ಪಂಕಜಳಿಗಿಂತ ಇವರಿಬ್ಬರ ಸರಸ ಸಲ್ಲಾಪದ ವಿಚಾರ ಊರೋಳಗೆಲ್ಲಾ ನಗೆ ಪಾಟಲಿನ ಮಾತಾಗಿದೆ.

ಹೆಚ್ಚೇನು ವಿಶೇಷವಿಲ್ಲ. ಉತ್ತರ ಬರಿ.

ಇತಿ ಆಶೀರ್ವಾದಗಳು,

ತಿಪ್ಪಯ್ಯ

* * * *

ಕ್ಷೇಮ ಶ್ರೀ ಹೊನ್ನಾಳಿ

ತಾ||...............

ಚಿ|| ಬಾಲಕ ಜನಾರ್ಧನನಿಗೆ—

ನಿನ್ನ ಚಿಕ್ಕಪ್ಪ ರಂಗಣ್ಣನ ಆಶಿರ್ವಾದಗಳು. ನಿನ್ನ ಕಾಗದ ತಲುಪಿತು. ನೀವೆಲ್ಲಾ ಚೆನ್ನಾಗಿರುವುದು ತಿಳಿದು ಸಂತೋಷವಾಯಿತು. ನೀನು ಬರೆದಂತೆ ಶಾಂತಿ ಗೀಂತಿ ಮಾಡಿಸಿದರೆ ಒಳ್ಳೆಯದು. ನಾಗರ ಪ್ರತಿಷ್ಠೆ ಮಾಡಿಸುವ ವಿಚಾರಕ್ಕೆ ನಿನ್ನ ಸ್ನೇಹಿತರಾದ ಸುಬ್ಬರಾಯರ ಮಾವ ನಾಗರಾಜ ಜೋಯಿಸ ರನ್ನು ವಿಚಾರಿಸಿದೆ. ಮೊನ್ನೆ ಅವರು ಇಲ್ಲಿಗೆ ಯಾವುದೋ ಕೆಲಸದ ಮೇಲೆ ಬಂದಿದ್ದರು.

"ದೈವಿಚ್ಛೆ–ಮಾಡಿನೋಡಿ" ಎಂದು ಒಂದುತರಹ ಹೇಳಿದರು. ತಿಪ್ಪಯ್ಯ ನವರು ಕೂಡಾ ಅದೇ ಮಾತು ಹೇಳಿದರು. ವಿದುರಾಶ್ವತ್ಥಕ್ಕೆ ಹೋಗಿ ನಾಗ

ಪ್ರತಿಷ್ಟೆ ಮಾಡಬಹುದು. ಇಲ್ಲವಾದರೆ ರಜ ತೆಗೆದುಕೊಂಡು ಇಲ್ಲಿಗೆ ಬಂದುಬಿಡು. ನಾನೆಲ್ಲಾ ಏರ್ಪಾಟು ಮಾಡಿಸುತ್ತೇನೆ. ಸೌ|| ಸುಶೀಲಮ್ಮ ದಿನಂಪ್ರತಿ ಅಶ್ವತ್ಥ ಪ್ರದಕ್ಷಿಣೆ ಮಾಡಬೇಕೆಂದು ಸೌ|| ವತಿ ಹೇಳುತ್ತಾಳೆ....ನಿನ್ನ ತಂದೆ ಮೊನ್ನೆ ಬಂದಿದ್ದು ಎರಡು ದಿನ ಇದ್ದರು. ನಂಜಮ್ಮನಿಗೆ ಹೊಸದುರ್ಗಕ್ಕೆ ಬಂದು ನಿಮ್ಮ ಸಂಸಾರ ನೋಡುವ ಬಯಕೆಯಂತೆ. ಇಬ್ಬರೂ ಬಂದರೂ ಬರಬಹುದು. ಮನಸ್ಸಿಗೆ ಬೇಜಾರುಮಾಡಿಕೋಬೇಡ. ಹಣಕ್ಕೆ ತೊಂದರೆ ಎಲ್ಲರಿಗೂ ಇದ್ದಿದ್ದೆ. ಆದ್ದರಿಂದ ಅದು ನಿನ್ನೊಬ್ಬನನ್ನು ಮಾತ್ರ ಕಾಡುವ ತಾಪತ್ರಯವೆಂದು ಭಾವಿಸಬೇಡ. ತೀರಾ ಪರಿಸ್ಥಿತಿ ಹದಗೆಟ್ಟರೆ ನಿಮ್ಮ ತಂದೆಗೆ ಬರಿ, ಹಾಗೆ ಮಾಡಬೇಕೆಂದು ನನಗೆ ಹೇಳಿದರು.

ಮತ್ತೇನು ಇದೆ ಬರಿಯಲಿಕ್ಕೆ? ಇಲ್ಲಿ ಎಲ್ಲಾ ಆರಾಂ

ಇತಿ ನಿನ್ನ ಚಿಕ್ಕಪ್ಪ
ರಂಗಣ್ಣ.

* * * *

ಕ್ಷೇಮ ಶ್ರೀ ಚಳ್ಳಕೆರೆ
ತಾ||... ........ ...

ತೀ|| ಅಣ್ಣನವರ ಸ|| ಕ್ಕೆ

ಬಾಲಕ ಸುಬ್ಬರಾಯನ ನಮಸ್ಕಾರಗಳು. ಏಕೆ ನಿಮ್ಮಿಂದ ಕಾಗದವೇ ಇಲ್ಲವಾಗಿದೆ? ನಾನು ಆಗಲೆ ಮೂರು ಕಾಗದ ಬರೆದಿದ್ದಾಯಿತು, ಒಂದಕ್ಕೂ ಉತ್ತರವಿಲ್ಲದ್ದು ನೋಡಿ ನನಗೆ ಚಿಂತೆಗೆ ಕಾರಣವಾಗಿದೆ. ಬೆನ್ನಲ್ಲಿ ಬಿದ್ದ ಅಣ್ಣಂದಿರೇ ಹೀಗೆ ತಾತ್ಸಾರ ಮಾಡಿದರೆ ನನಗಿನ್ನಾರು ದಿಕ್ಕು? ನನ್ನ ಈ ಸರ್ಕಾರಿ ನೌಕರಿಯನ್ನೇ ನಂಬಿದ್ದರೆ ದೇವರೇ ಗತಿ. ನನ್ನದು ಬೆಳೆಯುತ್ತಿರುವ ಸಂಸಾರ–ಸೌ|| ವತಿಗೆ ಮೂರು ತಿಂಗಳು ಅಂತ ತೋರುತ್ತೆ. ಬರುವ ಸಂಬಳ ದಲ್ಲಿ ಸಂಸಾರ ತೂಗಿಸುವುದು ಬಹಳ ಕಷ್ಟ. ಈ ಕಾಗದ ಕಂಡಕೂಡಲೆ ಒಂದು ನೂರು ರೂಪಾಯಿ ಕಳಿಸುವುದು.

ಹೋದಸಾರಿ ಬೆಳೆ ಬಂದ ಲೆಕ್ಕಾಚಾರ ಇನ್ನೂ ಮುಗಿಸಿಲ್ಲ. ದೊಡ್ಡವ ರಾದ ನೀವೇ ಹೀಗೆ ಮಾಡಿದರೆ ಹೇಗೆ? ಅಪ್ಪನ ಆಸ್ತಿ ಭೋಗಿಸಲು ನಿಮ ಗೆಷ್ಟು ಅಧಿಕಾರವೋ ನನಗೂ ಅಷ್ಟೇ ಹಕ್ಕಿರುವುದೆಂದು ಭಾವಿಸಲೆ?

ಶ್ರೀ ತಿಪ್ಪಯ್ಯನವರಿಂದ ನೀವು ಕನಕೇಶ್ವರನೊಬ್ಬನ ಪೂಜೆಗೆ ಮರು ಳಾಗಿ ಮನೆಯಲ್ಲಿನ ಬಂಗಾರದ ಒಡವೆಗಳನ್ನು ಪೋಲುಮಾಡಿದ್ದು ತಿಳಿದು ಬಂದಿದೆ. ನನಗೊಂದು ಮಾತು ಬರೆಯಬಾರದಾಗಿತ್ತೆ–ಯಾರ ಒಡವೆ ಎಂದು ಈ ಎಲ್ಲ ಕಾರುಬಾರಕ್ಕೆ ಕೈಹಾಕಿದಿರಿ? ಇದೆಲ್ಲಾ ವೈವಾಟ ಚೆನ್ನಾಗಿ ಕಾಣೋ ದಿಲ್ಲ. ನಾನು ರಜಕ್ಕೆ ಹಾಕಿಕೊಂಡಿದ್ದೇನೆ. ಮಂಜೂರಾದ ತಕ್ಷಣ ಬರು ತ್ತೇನೆ. ಪಾಲಿನ ವ್ಯವಸ್ಥೆಗೆ ಏರ್ಪಾಟು ಮಾಡಿರಬೇಕೆಂದು ವಿನಂತಿ.

ಹೀಗೆ ಬರೆದೆನೆಂದು ಅನ್ಯಥಾ ಭಾವಿಸಬಾರದು. ಯತ್ನವಿಲ್ಲದೆ ಹೀಗೆ ಬರೆಯುವಂತೆ ಮಾಡಿದ್ದು ನಿಮ್ಮ ವರ್ತನೆಯೇ ಕಾರಣವೆಂದು ಹೇಳಬಯಸು ತ್ತೇನೆ. ತಂದೆಯವರ ಪಟ್ಟಿಯಂತೆ ಎಲ್ಲಾ ಆಸ್ತಿಯೂ ವಿಭಾಗವಾಗಬೇಕು. ಮನೆಯನ್ನೂ ಅರ್ಧಕ್ಕೆ ಮಾಡಿ ನನ್ನ ಪಾಲಿನದನ್ನು ಬಾಡಿಗೆಗೆ ಕೊಟ್ಟು ಬಿಡುತ್ತೇನೆ. ಎಷ್ಟು ದಿನ ಅಂತ ಈ ಕಾರ್ಪಣ್ಯದ ಜೀವನ ಅನುಭವಿಸಲಿ? ದೈವವಿದ್ದು ದರಿದ್ರನಂತಿರಬೇಕಾದ ಈ ನನ್ನ ಪ್ರಕೃತ ಪರಿಸ್ಥಿತಿ ಸುಧಾರಿಸಬೇ ಕಾದರೆ ಆಸ್ತಿ ವಿಭಾಗವೇ ಸೂಕ್ತದಾರಿ ಎಂದು ನನ್ನ ಅಭಿಮತ. ಈ ನಿರ್ಧಾರಕ್ಕೆ ಬರಬೇಕಾದರೆ ನನಗೆ ವ್ಯಥೆಯಾಗದೆ ಇಲ್ಲ. ಸುಗ್ಗಿಕಾಲದಲ್ಲಿ ಅಷ್ಟು ಇಷ್ಟು ಕಳಿಸುತ್ತಿದ್ದರೆ ನಾನು ಇದಕ್ಕೆ ಹೋಗುತ್ತಲೇ ಇರಲಿಲ್ಲ. ವೃಥಾ ತಾಪತ್ರಯ ನಾನೇಕೆ ಪಡಬೇಕು?

ಈ ಕಾಗದಕ್ಕೂ ನೀವು ಉತ್ತರ ಬರೆಯುವುದಿಲ್ಲವೆಂದು ನನಗೆ ಗೊತ್ತು. ನೀವೇಕೆ ಹೀಗಾದಿರೋ ತಿಳಿಯದಾಗಿದೆ. ಮೊದಲಿನ ವಾತ್ಸಲ್ಯ, ವಿಶ್ವಾಸ ಎಲ್ಲಿಹೋಯಿತು? ದೈವಸಂಕಲ್ಪವಿದ್ದ ಹಾಗಾಗಲಿ. ನಿಮ್ಮ ಉತ್ತರ ನಿರೀಕ್ಷಿಸು ತ್ತಿರುವ

ನಿಮ್ಮ ತಮ್ಮ

ಸುಬ್ಬರಾಯ.

* * * *

ಕ್ಷೇಮ : ಅಮ್ಮೇನಹಳ್ಳಿ,

ತಾ||..................

ಚಿ|| ಸುಬ್ಬರಾಯನಿಗೆ–ಆಶೀರ್ವಾದಗಳು.

ಇದರೊಂದಿಗೆ ಒಂದು ನೂರು ರೂಪಾಯಿ ಕಳಿಸಿದ್ದೇನೆ. ಶಾನುಭೋಕಿ ಲೆಕ್ಕ ಮತ್ತೆ ಹೊಲ ಮನೆಯ ಬಿಡುವಿಲ್ಲದ ಕೆಲಸಗಳಿಂದಾಗಿ ಬರೆಯಲಾಗಲಿಲ್ಲ.

ಈ ಕಾರಣಕ್ಕಾಗಿ ನನಗೆ ನಿನ್ನ ಮೇಲೆ ವಿಶ್ವಾಸವೇ ಇಲ್ಲವೆಂದು ನೀನು ಭಾವಿಸ ಬಾರದು.

ಇನ್ನು ಯೋಗೀಶ್ವರರ ಮೋಸಕ್ಕೆ ಸಿಕ್ಕು ಕಳೆದುಕೊಂಡ ಬಂಗಾರ ನನ್ನ ಸ್ವಯಾರ್ಜಿತ. ಅದನ್ನು ಹೇಗೆ ಕಳೆಯಲಿಕ್ಕೂ ನಾನು ಬಾಧ್ಯ. ತಂದೆಯವರ ಕಾಲದ ಬಂಗಾರದಲ್ಲಿ ಮದುವೆ ಕಾಲಕ್ಕೆ ನಿನ್ನ ಹೆಂಡತಿಗೆ ಬಳೆ ಸರ ಮಾಡಿಸಿ ಕೊಟ್ಟಿದ್ದಾರೆ. ಇನ್ನಷ್ಟು, ಮನೆ ಹೆಣ್ಣು ಮಗಳೆಂದು ತ್ರಿಪುರಸುಂದರಿಗೆ ಕಳಿಸಿದ್ದು ನಿನಗೆ ಗೊತ್ತಿದೆ. ಇದು ತಿಳಿದೂ ಈ ತಿಪ್ಪಯ್ಯನ ಮಾತಿಗೆ ನೀನು ನನ್ನ ಮೇಲೆ ಅಪಾದನೆಯನ್ನು ಹೊರಿಸುವುದು ತಪ್ಪು,

ಹೊಲದಿಂದ ಬಂದ ವರಮಾನ ಅಷ್ಟರಲ್ಲೇ ಇದೆ. ತೋಟದಲ್ಲೂ ಉತ್ಪನ್ನವಿಲ್ಲದ್ದು ನಿನಗೆ ತಿಳಿದಿದೆ. ಎಲ್ಲಾ ತಿಳಿದೂ ಈ ರೀತಿಯ ಪತ್ರ ಬರೆದದ್ದು ನಿನ್ನದು ತಪ್ಪು. ನನ್ನಲ್ಲಿಗಿಂತ ತಿಪ್ಪಯ್ಯನಲ್ಲೇ ನಿನಗೆ ನಂಬಿಕೆ ಹೆಚ್ಚಾಗಿದೆ. ತಮ್ಮನೆಂಬ ಅಂತಃಕರಣದಿಂದ ನಡೆಸಿಕೊಂಡದ್ದು ನನ್ನ ತಪ್ಪು. ನಿನಗೆ ನಾನು ಮಾಡಿರುವ ಅನ್ಯಾಯವೇನು? ಮೋಸದಿಂದ ನಿನಗೆ ವಂಚನೆ ಮಾಡುವವನಾಗಿದ್ದರೆ ಎಂದೋ ನಿನ್ನನ್ನು ಮುಳುಗಿಸಬಹುದಾಗಿತ್ತು. ಅಂತಹ ಹೃದಯಹೀನನಲ್ಲ ನಾನು. ನಿನಗೆ ಮೋಸಮಾಡಿ ನಾನ್ಯಾವ ನರಕಕ್ಕೆ ಹೋಗಲಿ?

ನಿನಗೆ ಅನುಮಾನವಿದ್ದರೆ ಯಾವಾಗಲಾದರೂ ಬಾ. ಪಾಲಿಗೆ ಏರ್ಪಾಟು ಮಾಡೋಣ. ತಿಪ್ಪಯ್ಯನ ಮಾತು ಕಟ್ಟಿಕೊಂಡು ಮಾತ್ರ ನೀನು ಕುಣಿಯಬೇಡ. ನಿನ್ನ ಸ್ವಂತ ಬುದ್ಧಿ ಉಪಯೋಗಿಸು, ನಾನೂ ಮನುಷ್ಯ, ಮೋಸಮಾಡುವ ರಾಕ್ಷಸನಲ್ಲವೆಂದು ನಂಬಿಕೆಯಿಟ್ಟು ಬಂದರೆ ಸೌಹಾರ್ದತೆಯಿಂದ ಕೆಲಸ ನಡೆಯುತ್ತದೆ. ವೃಥಾ-ವಾದ, ಹಟ, ಮಾತ್ಸರ್ಯಗಳಿಗೆ ಎಡೆ ಕೊಟ್ಟರೆ ನಾನೂ ಸೇಡು ತೀರಿಸಿಕೊಳ್ಳಬಲ್ಲೆ.

ಈ ಕಾಗದವನ್ನೂ ಬರೆಯುತ್ತಿರಲಿಲ್ಲ. ನಾನೇನು ಬರೆದರೂ ನಿನಗೆ ಪಥ್ಯವಾಗುವುದಿಲ್ಲವೆಂಬುದು ಗೊತ್ತು. ಆದರೂ ಇರುವ ವಿಷಯ ತಿಳಿಸಿದರೆ ಒಳ್ಳೆಯದೆಂದು ಬರೆದಿದ್ದೇನೆ. ಇಷ್ಟರಮೇಲೆ ನಿನ್ನ ಇಷ್ಟ. ಹೇಗೆ ವರ್ತಿಸಲೂ ಸ್ವಾತಂತ್ರ್ಯ ನಿನಗುಂಟು. ಸರಸ್ವತಿಗೆ ಆಶೀರ್ವಾದಗಳು, ಮತ್ತೇನು ವಿಶೇಷವಿಲ್ಲ.

ಇತಿ ಆಶೀರ್ವಾದಗಳು,

ಲಕ್ಷ್ಮಣರಾವ್

ಕ್ಷೇಮ ಹೊಸದುರ್ಗ

ತಾ||................

ಸೌ|| ಸುಶೀಲೆಗೆ ಆಶೀರ್ವಾದಗಳು.

ನನಗೆ ಇಲ್ಲಿಂದ ಮೊಳಕಾಲ್ಮೂರಿಗೆ ವರ್ಗವಾಗಿದೆ. ವೆಂಕಟೇಶ ಮತ್ತು ಆತನ ಹೆಂಡತಿ ಸಾಮಾನು ಕಟ್ಟಲು ಸಹಾಯ ಮಾಡಿದರು. ನಿನಗೇಕೆ ತೊಂದರೆ ಎಂದು ಎಲ್ಲಾ ಸಾಮಾನೂ ಪ್ಯಾಕು ಮಾಡಿಬಿಟ್ಟು ಜೊತೆಗೇ ಮೊಳಕಾಲ್ಮೂರಿಗೆ ಕೊಂಡೊಯ್ಯುತ್ತೇನೆ. ಅಲ್ಲಿ ಮನೆಮಾಡಿ ಕಾಗದಾ ಬರೆಯುತ್ತೇನೆ. ನೀನು ಶಿವಮೊಗ್ಗೆಯಿಂದ ಮೊಳಕಾಲ್ಮೂರಿಗೇ ನೇರವಾಗಿ ಬಂದುಬಿಡು. ಇಂಥಾ ದಿವಸ ಹೊರಡುತ್ತೇನೆಂದು ಬರೆದರೆ ಚಿತ್ರದುರ್ಗದ ತನಕಾ ನಾನು ಬಂದು ಅಲ್ಲಿಗೆ ಕರೆದುಕೊಂಡು ಬರುತ್ತೇನೆ.

ಅತ್ತೆಯವರಿಗೆ ನಮಸ್ಕಾರಗಳು.

ಇತಿ ನಿನ್ನ ಪ್ರೀತಿಯ,

ಜನಾರ್ಧನಯ್ಯ.

* * * *

ಕ್ಷೇಮ ಶಿವಮೊಗ್ಗ

ತಾ||................

ಸಾ|ಕ್ಕೈ|| ನಮಸ್ಕಾರಗಳು.

ನಿಮ್ಮ ಕಾಗದ ಬಂತು. ನಾನೊಬ್ಬಳೆ ಹೇಗೆ ಇಲ್ಲಿಂದ ಅರಿಯದ ಆ ಮೊಳಕಾಲ್ಮೂರಿಗೆ ಬರುವುದು? ಮೊಳಕಾಲ್ಮೂರಿನಲ್ಲಿ ಕೆಲಸಕ್ಕೆ ಹಾಜರಾಗುವ ಮುಂಚೆ ರಜಾ ಇರುತ್ತದಲ್ಲವೆ? ನೀವು ಸಾಮಾನು ಸಾಗಿಸಿ ಅಲ್ಲಿ ಮನೆಮಾಡಿ ಇಲ್ಲಿಗೆ ಬಂದು ಬಂದು ಕರೆದುಕೊಂಡು ಹೋದರೇ ನಾನು ಬರುವಾಕೆ. ಒಬ್ಬಳೇ ಪ್ರಯಾಣ ಮಾಡುವುದು ನನ್ನಿಂದ ಆಗದ ಕೆಲಸ. ಕಾಮಾಕ್ಷಮ್ಮ ಮತ್ತು ವೆಂಕಟೇಶರಾಯರು ತುಂಬಾ ಒಳ್ಳೆ ಜನ. ಹೊಸದುರ್ಗದಲ್ಲಿ ಅವರಿದ್ದದ್ದು ಎಷ್ಟೊ ಅನುಕೂಲವಾಗಿತ್ತು. ಅವರು ಸಾಮಾನು ಕಟ್ಟುವುದರಲ್ಲಿ ಸಹಾಯ ಮಾಡಿದ್ದು ಸಹಜವೆ, ಅವರ ಸ್ವಭಾವವೇ ಹಾಗೆ.

ಇನ್ನು ಮೊಳಕಾಲ್ಮೂರು ಹೊಸ ಊರು ಹೇಗಿದೆಯೋ! ಅಲ್ಲಿ ಒಳ್ಳೆ ಸೀರೆಗಳು ತಯಾರಾಗುವುದು ಮಾತ್ರ ನನಗೆ ಗೊತ್ತು. ಹೆದರಬೇಡಿ, ಹೋಗುತ್ತಿದ್ದ ಹಾಗೇ ಸೀರೆ ಕೊಡಿಸಿರೆಂದು ಗಂಟು ಬೀಳುವುದಿಲ್ಲ. ಖಂಡಿತ ನೀವು ಬಂದು ನನ್ನ ಕರೆದೊಯ್ಯಬೇಕು.

ಇತಿ ನಿಮ್ಮ ಸತಿ,
ಸುಶೀಲ.

## ೧೬

ಮನೆಯೆಲ್ಲಾ ಬಿಕೋ ಎಂದೆನಿಸುತ್ತಿತ್ತು. ರಾಜೀವಿ, ಸರಸ್ವತಿ ಊರಿಗೆ ಹೋಗಿದ್ದರು. ಪೋಗಿ ವಾರವಾಗಿದ್ದರೂ ಒಂದು ದಿನವೂ ಅವರನ್ನು ಬಿಟ್ಟಿರದ ಸುಬ್ಬರಾಯನಿಗೆ ಮನೆಗೆ ಬರುವುದಕ್ಕೇ ಬೇಸರ. ಸರಸ್ವತಿಯಂತೂ ಕಚೇರಿಗೆ ಹೋಗುವುದಕ್ಕೂ ಬಿಡದೆ ಸದಾ ತಂದೆಯ ಬಳಿಯೇ ಇರುತ್ತಿದ್ದಳು. ಅವಳ ಪುಟ್ಟ ಪುಟ್ಟ ತಪ್ಪು ಹೆಜ್ಜೆಯ ನಡಿಗೆ, ಮುದ್ದು ಮುದ್ದು ಮಾತು ಸುಬ್ಬ ರಾಯನಿಗೆ ಇಲ್ಲವಾಗಿತ್ತು. ಮನೆಗೆ ಬರುವುದಕ್ಕೇ ಅವನಿಗೆ ಮನಸ್ಸಿಲ್ಲ.

ರಾಜೀವಿಗೆ ಆರು ತಿಂಗಳಾಗಿತ್ತು. ಬಸುರಿನ ಬಯಕೆಯ ರಾಜೀವಿ ತುಂಬು ಮೈಯಿಂದ ಕಂಗೊಳಿಸುತ್ತಿದ್ದಳು. ಸುಬ್ಬರಾಯನಿಗೆ ಅವಳನ್ನೆಷ್ಟು ನೋಡಿದರೂ ತೃಪ್ತಿಯಿಲ್ಲ. ತಾಂಬೂಲ ಚರ್ವಣವಾದ ನಂತರ ಕೆಂಪು ತುಟಿ ಹಿಗ್ಗಿಸಿ ನಕ್ಕಾಗ ಅವಳು ಅರಳಿದ ಕೆಂಪು ಗುಲಾಬಿಯಂತೆ ಕಾಣುವಳು.

ಹೆರಿಗೆಗೆಂದು ಹಿರೇಹಳ್ಳಿಗೆ ರಾಜೀವಿಯನ್ನು ನಾಗರಾಜಜೋಯಿಸರು ಬಂದು ಕರೆದುಕೊಂಡು ಹೋಗಿದ್ದರು. ಚಿತ್ರದುರ್ಗಕ್ಕೆ ರಾಜೀವಿ, ಸರಸ್ವತಿ ಯನ್ನು ಕರೆತಂದ ಮೂರು ವರ್ಷದ ದಿನ ಜೊತೆಗೇ ಇದ್ದವಳು ಎಲ್ಲೋ ಕೆಲವು ದಿನ ಮಾತ್ರ ಬಿಟ್ಟಿದ್ದಳು ಅಷ್ಟೆ. ಹೀಗೆ ನಿರಂತರ ಒಟ್ಟಿಗೆ ನಗು ನಗುತ್ತಾ ಇದ್ದು ಈಗ ಜೊತೆಯಿಲ್ಲದ ಒಂಟಿ ಪಾರಿವಾಳದಂತೆ ಪರದಾಡಿದ ಸುಬ್ಬರಾಯ.

ಮರುಕ್ಷಣವೇ ಇನ್ನೊಂದು ಪುಟ್ಟ ಪಾಪ ತನ್ನ ಮನೆಯಲ್ಲಿ ಅವತರಿಸು ವುದು, ಅವನ ಸಂಸಾರದ ಬೆಳವಣಿಗೆಯನ್ನು ನೆನಪಿಗೆ ತರುವುದು. ಸಂಸಾರ ಬೆಳೆದಂತೆ ಖರ್ಚೂ ಹೆಚ್ಚು. ಗುಮಾಸ್ತೆ ಗಿರಿಯ ಈ ದುರ್ಭರ ಜೀವನದಲ್ಲಿ ಮಕ್ಕಳಾಗುವುದೂ ಸಂತೋಷ ಸುದ್ದಿಯಾಗಿರಲಿಲ್ಲ. ಸುಬ್ಬರಾಯನಿಗೆ ಈ ಯೋಚನೆ ಬಲವಾಯಿತು. ಅಣ್ಣನಿಂದ ಬಂದ ನಿಷ್ಠುರದ ಕಾಗದ, ತನಗೆ ಅವನಿಂದಾದ ಅನ್ಯಾಯ, ಆಗೊಮ್ಮೆ ಈಗೊಮ್ಮೆ ನೂರಿನ್ನೂರು ಕಳಿಸಿದರೂ ಯಾವುದಾದರೂ ಸಾಲ ಅದಕ್ಕಾಗಿ ಕಾದಿದ್ದು ಮತ್ತೆ ಬರಿಗೈ; ಅದೇ ತಾಪ ತ್ರಯ ಮರುಕಳಿಸಿದಂತೆ ತಲೆದೋರುವುದು.

ರಾಜೀವಿ ಇದ್ದಾಗ ಈ ಎಲ್ಲ ಯೋಚನೆಗೆ ಅವಕಾಶವಾಗುತ್ತಿರಲಿಲ್ಲ. ಸರಸ್ವತಿಯ ಆಟವನ್ನು ಗಂಡ ಹೆಂಡಿರು ನೋಡಿ ಹಿಗ್ಗುವುದರಲ್ಲಿ ಎಲ್ಲ ಸಮಸ್ಯೆಗಳನ್ನೂ ಮರೆಯುತ್ತಿದ್ದರು. ಈ ಭಾನುವಾರದ ರಜದ ದಿನ ಮಧ್ಯಾಹ್ನ ಏಕಾಕಿಯಾಗಿ ಹಾಸಿಗೆಯಲ್ಲಿ ಮಲಗಿದಾಗ ಈ ಯೋಚನೆಗಳು ಒಂದಾದ ಮೇಲೊಂದು ಬಂದು ಅಪ್ಪಳಿಸುವುವು. ತನ್ನ ಗತಿ ಹೀಗಾಯಿತೇ ಎಂದು ಚಿಂತಿಸಿದ್ದೂ ಉಂಟು.

ರಾಜೀವಿ ಗಂಡುಕೂಸು ಹೆತ್ತಳು ಎಂಬ ಸುದ್ದಿ ತಿಳಿದ ಕೂಡಲೆ ಸುಬ್ಬರಾಯ ಪೇಟೆಗೆ ಹೋಗಿ ಕೆಂಪು ಕಲ್ಲುಸಕ್ಕರೆ ಕೊಂಡು ನೇರವಾಗಿ ಸೂರಪ್ಪನ ಮನೆಗೆ ಹೋದ. ಸೂರಪ್ಪನವರು ಮನೆಯಲ್ಲಿರಲಿಲ್ಲ. ಅವರ ಕುಟುಂಬ, ಯಜಮಾನರು ಕಚೇರಿಗೆ ಹೋಗಿದ್ದಾರೆಂದು ಅಪ್ಪಣೆ ಕೊಡಿಸಿದರು. ಸೂರಪ್ಪನ ಹೆಂಡತಿ ಸುಬ್ಬರಾಯನ ಮುಖದಲ್ಲಿನ ಗೆಲುವಿನ ಕಳೆ ಸೂಕ್ಷ್ಮವಾಗಿ ವೀಕ್ಷಿಸಿ

"ರಾಜಮ್ಮ ಹೆತ್ತರೇನು ?" ಎಂದು ಕೇಳಿದರು. ಕೈಯ್ಯಲ್ಲಿನ ಕಲ್ಲುಸಕ್ಕರೆ ಪೊಟ್ಟಣ ಅವರ ಮುಂದಿಟ್ಟು, "ಗಂಡು ಕೂಸು" ಎಂದು ಕಿವಿಯಿಂದ ಕಿವಿತನಕ ನಕ್ಕ.

"ಬರೀ ಕಲ್ಲುಸಕ್ಕರೆಯಲ್ಲೇ ಮುಗಿಸುತ್ತೀರಾ? ಅದಾಗದು, ರಾಜಮ್ಮನವರಿಗೆ ಹೇಳಿದ್ದೆ ನಾನು, ಸೊಗಸಾದ ಚಿರೋಟಿ ಊಟ ಹಾಕಬೇಕು ಗಂಡು ಮಗುವಾದರೇಂತ...."

"ಹಾಗೇ ಆಗಲೇಳಿ ಅದಕ್ಕೇನಂತೆ" ಎನ್ನುವುದಕ್ಕೆ ಸರಿಯಾಗಿ ಸೂರಪ್ಪನವರೂ ಬಂದರು. ಚಟಪಟನೆ ಚಪ್ಪಲಿಯ ಸದ್ದು ಮಾಡಿಕೊಂಡು, ವಲ್ಲಿ ಹೊತ್ತು ಬಿಸಿಲಲ್ಲಿ ಬಂದ ಸೂರಪ್ಪನವರು ತನ್ನ ಮನೆಯ ಮುಂದೆ ತನ್ನ ಹೆಂಡತಿಯ ಹತ್ತಿರ ಹರಟುತ್ತಿದ್ದ ಸುಬ್ಬರಾಯನನ್ನು ಕಂಡು ಈ ಹೊತ್ತಿನಲ್ಲೇಕೆ ಈ ಗೃಹಸ್ಥ ಬಂದಾ ಎಂದು ಒಂದು ಘಳಿಗೆ ಯೋಚಿಸಿದರು. ಸೂರಪ್ಪನವರ ಹೆಂಡತಿ ಕಲ್ಲುಸಕ್ಕರೆಯ ಪೊಟ್ಟಣ ಯಜಮಾನರ ಕೈಗೆ ಹಾಕಿ "ರಾಜಮ್ಮನಿಗೆ ಗಂಡುಮಗು" ಎಂದರು.

"ಎಲ ಎಲ ಎಲ....ಪರವಾಗಿಲ್ಲಯ್ಯಾ ಸುಬ್ಬರಾವ್, ಚಿರೋಟಿ ಊಟ ಎಂದು ಹಾಕಿಸುತ್ತಿ ?"

"ನಾನು ಅದನ್ನೆ ಕೇಳಿದೆ–ಎಂದೂಂತ"

"ಬಾ ಒಳಕ್ಕೆ ಬಾ–ಲೇ ಒಳಕ್ಕೆ ಕರೆದು ಕೂಡಲಿಕ್ಕೆ ಹೇಳಬಾರದಾಗಿತ್ತೆ ಏನು ಜನವಪ್ಪಾ...."

"ಇದೇ ತಾನೆ ಬಂದೆ ಸೂರಪ್ಪನೋರೆ, ನನ್ನ ಹೆಂಡತಿ ಹೆತ್ತ ಸಂತೋಷದ ಸುದ್ದಿ ಹೇಳುವ ಭರದಲ್ಲಿ ಅವರು ಕೂಡಿ ಎಂದದ್ದೂ ಕೇಳಿಸಲಿಲ್ಲ"

"ಅಂದಿದ್ದರೆ ತಾನೆ ತಿಳಿಸಲಿಕ್ಕೆ?"

"ಚೆನ್ನಾಗಿದೆ ಸೂರಪ್ಪನೋರೆ....ನೀವು ಹೇಳೋದು. ಅವರು ಅಂದ ರೂಂತ ಅಂತಿದೀನಿ, ಆದರೂ ನೀವು ಟೀಕೆ ಬಿಡಲೊಲ್ಲಿರೆ!"

"ಅವರು ಯಾವಾಗಲೂ ಹೀಗೇ" ಎಂದು ಶ್ರೀಮತಿ ಸೂರಪ್ಪ ಒಳಕ್ಕೆ ಹೋದರು.

"ತುಂಬಾ ಸಂತೋಷ ಸುಬ್ಬರಾವ್....ಯಾವತ್ತು ಜನನವಾದದ್ದು...."

"ಮೊನ್ನೆ ದಿನ...."

"ಒಳ್ಳೆದು ಸುಬ್ಬರಾವ್, ತುಂಬಾ ಸಂತೋಷ. ಇವತ್ತು ನೀವು ಇಲ್ಲೇ ಊಟ ಮಾಡಿಕೊಂಡು ಹೋಗಿಬಿಡಿ...."

"ಅದ್ಯಾಕೆ ತೊಂದರೆ, ಬೇಡ ಬೇಡ"

"ತೊಂದರೆ ಏನು ಬಂತು....ಲೇ, ಸುಬ್ಬರಾವ್ ಇಲ್ಲೇ ಊಟಕ್ಕೇಳು. ತ್ತಾರೆ....ಬಡಿಸು...."

ಎಂದು ಗಟ್ಟಿಯಾಗಿ ಕೂಗಿದರು ಸೂರಪ್ಪ. ಚಿತ್ರದುರ್ಗದಲ್ಲಿ ರಾಮ ಸ್ವಾಮಿಗಳಿದ್ದಂತೆ ಸೂರಪ್ಪನವರು ಚಳ್ಳಕೆರೆಯಲ್ಲಿದ್ದರು. ಸೂರಪ್ಪನವರ ಕುಟುಂಬ ಶಾರದಮ್ಮನವರು ರಾಜೀವಿಗೆ ಅಕ್ಕನಂತೇ ಇದ್ದರು. ಸೂರಪ್ಪನವ ರಿಗೆ ಏಳು ಹೆಣ್ಣು ಮಕ್ಕಳು. ಮೇಲೆ ಹೆಂಡತಿ ಗರ್ಭಿಣಿ. ಸೋದರಮಾವನನ್ನು ಕೊಂದರೂ ಚಿಂತೆಯಿಲ್ಲ, ಅಷ್ಟವು ಗರ್ಭದಲ್ಲಿ ಗಂಡು ಶಿಶು ಆಗಬೇಕೆಂದು ಹರಕೆ ಹೊತ್ತಿದ್ದರು.

ಬಡ ಗುಮಾಸ್ತರಾದ ಅವರಿಗೆ ದೇವರು ಇಂಥ ಕಷ್ಟ ಕೊಟ್ಟು ಪರೀಕ್ಷಿಸ ಬಾರದೆಂದು ಸುಬ್ಬರಾಯನ ವಾದ. ಸೂರಪ್ಪನವರದು ಹುಚ್ಚು ಧೈರ್ಯ, ದೇವರು ಹೇಗೋ ನಿಭಾಯಿಸುತ್ತಾನೆ ಎಂದು ಹಾಯಾಗಿ ಕಚೇರಿಯಲ್ಲಿ ಕಾಲ ಹಾಕುವವರು.

ಶಾರದಮ್ಮನವರು ಅದು ಹೇಗೋ ಸಂಸಾರ ತೂಗಿಸಿಕೊಂಡು ಹೋಗುತ್ತಿದ್ದರು. ಚಟಾಕಿನಿಂದ ಸೇರಿನ ತನಕ ಮಕ್ಕಳು ಒಂದೇಸಮ ಕಾಡುವರು. ಅವಕ್ಕೆ ಹೆರಳು ಹಾಕುವುದರಲ್ಲೇ ಹೆಣಬಿದ್ದು ಹೋಗುತ್ತಿತ್ತು. ಎಲ್ಲ ಹುಡುಗಿಯರಿಗೂ ಒಗೆದ ಪರಕಾರ ಚೋಳಿಹಾಕಿ ಶುಭ್ರವಾಗಿಟ್ಟಿರುತ್ತಿದ್ದರು. ಮನೆಯನ್ನು ಕೂಡಾ ಓರಣವಾಗಿ ಶುಭ್ರವಾಗಿ ಇಟ್ಟಿರುತ್ತಿದ್ದರು. ಶಾರದಮ್ಮನವರಿಂದ ರಾಜಮ್ಮ ಅನೇಕ ತರಹೆ ಅಡಿಗೆ, ಸೊಗಸಾಗಿ ರಂಗವಲ್ಲಿ ಚಿತ್ರಿಸುವುದು, ಮನೆಯನ್ನು ಒಪ್ಪವಾಗಿ ಓರಣವಾಗಿಡುವುದು, ಗಂಡ ಮನೆಗೆ ಬಂದಾಗ, ಸಿಟ್ಟಾದಾಗ, ಬೈದಾಗ ಹೇಗೆ ಹದಕ್ಕೆ ತರಬೇಕೆಂಬುದನ್ನು ಕಲಿತಿದ್ದರು.

ಸೂರಪ್ಪನವರಿಂದಲೂ ಸುಬ್ಬರಾಯನಿಗೆ ಅನೇಕ ವಿಚಾರಗಳು ತಿಳಿದು ಬಂದಿತ್ತು. ಮುಖ್ಯವಾಗಿ ಕಚೇರಿಯಲ್ಲಿ ಎಲ್ಲರಿಗೂ ಒಳ್ಳೆಯವನಾಗಿದ್ದು ತನ್ನ ಮಾತು ನಡೆಯುವಂತೆ ಮಾಡುವುದು, ಸಾಹೇಬರು ಸಿಟ್ಟಾದಾಗ ಹದಕ್ಕೆ ತರುವ ದಾರಿ, ಬೇಕಾದಾಗ ರಜ ಪಡೆಯುವ ವಿವಿಧ ಮಾರ್ಗಗಳು, ತನಗಾಗದವರನ್ನು ಬೈಸಿಸಿ ಕಾರ್ಯಸಾಧನೆ ಮಾಡಿಕೊಳ್ಳುವ ಚಾಕಚಕ್ಯತೆ, ಇವೆಲ್ಲವನ್ನೂ ಸೂರಪ್ಪ ಸುಬ್ಬರಾಯನಿಗೆ ಕಲಿಸಿಕೊಟ್ಟಿದ್ದರು.

ತೊಂದರೆಪಟ್ಟುಕೊಂಡು ಸಂಸಾರ ನಿಭಾಯಿಸುವ ಸೂರಪ್ಪನವರ ಮನೆಯಲ್ಲಿ ಊಟಕ್ಕೆ ಏಳಲು ಸುಬ್ಬರಾಯನಿಗೆ ಮನಸ್ಸಿಲ್ಲ. ಅಕೃತ್ರಿಮ ನಿಷ್ಕಳಂಕ ಹೃದಯದಿಂದ ಸೂರಪ್ಪ ಕರೆಯುತ್ತಿರುವಾಗ ಯಾವ ಬಾಯಿಂದ ಇಲ್ಲವೆಂದು ಹೇಳುವುದು ?

"ಊಟ ಹಾಕಬೇಕಾದವನು ನಾನು, ನನ್ನನ್ನೇ ನೀವು ಊಟಕ್ಕೆ ಕರೆದರೆ ಹೇಗೆ ? "

"ನೀನು ಊಟ ಹಾಕುವುದಕ್ಕೂ ನಾನು ಇವತ್ತು ಕರೆಯುತ್ತಿರುವುದಕ್ಕೂ ಯಾತಕ್ಕೆ ಸಂಬಂಧ ಕಲ್ಪಿಸುತ್ತೀಯ ? ಊಟಕ್ಕೇಳೂಂದ್ರೆ ಏಳಬೇಕು...."

"ನೀವಿದ್ದೀರಲ್ಲಾ ಸೂರಪ್ಪನೋರೆ, ಬೇಡ ಅನ್ನಲಿಕ್ಕೇ ಬಾಯಿ ಬರದಂತೆ, ನಿಮ್ಮ ವಿಶ್ವಾಸದಲ್ಲಿ ಸೆರೆಹಾಕಿಬಿಡ್ತೀರಿ"

ಎಂದೆನ್ನುತ್ತಾ ಪರಟು ಬಿಚ್ಚಿದ ಸುಬ್ಬರಾಯ. ಸೂರಪ್ಪನವರಲ್ಲಿ ಒಬ್ಬರೇ ಊಟಕ್ಕೆ ಕೂಡುವ ಸಂಪ್ರದಾಯವೇ ಇರಲಿಲ್ಲ. ಶಾಲೆಯಿಂದ ಬಂದ ಹುಡು

ಗರು, ಶಾಲೆಗೆ ಹೋಗುವವರು ಕೂಡಿ ಅವರ ಪಂಙ್ತಿ ಜೊತೆಗೆ ಕೂಡಬೇಕು. ಏಳು ಮಕ್ಕಳನ್ನು ಕೂಡಿಸಿಕೊಂಡು ಇವರೂ ಕೂಡುವರು. ಅವತ್ತು ಸುಬ್ಬ ರಾಯನಿಗೂ ಒಂಭತ್ತನೆ ಎಲೆ ಹಾಕಿದ್ದರು. ಆವರವರ ವಯಸ್ಸಿಗನುಗುಣ ವಾಗಿ ಅಂಗೈ ಅಗಲದ ತಟ್ಟೆಯಿಂದ ಕ್ರಮವಾಗಿ ಹೆಚ್ಚು ಅಗಲವಾಗುತ್ತ ಹೋಗಿ ಹಿರಿಯ ಮಗಳ ತನಕ ಅಲ್ಯೂಮಿನಿಯಂ ತಟ್ಟೆಗಳನ್ನು ಹಾಕಿದ್ದರು. ಒಂದೇ ತರಹದ ಚೀಟಿ ಬಟ್ಟೆಯ ಪವಾಡ ಚೊಳಿಗಳನ್ನು ಹಾಕಿಕೊಂಡು ಕುಳಿ ತಿದ್ದ ಮಕ್ಕಳನ್ನು ನೋಡಿದ ಸುಬ್ಬರಾಯನಿಗೆ ಅವರ್ಣನೀಯ ಆನಂದ ವಾಯಿತು.

ಹೆಚ್ಚು ಕಡಿಮೆ ಒಂದೇ ಮುಖಚ್ಛಾಯೆ, ಉದ್ದನೆಯ ಜಡೆ ಬಿಟ್ಟು ಕೊಂಡು ಕುಳಿತ ಹೆಣ್ಣುಮಕ್ಕಳು ಸುಂದರವಾಗಿ ಕಂಡರು. ಶುಭ್ರತೆಗೆ ಎತ್ತಿದ ಕೈ ಸೂರಪ್ಪನವರ ಮನೆ. ಸಿಂಬಳ, ಕಣ್ಣುಪಿಚ್ಚು, ಹೊಲಸು ಬಟ್ಟೆ, ಅಸ್ತವ್ಯಸ್ಥ ಮನೆಯ ಸ್ಥಿತಿಯನ್ನು ಸೂರಪ್ಪನಿಗಿಂತ ಅನುಕೂಲವಾಗಿದ್ದ ಮನೆಗಳಲ್ಲಿ ಕಂಡಿದ್ದ. ಇದಕ್ಕೆಲ್ಲಾ ಕಾರಣ ಶಾರದಮ್ಮನವರ ಅಚ್ಚುಗಟ್ಟುತನ. ಸೂರಪ್ಪ ನವರು ಕೂಡ ಬೆಳ್ಳಗಿನ ಪೇಟ ಹರಿದಿದ್ದರೂ ಹೊಲೆದು ಒಗೆದ ಷರಟು ಕೋಟು ಪಂಚೆ-ಶುಭ್ರತೆ ಎಂದರೆ ಆ ತುಂಬಿದ ಮನೆಯಲ್ಲಿ ಕಾಣಬೇಕು.

ಶಾರದಮ್ಮ ಬಸಿರು ಹೆಂಗಸು. ಕಡೆಯ ಕೂಸಿಗೆ ಒಂದುವರೆ ವರ್ಷವಿದ್ದಾ ಗಲೇ ಮೇಲೆ ಗರ್ಭಿಣಿ, ಮನೆಗೆಲಸವನ್ನೆಲ್ಲಾ ಮಾಡಿಕೊಂಡು ನಿಭಾಯಿಸು ತ್ತಿದ್ದರು.

ಊಟ ಮಾಡುವಾಗ ಹುಡುಗರು ಒಂದು ಅಗುಳು ಕೆಳಗೆ ಚೆಲ್ಲಬಾರದು. ಹಿರಿಯಕ್ಕನಿಂದ ಕಿರಿಯ ತಂಗಿಯವರೆಗೆ ಈ ಚಾಳಿ ಹರಡಿತ್ತು. ತಿಳಿಸಾರು ಅನ್ನ-ಮಾಡಿದರೆ ಒಂದು ಪಲ್ಯ ಮಜ್ಜಿಗೆ. ಎರಡುಹೊತ್ತು ಗಡದ್ದು ಊಟವಲ್ಲದೆ ತಿಂಡಿ ತೀರ್ಥಕ್ಕೆ ಚೈತನ್ಯ ಸಾಲದು. ತೀರ ಚಿಕ್ಕವು ಹಸಿವು ಎಂದರೆ ಮತ್ತೊಮ್ಮೆ ಎಡಹೊತ್ತಿನಲ್ಲಿ ಕೈತುತ್ತು. ಶಾರದಮ್ಮ-ಸೂರಪ್ಪನವರ ಸಂಸಾರ ನೋಡಿದ ಸುಬ್ಬರಾಯ ಅನೇಕವೇಳೆ ರಾಜೀವಿಯ ಎದುರು "ಸಂಸಾರ ಅಂದರೆ ಸೂರಪ್ಪ ನದು. ಅನ್ಯೋನ್ಯ ಅಂದರೆ ಆ ದಂಪತಿಗಳದು; ಸ್ವರ್ಗಕ್ಕೆ ಕಿಚ್ಚುಬರುವ ಜೋಡಿ ಅವರದು" ಎಂದು ಅಂದದ್ದುಂಟು.

ಆ ದಿನವೂ ಅವೇ ಸಂತೋಷ ಉತ್ಸಾಹ ಆನಂದ ಆ ಮನೆಯಲ್ಲಿ ತಾಂಡವ ವಾಡುತ್ತಿತ್ತು. ಅತಿಥಿಗಳು ಬಂದಾಗ ತುಪ್ಪ ಬಡಿಸುವುದು ವಾಡಿಕೆ. ಅದ ರಿಂದಾಗಿ ಆ ಹುಡುಗರು ದಿನವೂ ಒಬ್ಬ ಅತಿಥಿ ಮನೆಗೆ ಬರಬಾರದೇ ಎಂದು ಕೊಳ್ಳುವರು. ಮೆಂತ್ಯದ ಹಿಟ್ಟು ಕಲಸಿದ್ದರು ಸುಬ್ಬರಾಯನಿಗಾಗಿ. ಎಲ್ಲ ಹುಡುಗರೂ "ಅಮ್ಮ ನಂಗೆ" "ಅಮ್ಮ ನಂಗೆ" ಎಂದು ಮೊದಲಬಾರಿಗೆ ಮೆಂತ್ಯದ ಹಿಟ್ಟು ತುಪ್ಪದ ಅನ್ನ ಕಲಸಿಕೊಂಡು ತಿಂದವು. ಊಟಮಾಡಿದವರಿಗೇ ಗೊತ್ತು ಶಾರದಮ್ಮನವರು ಮಾಡುವ ಮೆಂತ್ಯದ ಹಿಟ್ಟಿನ ರುಚಿ. ಸುಬ್ಬರಾಯ ನಿಗೆ ಆ ಊಟ ಬಹುರುಚಿಯಾಗಿತ್ತು. ಬಡಿಸಿದ ಕೈ, ಸೂರಪ್ಪನವರ ನಿಷ್ಕ ಳಂಕ ಪ್ರೇಮ, ಎಲ್ಲಕ್ಕಿಂತ ಮೇಲಾಗಿ ಸಾಲುಸಾಲಾಗಿ ಆ ಹುಡುಗರ ಜೊತೆ ನಗುನಗುತ್ತಾ ಉಂಡ ಊಟಕ್ಕಿಂತ ಬೇಕೆ? ಅಮಲ್ದಾರರ ಮನೆಯಲ್ಲೂ ಒಮ್ಮೆ ಸುಬ್ಬರಾಯ ಊಟ ಮಾಡಿದ್ದ. ಅವರ ಶ್ರೀಮಂತಿಕೆಯ ಮಾತು, ಲಾಡೂ ಸಮಾರಾಧನೆ, ಅವರ ಮನೆಯಲ್ಲಿನ ಬೆಳ್ಳಿ ಪಾತ್ರೆಗಳ ಪ್ರದರ್ಶನ, ರೇಷ್ಮೆ ಸೀರೆಗಳ ಪ್ರದರ್ಶನ ಅವನಿಗೆ ಓಕರಿಕೆ ತರುತ್ತಿತ್ತು. ಮೇಲಾಗಿ ಅಮಲ್ದಾರರು ಕೈಕೆಳಗಿನ ಗುಮಾಸ್ತರಿಗೆ ಊಟಹಾಕಿದ್ದು ಮೃಷ್ಟಾನ್ನ ಭೋಜನ ವಾದರೂ, ಬಡಿಸಿದ ರೀತಿಯಲ್ಲಿ ಅವನಿಗೆ ನಾಯಿಗೆ ತಂಗಳು ರೊಟ್ಟಿ ಹಾಕಿದ ಅನುಭವವಾಗಿತ್ತು. ಇಂದು ಸೂರಪ್ಪನ ಮನೆ ಊಟ, ಬೇಸಿಗೆಯ ಬಿಸಿಲಲ್ಲಿ ಬೆಂದು ಬಾಯಾರಿಕೆಯಿಂದ ಬಳಲಿದವನಿಗೆ, ದೊಡ್ಡದೊಂದು ಚೊಂಬಿನಲ್ಲಿ ತಣ್ಣನೆಯ ತಿಳಿ ಗಂಗಾಜಲ ಕೊಟ್ಟಷ್ಟು ಆನಂದವಾಗಿತ್ತು. ಅವನದನ್ನು ಎಷ್ಟು ಹೇಳಿದರೂ ಸಾಲದು.

"ಸೂರಪ್ಪನವರೇ ಇಂತಹ ಊಟ ನನ್ನ ಜನ್ಮದಲ್ಲೇ ಕಂಡಿರಲಿಲ್ಲ"

"ಪರಿಹಾಸ್ಯ ಸಾಕು ಸುಬ್ಬರಾವ್–ಬಡವರನ್ನು ಹಂಗಿಸಬಾರದು"

"ನಿಜಕ್ಕೂ ಈ ಊಟದ ಮುಂದೆ ಸಿರಿವಂತರ ಸೊಕ್ಕಿನ ಮೃಷ್ಟಾನ್ನ ಭೋಜನವನ್ನು ನೀವಾಳಿಸಿ ತೆಗೆಯಬೇಕು"

"ನೀನು ಯಾವಾಗಲೂ ಅಷ್ಟೆ ಇಷ್ಟನ್ನು ಅಷ್ಟುಮಾಡಿ ಹಿಗ್ಗಿಸಿ ಹೊಗ ಳುವಿ...."

"ಶಾರದಮ್ಮನವರ ಅಡಿಗೆ, ನಂದಗೋಕುಲದಂಥ ಮನೆ, ನಿಮ್ಮಂಥ ಯಜಮಾನರು–ನಿಮ್ಮೆದುರು ಹೇಳುವ ವಿಚಾರವಲ್ಲ. ಇಂಥ ಗೃಹಿಣಿ ಸಿಕ್ಕಿ ಬೇಕಾದರೆ ಏಳು ಜನ್ಮದ ಪುಣ್ಯ"

"ಇರಬೇಕು. ಒಂದೊಂದು ಜನ್ಮದ ನೆನಪಿಗೂ ಇರುವಂತೆ ಏಳು ಹೆಣ್ಣು ಇರುವುದೇ ಅದಕ್ಕೆ ನಿದರ್ಶನಾಂತ ಕಾಣತ್ತೆ...."

"ಹಹಹ....ನಿಮ್ಮ ಮಾತು ಬಿಡಿ...."

"....ಅದಿರ್‍ಲಿ, ಊರಿಗೆ ಎಂದು ಹೊರಡುತೀಯ....?"

"ನಾಮಕರಣದ ಹೊತ್ತಿಗೆ ಹೋಗದಿದ್ದರೆ ಮಾವನವರು ಸುಮ್ಮನಿರುತ್ತಾರೆಯೆ?"

"ಮಾವನವರಿಗಿಂತ ಅಮ್ಮಾ ಅವರು ಸುಮ್ಮನಿರುತ್ತಾರೆಯೆ?"

"ನೀವು ಬಿಡಿ ಯಾವಾಗಲೂ ಇದೇ ಹಾಸ್ಯ....ನಾನು ಹೊರಡುತ್ತೇನೆ...."

"ಸರಿ....ನಾನು ಮಧ್ಯಾಹ್ನ ತಳಕಿಗೆ ಹೋಗಬೇಕಾಗುತ್ತೇಂತ ಕಾಣತ್ತೆ, ಅಮಲ್ದಾರ್ರ ಸವಾರಿ ಸರ್ಕೀಟೊಂತ ಅನ್ನುತ್ತಿದ್ದರು"

"ಹಾಗಾದರೆ ಎಂದು ಬರುವುದು?"

"ನಾಳೆ ಮುಂಜಾನೆ...."

"ಬರ್‍ತೀನಿ...." ಎಂದು ಚಂಡಿನಂತೆ ಪುಟಿದೆದ್ದು ಹೊರಬಿದ್ದ ಸುಬ್ಬರಾಯ. ಸೂರಪ್ಪನವರು ಪೇಟ ಏರಿಸಿ ಕಚೇರಿಯ ಕಡೆ ಹೊರಟರು.

ನಾಮಕರಣಕ್ಕೆ ಹೋಗಿ ಮುದ್ದು ಮಗನನ್ನು ನೋಡಿ ಬಂದಿದ್ದ ಸುಬ್ಬರಾಯ ಹುರುಪಿನಿಂದ ಮತ್ತೆ ಚಳ್ಳಕೆರೆಗೆ ಬಂದಿದ್ದ. ತಿಪ್ಪಯ್ಯನವರ ಸಲಹೆಯಂತೆ ಪಾಲಿನ ವಿಚಾರ ಮುಂದಕ್ಕೆ ಹಾಕಿ ಲಕ್ಷ್ಮಣನ ಮತ್ತು ಅವನಲ್ಲಿ ನಡೆವ ಬಿಸಿಬಿಸಿಯ ಪತ್ರ ವ್ಯವಹಾರದ ಕಾವು ಆರಿ ಶಾಂತ ವಾತಾವರಣ ಕಲ್ಪಿಸಿ ಆಮೇಲೆ ಮತ್ತೆ ಸಂಧಾನಕ್ಕೆ ಪ್ರಾರಂಭಿಸುವುದೇ ಸೂಕ್ತವೆಂದು ಸಧ್ಯಕ್ಕೆ ನಿರ್ಧಾರಕ್ಕೆ ಬಂದಿದ್ದ. ದಿನಗಳುರುಳಿದವು.

ಅವತ್ತು ಸೂರಪ್ಪನವರೊಡನೆ ಮಧ್ಯಾನ್ಹ ಕಾಫಿಗೆ ಹೊರಟಾಗ ಇದ್ದಕ್ಕಿದ್ದಂತೆ ಅವನಿಗೊಂದು ಪತ್ರ ಬಂತು. ಅದನ್ನೋದಿಕೊಂಡು ಸೂರಪ್ಪನವ

ರಿಗೆ ಕೊಟ್ಟ. ಅದು ಸರ್ಕಾರಿ ಹುಕುಂ. ಸುಬ್ಬರಾಯನನ್ನು ಮೊಳಕಾಲ್ಮೂರಿಗೆ ವರ್ಗ ಮಾಡಿದ್ದರು.

"ಸೂರಪ್ಪನವರೇ ಹಾಯಾಗಿ ಇಲ್ಲಿದ್ದೆ, ಇನ್ನು ಅಲ್ಲಿ ಓಂ ಪ್ರಥಮ ಮನೆ ಮಠಾಂತ ಪ್ರಾರಂಭಿಸಬೇಕು"

"ಸರ್ಕಾರಿ ನೌಕರರ ಹಣೆಬರವೇ ಅಷ್ಟು ಸುಬ್ಬರಾವ್. ಕಾಲು ಚಂಡನ್ನು ಒದ್ದಹಾಗೆ ಇಲ್ಲಿಂದ ಅಲ್ಲಿಗೆ ಅಲ್ಲಿಂದ ಇಲ್ಲಿಗೆ ಒದೆಸಿಕೊಳ್ಳುವುದೇ ನಮ್ಮ ಹಣೆ ಬರ. ನನ್ನ ವಿಷಯಕ್ಕೆ ತೊಗೊ. ಜಗಳೂರಲ್ಲಿ ಹಾಯಾಗಿದ್ದೆ ಒಳ್ಳೆ ಸ್ಥಳ ಅದು. ಅಲ್ಲಿಂದ ದಾವಣಗೆರೆ, ಹರಿಹರ, ಹೊಳಲಕೆರೆ, ಒಂದೊಂದು ಊರಲ್ಲೂ ಒಂದು ವರ್ಷ ಪೂರ್ತ ಇರೋಕೆ ಬಿಡೋಲ್ಲ"

"ನಿಮ್ಮನ್ನೆಲ್ಲಾ ಬಿಟ್ಟು ನಾನು ಹೋಗಲಾರೆ ಸೂರಪ್ಪನೋರೆ"

"ಹೋಗೋಲ್ಲಾಂದರೆ ಹೇಗೆ ಆಗುತ್ತೆ ಸುಬ್ಬರಾವ್ ? ರೈಲ್ವೆ ಪ್ರಯಾಣ ದಲ್ಲಿ ಸಿಗೊ ಸ್ನೇಹಿತರ ಹಾಗೆ ಈ ವರ್ಗವಾಗುವ ಕೆಲಸದ ನೌಕರರ ಸ್ನೇಹ. ಅಲ್ಲಿ ಕೆಲವೇ ಘಂಟೆಗಳಾದರೆ ಇಲ್ಲಿ ಕೆಲವು ತಿಂಗಳುಗಳು ಅಷ್ಟೆ. ಈ ಊರಲ್ಲಿ ನಿನಗೆ ಶಿಖರ ಇಡೋದು ಅಷ್ಟರಲ್ಲೇ ಇದೆ, ರಾಗಿ ಬೀಸುವವನಿಗೆ ಯಾವಕಡೆ ಆದರೇನು, ಬಲಗೈಯ್ಯೋ ಎಡಗೈಯ್ಯೋ ಕೊಡುತ್ತಿರಬೇಕಷ್ಟೆ. ತಾಬೆದಾರಿ, ಗುಲಾಮತನ, ಈ ಕೆಲಸದ ಹಣೆಬರವೇ ಅಷ್ಟು. ಮೊಳಕಾಲ್ಮೂರು ಒಳ್ಳೆ ಊರು, ಹೋದರೇ ಒಳ್ಳೆಯದು. ಇನ್ನು ಬೇಡಾಂತ ಗೊಗರೆಯೋಕೆ ಚಿತ್ರ ದುರ್ಗಕ್ಕೆ ಹೋಗಿ ಅಲ್ಲಿ ಡಿ. ಸಿ. ಹತ್ತಿರ ಅಂಗಲಾಚಿ ಅವರು ಒಂದು ಮಾತು ಅಂದರೆ ಅನ್ನಿಸಿಕೊಂಡು ಕಡೆಗೆ "ಇಲ್ಲಾ" ಅಂತ ಪ್ಯಾಪು ಮೋರೆ ಹಾಕ್ಕೊಂಡು ಬರೋದಕ್ಕಿಂತ ದಿಂರಂಗಾಂತ ಹೊರಡೋದೆ ಸರಿ"

ಎಂಗೆನ್ನುವ ಹೊತ್ತಿಗೆ ಹೋಟಲು ಬಂತು. ಇಬ್ಬರೂ ಚೌಚೌ ಕಾಫಿ ಹೇಳಿದರು. ಚೌಚೌ ಬಾಯಿಗೆ ಹಾಕಿ ಸುಬ್ಬರಾಯ

"ನನಗೂ ಇನ್ನೊಬ್ಬರ ಹತ್ತಿರ ಹೋಗಿ ಕೈಕಟ್ಟಿ ನಿಲ್ಲಬೇಕೂಂದರೆ ಬೇಸರ. ನೀವು ಹೇಳಿದಹಾಗೆ ಇಲ್ಲೇನು ನಮ್ಮಜ್ಜ ಹಾಕಿದ ಆಲದಮರ ಇರೋದು ಅಷ್ಟರಲ್ಲೇ ಇದೆ. ಹೆಣ ಹೊರೋವನಿಗೆ ಚಳ್ಳಕೆರೆ ಏನು, ಮೊಳ ಕಾಲ್ಮೂರೇನು ? ಎಲ್ಲಾ ಒಂದೇ"

"ಹಹ....ಸರಿಯಾಗಿ ಹೇಳಿದಿ. ಲೇ ಮಾಣಿ ಇದೇನು ಕಾಫಿಯೋ ಕಷಾಯವೋ....ನಮ್ಮ ಕರ್ಮ ನಿಮ್ಮ ಪಾಲಿನ ತೆರಿಗೆ ತೆತ್ತು ಈ ಅಧ್ವಾನದ ಕಾಫಿ ಕುಡೀಬೇಕಾಗಿದೆ....'' ಎಂದು ಹೋಟಲಿನವನನ್ನು ಶಪಿಸಿ ಇಬ್ಬರೂ ಎದ್ದು ಹೊರಟರು.

ಮರುದಿನವೇ ಶಿವಮೊಗ್ಗೆಗೆ, ಹಿರೇಹಳ್ಳಿಗೆ ಅಮ್ಮೇನಹಳ್ಳಿಗೆ ಕಾಗದ ಹಾಕಿದ ಸುಬ್ಬರಾಯ. ಕೆಲಸಕ್ಕೆ ಹಾಜರಾಗುವ ಮುನ್ನ ರಜ ಪಡೆದು ಹೋಗಬಹುದಿತ್ತು. ಮೊನ್ನೆ ತಾನೆ ಹೋಗಿಬಂದಿದ್ದರಿಂದ ಮತ್ತೆ ವೃಥಾ ಖರ್ಚೆಂದು ನೇರವಾಗಿ ಸಾಮಾನು ಕಟ್ಟಿಕೊಂಡು ಮೊಳಕಾಲ್ಮೂರಿಗೇ ಹೊರಟುಬಿಡುವುದೆಂದು ನಿರ್ಧರಿಸಿದ್ದ.

ಕಚೇರಿಯ ಜವಾನನಿಗೆ ಹೇಳಿ ಒಂದು ಗಾಡಿ ಗೊತ್ತುಮಾಡಿ ಮನೆಯ ಸಾಮಾನೆಲ್ಲಾ ಜೋಡಿಸಿ ಒಂದೆರಡು ಜಾಕಾಯಿ ಪೆಟ್ಟಿಗೆ ಎರಡು ಗೋಣಿ ಚೀಲದ ತುಂಬಾ ಸಾಮಾನಾಯಿತು. ಆ ಕಚೇರಿ ಜವಾನನೇ ಸಾಮಾನು ಕಟ್ಟಲು ಬಂದಿದ್ದ. ಗಾಡಿಯ ಜೊತೆಗೆ ಹೋಗಲು ಒಬ್ಬ ನಂಬಿಕೆಯಾದ ಆಳನ್ನೂ ಸೂರಪ್ಪನವರು ಗೊತ್ತುಮಾಡಿ ಕೊಟ್ಟಿದ್ದರು.

ಹೀಗೆ ಹೊರಡುವ ತಯಾರಿಯಲ್ಲಿದ್ದ ಸುಬ್ಬರಾಯನಿಗೆ ಶಿವಮೊಗ್ಗೆಯಿಂದ ಬಂದ ಕಾಗದ ಆದಷ್ಟು ಬೇಗ ಮೊಳಕಾಲ್ಮೂರಿಗೆ ಹೊರಡಬೇಕೆನ್ನುವ ಉತ್ಸಾಹ ಮೂಡಿಸಿತ್ತು. ತ್ರಿಪುರಸುಂದರಿಯ ಕಾಗದ ಅದು. ಮತ್ತೆ ಮತ್ತೆ ಓದಿದ.

"ಅಣ್ಣಂದಿರಿಗೆ ತ್ರಿಪುರಸುಂದರಿಯ ನಮಸ್ಕಾರಗಳು..........ಉಭಯ ಕುಶಲೋಪರಿ ಸಾಂಪ್ರತ. ನಿನಗೆ ಮೊಳಕಾಲ್ಮೂರುವಿಗೆ ವರ್ಗವಾದದ್ದು ತಿಳಿದುಬಂತು. ನಿನ್ನ ಕಾಗದ ಬಂದಾಗ ರಂಗಮ್ಮನವರು ಇಲ್ಲೇ ಇದ್ದರು. ಅವರ ಅಳಿಯ ಜನಾರ್ಧನಯ್ಯ ಮತ್ತು ಮಗಳು ಸುಶೀಲೆ ಅಲ್ಲೇ ಇರುವುದು ನಿನಗೆ ಗೊತ್ತಿರಬಹುದು.

ಹೊಸದುರ್ಗದಿಂದ ಅಲ್ಲಿಗೆ ವರ್ಗವಾಗಿದ್ದು ನಿನಗೂ ಗೊತ್ತಿರಬಹುದು. ಇಲ್ಲಿ ಹುಡುಗರು, ನಿಮ್ಮ ಭಾವ ಆರೋಗ್ಯದಿಂದ ಇದ್ದಾರೆ. ಈ ವರ್ಷ ರಾಮನವಮಿ ಲಕ್ಷ್ಮೀನಾರಾಯಣಸ್ವಾಮಿ ಗುಡಿಯಲ್ಲಿ ತುಂಬಾ ಚೆನ್ನಾಗಿ ನಡೆಯಿತು.

ನಿಮ್ಮ ಭಾವನವರನ್ನು ವಿದ್ವಾಂಸರಾದ ಕುಕ್ಕೆ ಸುಬ್ರಹ್ಮಣ್ಯ ಶಾಸ್ತ್ರಿಗಳು ಗೌರವಿಸಿ ಮೆಚ್ಚಿಗೆಯ ಮಾತಾಡಿದ್ದು ಅವರನ್ನು ಹಿಡಿಯುವುದೇ ಕಷ್ಟಕ್ಕೆ ಬಂದಿದೆ.

ರಾಜೀವಿಗೂ ಕಾಗದ ಬರೆದಿದ್ದೇನೆ. ಯಥಾಪ್ರಕಾರ ಮೊಳಕಾಲ್ಮೂರಿಗೆ ಹೋಗುವಾಗ ನಮ್ಮಲ್ಲಿ ಈಸಲ ಒಂದು ತಿಂಗಳು ಠಿಕಾಣಿ ಹಾಕಲೇಬೇಕು. ನೀನು ಯಾವತ್ತು ಮೊಳಕಾಲ್ಮೂರಿಗೆ ಹೋಗುತ್ತಿ? ಅಲ್ಲಿಯ ಸೀರೆಗಳು ಅಗ್ಗ ಮತ್ತು ಚೆನ್ನ ಅಂತ ಓದಿಬಲ್ಲೆ. ತಂಗಿಗೊಂದು ಸೀರೆ ನೇಯಿಸಿ ಕೊಡುವುದು ಮರೆಯಬೇಡ.

ಇತಿ ನಮಸ್ಕಾರಗಳು,
ನಿನ್ನ ತಂಗಿ
ತ್ರಿಪುರಸುಂದರಿ

ತಂಗಿಯ ಪ್ರೀತಿ ಪೂರ್ವಕ ಕಾಗದದಲ್ಲಿ, ಅವನಿಗೆ ಅತಿ ಆಪ್ಯಾಯಮಾನವಾಗಿದ್ದ ಸಂಗತಿ "ಜನಾರ್ಧನಯ್ಯ ದಂಪತಿಗಳು ಅಲ್ಲೆ ಇದ್ದಾರೆ." ಅದೇ ಸಾಲುಗಳನ್ನು ಮೆಲಕು ಹಾಕಿದ ಸುಬ್ಬರಾಯ.

ಮೊದಲು ಸಾಮಾನು ಗಾಡಿಯನ್ನು ಕಳಿಸಿ ಎರಡು ದಿನ ಬಿಟ್ಟು ಮೋಟಾರಿನಲ್ಲಿ ಮೊಳಕಾಲ್ಮೂರಿಗೆ ಹೊರಡುವುದೆಂದು ನಿರ್ಧರಿಸಿದ್ದ.

ಸೂರಪ್ಪನವರ ಮನೆಯಲ್ಲಿ ಊಟಕ್ಕೆ ಹೇಳಿದ್ದರು. ಇನ್ನಿತರ ಸ್ನೇಹಿತರೂ ಮನೆಗಳಿಗೆ ಬರಮಾಡಿಕೊಂಡು ತಿಂಡಿ ಕಾಫಿ ಕೊಟ್ಟು ಸತ್ಕರಿಸಿದರು. ಗುಮಾಸ್ತೆಗಳ ಜೀವನದಲ್ಲಿ ಅವರಿಗೆ ವರ್ಗವಾದಾಗ ಮಹತ್ತರ ಅನುಭವವಾಗುವುದು. ಸಹ ಗುಮಾಸ್ತೆಗಳು ಪ್ರೀತ್ಯಾದರಗಳಿಂದ ಸತ್ಕರಿಸಿ ಕಳಿಸುವುದರಲ್ಲಿ ಅವರು ಗಳಿಸಿದ ಜನಾದರಣೆಯ ಮಟ್ಟ ತಿಳಿಯುತ್ತದೆ. ಒಂದು ಕುಟುಂಬದವರಂತೆ ಒಂದೇ ಕಚೇರಿಯಲ್ಲಿ ಕೆಲಸಮಾಡುತ್ತಿದ್ದಾಗ ಸಹೋದ್ಯೋಗಿಯೊಬ್ಬನ ಅಗಲುವಿಕೆಯಿಂದ ಮೂಡುತ್ತಿದ್ದ ಅತೀವ ಯಾತನೆ ಅವರ ಸಹೋದರ ಭಾವದ ಕುರುಹಾಗಿರುತ್ತಿತ್ತು.

ಎಲ್ಲರೂ ಹೀಗೇ ಇರುವರೆಂದು ನಂಬಲಾಗದು. ಅವರಲ್ಲೂ ಚಾಡಿಕೋರರು—ಅಸೂಯಾಪರರು ಇಲ್ಲವೆಂದಲ್ಲ. ಇವೆಲ್ಲ ಇದ್ದರೂ ವರ್ಗವಾದಾಗ ಎಲ್ಲರೊಡನೆ ತಾವೂ ಸೇರಿ ಬೀಳ್ಕೊಡುವುದು ಸಂಪ್ರದಾಯ.

೧೭

ಮೋಟಾರು ಮೊಳಕಾಲ್ಮೂರು ತಲುಪಿದಾಗ ಸಂಜೆ ಏಳು ಘಂಟೆಯಾಗಿತ್ತು. ನೇರವಾಗಿ ಜೊತೆಗೆ ತಂದಿದ್ದ ಟ್ರಂಕು ಹಾಸಿಗೆ ತೆಗೆಸಿಕೊಂಡು ಮುಸಾಫರ್ ಖಾನೆಗೆ ಹೋದ. ಸಾಮಾನಿನ ಗಾಡಿ ಜೊತೆಗೆ ಬಂದಿದ್ದ ಆಳು ಸಾಮಾನೆಲ್ಲವನ್ನೂ ಮುಸಾಫರ್ ಖಾನೆಯ ಒಂದು ಕೊಠಡಿಯಲ್ಲಿ ಹಾಕಿ ಇನ್ನೊಂದು ಕೊಠಡಿಯನ್ನು ಶುಭ್ರಮಾಡಿಸಿ ಸುಬ್ಬರಾಯನಿಗೆ ಸಿದ್ಧಮಾಡಿಸಿದ್ದ. ಮುಸಾಫರ್ ಖಾನೆಯ ಪಕ್ಕದಲ್ಲೇ ಟ್ರಾವಲರ್ಸ್ ಬಂಗಲೋ ಇತ್ತು. ಇನ್ನೊಂದು ಪಕ್ಕದಲ್ಲಿ ಸಂತೆ ಬೈಲು. ಅದರ ಬಳಿ ಮಿಡ್ಲ್ ಸ್ಕೂಲು, ತಾಲ್ಲೋಕು ಕಚೇರಿಗಳಿದ್ದವು.

ರಾತ್ರಿ ಸೂರಪ್ಪನವರ ಹೆಂಡತಿ ಶಾರದಮ್ಮನವರು ಕಟ್ಟಿಕೊಟ್ಟ ಚಪಾತಿ ತಿಂದು, ಒಂದು ಪಾವು ಹಾಲು ತರಿಸಿ ತಂದು ಬಂಗಲೆ ಜವಾನನಿಂದ ಕಾಯಿಸಿಸಿ ಕುಡಿದು ಮಲಗಿದ. ದಣಿದು ಬಂದ ಸುಬ್ಬರಾಯನಿಗೆ ಕೂಡಲೆ ನಿದ್ರೆ ಹತ್ತಿತು.

ಮರುದಿನ ಮುಂಜಾನೆ ಗಾಡಿಯವನನ್ನು ಆಳನ್ನು ವಾಪಸ್ಸು ಚಳ್ಳಕೆರೆಗೆ ಕಳಿಸಿಕೊಟ್ಟು, ಮತ್ತೆ ಅದೇ ಬಂಗಲೆ ಜವಾನನಿಂದ ಕಾಫಿಪುಡಿ ಸಕ್ಕರೆ ತರಿಸಿ ಕಾಫಿ ಮಾಡಿಕೊಂಡು ಕುಡಿದ. ಮುಸಾಫರ್ ಖಾನೆಯ ಹಿಂಬದಿಗಿದ್ದ ಸೇದು ಭಾವಿಯಿಂದ ನೀರು ಸೇದಿಕೊಳ್ಳಬೇಕಾಯಿತು. ತಣ್ಣೀರನ್ನೇ ಸುರಿದುಕೊಂಡು ಸ್ನಾನಮಾಡಿ, ತಾಲ್ಲೋಕು ಕಚೇರಿಯ ಕಡೆ ಹೊರಟ. ಕಚೇರಿಯ ಮುಂದೆ ನಿಂತಿದ್ದ ದಫೆದಾರನನ್ನು ಜನಾರ್ಧನಯ್ಯನವರು ಬಂದಿದ್ದಾರೆಯೇ ಎಂದು ವಿಚಾರಿಸಿದ. ಆ ದಫೆದಾರ "ಅವರಲ್ಲದೆ ಇನ್ಯಾರು ಇರಬೇಕು ಕಚೇರೀಲಿ ಇಷ್ಟುಹೊತ್ತಿನಲ್ಲಿ" ಎಂದೆನ್ನುತ್ತಾ ಸುಬ್ಬರಾಯನನ್ನು ಹೊಸದಾಗಿ ಬಂದವರೆಂದು ವಿಚಾರಿಸಿಕೊಂಡು, ಪರಿಚಯ ಮಾಡಿಕೊಂಡು, ಜನಾರ್ಧನಯ್ಯ ಬರೆಯುತ್ತಾ ಕುಳಿತ ಕೊಠಡಿಗೆ ಕರೆದೊಯ್ದ.

"ಜನಾರ್ಧನಯ್ಯನವರು ತುಂಬಾ ಕೆಲಸದಲ್ಲಿದ್ದಹಾಗಿದೆ" ಎಂದ ಸುಬ್ಬರಾಯ.

ಹುಬ್ಬು ಏರಿಸಿ ನೋಡಿದಾಗ ಜನಾರ್ಧನಯ್ಯನಿಗೆ ಆಶ್ಚರ್ಯವಾಯಿತು. ಸಂತೋಷ ಹೇಳತೀರದು.

"ಸುಬ್ಬರಾಯರೇ........" ಎಂದು ಎದ್ದು ಬಂದು ತಬ್ಬಿಕೊಂಡೇಬಿಟ್ಟ. ಒಂದು ಕ್ಷಣ ಇಬ್ಬರ ಬಾಯಿಂದಲೂ ಮಾತು ಹೊರಡಲಿಲ್ಲ. ಜನಾರ್ಧನನ ಕಣ್ಣಂಚಿನಲ್ಲಿ ಆನಂದ ಭಾಷ್ಪವೇ ಮೂಡಿತ್ತು. ಜನಾರ್ಧನಯ್ಯ ಪೇಟ ಏರಿಸಿ ''ಬನ್ನಿ ಮನೆಗೆ ಹೊರಡುವ" ಎಂದು ಮಾಡುತ್ತಿದ್ದ ಕೆಲಸ ಅಲ್ಲಿಗೆ ಬಿಟ್ಟು ಸುಬ್ಬರಾಯನನ್ನು ತನ್ನ ಮನೆಗೆ ಕರೆದೊಯ್ದ.

ಹತ್ತು ಘಂಟೆಯ ಸಮಯವಿದ್ದಿರಬೇಕು, ಸುಶೀಲ ಒಳಗಡೆ ಅಡಿಗೆ ಯಲ್ಲಿ ನಿರತಳಾಗಿದ್ದಳು. ಜನಾರ್ಧನಯ್ಯ ಸುಬ್ಬರಾಯನನ್ನು ಕರೆತಂದು ಮುಂದಿನ ಕೊಠಡಿಯಲ್ಲಿ ಹಾಸಿದ ಚಾಪೆಯ ಮೇಲೆ ಕೂಡುವಂತೆ ಹೇಳಿದ. ಒಳಕ್ಕೆ ಹೋಗಿ

"ಸುಶೀಲ–ಏ ಸುಶೀಲ....ನೋಡು ಬಾ, ಯಾರು ಬಂದಿದ್ದಾರೆ" ಎಂದು ಕೂಗಿ ಹೇಳಿದ. ಯಜಮಾನರು ಹೆಚ್ಚು ಮಾತೇ ಆಡದಿದ್ದವರು ಎಂದೂ ಇಲ್ಲದ್ದು ಇಂದು ಈ ಹೊತ್ತಿನಲ್ಲಿ ಕಚೇರಿಯಿಂದ ಬಂದು ಹೀಗೆ ಉತ್ಸಾಹದಿಂದ ಕೂಗಿದ್ದು ಸುಶೀಲೆಗೂ ಆಶ್ಚರ್ಯವೆನಿಸಿತು. ಹುಳಿ ಕಿವುಚುತ್ತಿದ್ದವಳು ಹಾಗೇ ಕೈಮೇಲೆ ನೀರು ಹಾಕಿಕೊಂಡು ಸೆರಗಿನಿಂದ ಕೈಒರಸಿಕೊಳ್ಳುತ್ತಾ ಹೊರಕ್ಕೆ ಬಂದಳು. ಬಂದು ನೋಡಿದಳು, ನೋಡೇ ನೋಡಿದಳು; ತನ್ನ ಕಣ್ಣನ್ನೇ ನಂಬದಾದಳು. ಸುಬ್ಬರಾಯ ! ಅದೇ ಮುಖ, ಅದರಲ್ಲಿ ದೊಡ್ಡ ಗೃಹಸ್ಥರಿಗೆ ಶೋಭಿಸುವ ಚಲುವಾದ ಮೀಸೆ ಹರಡಿದೆ, ನೀಳವಾದ ಮೂಗು ಚೂಪು ಗಲ್ಲ, ಕೊಂಚ ದೊಡ್ಡದೇ ಆದ ಹುಬ್ಬು ಅದೇ ಅಗಲವಾದ ಹಣೆ, ಕಿವಿಯಲ್ಲಿದ್ದ ಹತ್ತ ಖಡಕು ಇಲ್ಲವಾಗಿದೆ, ಮುಖದಲ್ಲಿ ಅದೇ ನಗು. ಸುಬ್ಬರಾಯ ಐದು ವರ್ಷದ ಕೆಳಗೆ ತನ್ನ ಮದುವೆಯಲ್ಲಿ ನೋಡಿದ್ದೇ ಕಡೆಯ ನೋಟವಾಗಿತ್ತು ಇಂದು ತನ್ನ ಮನೆಯಲ್ಲಿ ಮನೋಹರ ಮೂರ್ತಿಯಂತೆ ಮಂಡಿಸಿದ್ದಾನೆ. ನೋಡೇ ನೋಡಿದಳು, ಬಾಯಿಂದ ಮಾತೇ ಹೊರಡಲಿಲ್ಲ.

ಸುಬ್ಬರಾಯನೂ ನೋಡಿದ, ಸುಶೀಲ–ಅದೇ ಸುಶೀಲ, ದಂತದ ಗೊಂಬೆ ಸುಶೀಲ. ಅದೇ ಮುಗುಳು ನಗೆ, ಎತ್ತರದ ನಿಲುವು. ಐದು ವರ್ಷದಲ್ಲಿ ಇನ್ನೂ ಚೆಲುವಾಗಿ ಬೆಳೆದಿದ್ದಳು ಸುಶೀಲ. ಅಸ್ತವ್ಯಸ್ಥವಾದ ಮುಂಗುರುಳನ್ನು

ಸೆರಿಪಡಿಸಿಕೊಂಡು ಸೆರಗನ್ನು ಸರಿಯಾಗಿ ಹೊದ್ದುಕೊಂಡು ನಿಂತಾಗ ಬಳುಕುವ ಬಳ್ಳಿಯಂತೆ ಕಂಡಳು. ಮುಖದಲ್ಲಿ ಮೊದಲಿನ ಉತ್ಸಾಹ, ಹುರುಪು ಇರಲಿಲ್ಲ. ಯಾವುದೋ ಅತೀವ ಯಾತನೆಗೆ ಬಲಿಯಾದದ್ದನ್ನು ಸ್ಪಷ್ಟವಾಗಿ ಅವಳಲ್ಲಿ ಕಾಣಬಹುದಿತ್ತು. ಸುಶೀಲೆ! ಎಷ್ಟು ಮೋಹಕ ಆಕೃತಿ ಅವಳದು. ನಿಜಕ್ಕೂ ಜನಾರ್ಧನನ ಪುಣ್ಯ ಇಂಥ ರತಿ ಸಿಕ್ಕದ್ದು–ಎಂದು ಮತ್ತೊಮ್ಮೆ ಅಂದುಕೊಂಡ. ಅವನೂ ನೋಡೇ ನೋಡಿದ ಅವಳ ಕಣ್ಣಲ್ಲಿ ಕಣ್ಣಿಟ್ಟು.

ಮೂಕರಾಗಿದ್ದರವರ ಮೌನ ಮುರಿದದ್ದು ಜನಾರ್ಧನಯ್ಯನೆ. "ಗುರ್ತು ಸಿಕ್ಕಲಿಲ್ಲವೇ ಸುಶೀಲ'' ಎಂದಾಗಲೇ ವಾಸ್ತವ ಜಗತ್ತಿಗೆ ಅವಳು ಬಂದದ್ದು. ಯಾರದಾದರೂ ಗುರ್ತು ಮರೆಯದೆ ಅವಳ ಹೃದಯದಲ್ಲಿ ಹುದುಗಿದ್ದರೆ ಅದು ಸುಬ್ಬರಾಯನದೆಂದು ಪಾಪ ಜನಾರ್ಧನಯ್ಯನಿಗೆ ತಿಳಿಯದು.

"ಗುರ್ತು ಮರೆತಿಲ್ಲ–ರಾಜಮ್ಮನ ಯಜಮಾನರಲ್ಲವೇ! ನಿತ್ಯ ಅವರನ್ನು ಮರೆಯದೆ ನೆನಪು ತರುವಂಥ ಉಡುಗೊರೆ ಕೊಟ್ಟಿದ್ದಾರೆ"

"....ಆ ನೀಲಾಂಜನಗಳನ್ನು ನೋಡಿ ಹೇಳುತ್ತೀರಾ?"

"ಹೌದು, ನಿತ್ಯ ದೇವರ ಮುಂದೆ ದೀಪ ಹಚ್ಚುವುದಕ್ಕೆ ನೀವು-ರಾಜಮ್ಮ ಕೊಟ್ಟ ನೀಲಾಂಜನವನ್ನೇ ಅಂದಿನಿಂದ ಇಂದಿನತನಕ ಉಪಯೋಗಿಸುತ್ತಿದ್ದೇನೆ"

''ರಾಜೀವಿಯ ಸಲಹೆ ತುಂಬಾ ಒಳ್ಳೆದಾಯಿತು, ಅವಳೇ ಹೇಳಿದ್ದು, ಮರೆಯಲಾರದಂಥ ಉಡುಗೊರೆ ಕೊಡಬೇಕೆಂದು''

''ಖಂಡಿತ ಮರೆಯಲಾರದ ಉಡುಗೊರೆ ಅದು"

"ಜನಾರ್ಧನಯ್ಯಾ, ನನಗೊಂದು ಮನೆ ಗೊತ್ತುಮಾಡಿ ಕೊಡಬೇಕು"

"ಈಗ ಎಲ್ಲಿ ಇಳಿದಿದ್ದೀರ?"

"ಮುಸಾಫರ್ ಖಾನೆಯಲ್ಲಿ"

"ಸಾಮಾನು ಸರಿಂಜಾಮು ಎಲ್ಲಾ ಬಂದಿದೆ ತಾನೆ?"

"ಮೊದಲೇ ಕಳಿಸಿದ್ದೆ. ಆಳು ಎಲ್ಲಾ ಮುಸಾಫರ್ ಖಾನೆಯಲ್ಲಿ ಇರಿಸಿ ನನಗೂ ಒಂದು ಕೊಠಡಿ ಸಿದ್ಧಪಡಿಸಿದ್ದ"

''ಮೊದಲೆ ನನಗೊಂದು ಕಾಗದಾ ಹಾಕಬಾರದಾಗಿತ್ತೆ? ನಮ್ಮ ಮನೆಯಲ್ಲೇ ಇರಬಹುದಾಗಿತ್ತು; ಎಲ್ಲಾ ಏರ್ಪಾಟೂ ಮಾಡುತ್ತಿದ್ದೆ"

"ಶಿವಮೊಗ್ಗಾದಿಂದ ಅಮ್ಮ ಕಾಗದ ಬರೆದಿದ್ದರೂ ಚೆನ್ನಾಗಿರುತ್ತಿತ್ತು. ಅವರಿಗೂ ಇವರಿಗೆ ಇಲ್ಲಿಗೆ ವರ್ಗವಾದದ್ದು ತಿಳಿದಿರಲಿಲ್ಲವೇನೋ!"

"ನಾನು ತ್ರಿಪುರಸುಂದರಿಗೆ ಬರೆದಿದ್ದೆ. ಅವಳಿಂದ ಕಾಗದ ಬಂದಮೇಲೇ ನೀವು ಇಲ್ಲಿ ಇರುವುದು ತಿಳಿದದ್ದು, ಅವಸರವಾಗಿ ಹೊರಟುಬಿಟ್ಟೆ. ಕಾಗದ ಬರೆಯಲಾಗಲಿಲ್ಲ"

"ಒಳ್ಳೆದಾಯಿತೇಳಿ – ಅನಿರೀಕ್ಷಿತ ಆಗಮನದಿಂದ ನಮಗಾದಷ್ಟು ಸಂತೋಷ ನಿರೀಕ್ಷಿತ ಅತಿಥಿಗಳಾಗಿ ಬಂದಿದ್ದರೆ ಆಗುತ್ತಿತ್ತೆ?...." ಎಂದ ಜನಾರ್ಧನಯ್ಯ.

"ಹ್ಹ ಹ್ಹ ಹ್ಹ....ಅದು ನಿಜ" ಎಂದು ಹೂವಿನಂತೆ ನಕ್ಕಳು ಸುಶೀಲ.

"ಮನೆ ಗೊತ್ತುಮಾಡಿ ಕೊಡಬೇಕು ಬೇಗ"

"ಆ ಭಾರ ನನಗಿರಲಿ...." ಎಂದಾಗ ಅವನ ಮನೆ ಪಕ್ಕದ ದೆವ್ವದ ಮನೆ ನೆನಪಿಗೆ ಬಂತು.

"ರಾಜಮ್ಮನಿಗೆ ಎಷ್ಟು ತಿಂಗಳು?" ಎಂದವಳು ಸುಶೀಲ.

"ಹೆತ್ತು ನಾಲ್ಕು ತಿಂಗಳಾಯಿತು. ಮನೆ ಬೇಗ ಮಾಡಿದರೆ ಬೇಗ ಕರೆಸಿ ಕೊಳ್ಳಬಹುದೂಂತ"

"ಮಗನಿಗೆ ಏನು ಹೆಸರಿಟ್ಟಿದ್ದೀರಿ?"

"ಗೋಕುಲಾಷ್ಟಮಿ ದಿನ ಹುಟ್ಟಿದ್ದು, ಶ್ಯಾಮಸುಂದರ ಅಂತ ಅವರಜ್ಜ ನಾಮಕರಣ ಮಾಡಿದ್ದಾರೆ"

"ಶ್ಯಾಮಸುಂದರ–ಮುದ್ದಾದ ಹೆಸರು"

"ಸರಸ್ವತಿಯನ್ನು ನೀವು ನೋಡಿಲ್ಲವೆ?"

"ಚಿಕ್ಕ ಮಗು ನಾನು ನೋಡಿದಾಗ. ರಾಜೀವಿ ನಾನು ಒಟ್ಟಿಗೇ ಶಿವಮೊಗ್ಗೆಯಿಂದ ಬಂದೆವು ನೋಡಿ ಒಂದುಸಾರಿ, ಇವರಾಗ ಹೊಸದುರ್ಗದಲ್ಲಿದ್ದರು"

"ಹೌದು ಹೌದು, ನಿಮ್ಮಿಂದ ಒಂದು ರೂಪಾಯನ್ನೂ ಗಿಟ್ಟಿಸಿದ್ದಳು ಸರಸ್ವತಿ"

"ಈಗ ಸರಸ್ವತಿಗೆ ಐದು ವರ್ಷವೇ!"

"ಹೂಂ ನಾಲ್ಕು ತುಂಬಿ ಐದರಲ್ಲಿ"

''ಬೇಗ ರಾಜಮ್ಮ ಬಂದರೆ ನನ್ನ ಬೇಸರ ಹೋದೀತು–ಇವರು ನೋಡಿದರೆ ಸದಾ ಕಚೇರಿಯಲ್ಲೇ ಇರುತ್ತಾರೆ''

''ಹೌದ ಜನಾರ್ಧನಯ್ಯ ? ''

''ಮನೆಯಲ್ಲಿ ಇವಳ ಕೈಲಿ ಉರಿಯುವುದಕ್ಕಿಂತ ಕಚೇರಿಯೇ ತಣ್ಣಗಿರುತ್ತದೆ''

''ನೋಡಿ ಸುಬ್ಬರಾಯರೆ ನಾನು ಉರಿಸುತ್ತೇನಂತೆ. ಅವರೇ ನನ್ನೊಬ್ಬಳನ್ನೇ ಮನೆಯಲ್ಲಿ ಬಿಟ್ಟು ಗೋಳು ಹುಯ್ಯುತ್ತಾರೆ''

"ಬೇಗ ರಾಜೀವಿನ್ನ ಕರೆಸುತ್ತೇನೆ ನೀವು ಮನೆಮಾಡಿ ಕೊಡುವುದೇ ತಡ. ಆಗ ನೀವು ರಾಜೀವಿ ಜೊತೆಗಿರಬಹುದು. ನಾನು, ಜನಾರ್ಧನಯ್ಯ ಕಚೇರೀಲಿ ಇರಬಹುದು"

"ಅದೀಗ ಸರಿಯಾದ ಏರ್ಪಾಟು" ಎಂದ ಜನಾರ್ಧನ.

"ನನಗೂ ಹಾಗೇ ಅನ್ನಿಸಿದೆ. ಮಕ್ಕಳು ಬಂದರೆ ಅವನ್ನೆತ್ತಿ ಆಡಿಸಿ ಕಾಲ ಕಳೆಯಬಹುದು...."

ಈ ಮಾತು ಹೇಳಿದಾಗ ಜನಾರ್ಧನಯ್ಯ ತಲೆ ತಗ್ಗಿಸಿದ. ಸುಶೀಲೆಯ ಮುಖದಲ್ಲಿ ಮಕ್ಕಳಿಲ್ಲದ ಚಿಂತೆಯು ತಾಂಡವವಾಡಿತು. ತಾಯ್ತನದ ಹೊಂಗನಸು ಹಗಲುಗನಸಿನಂತೇ ಆಗಿತ್ತು. ತಾನಿನ್ನು ಪುಟ್ಟ ಕಂದನ ತಾಯಿಯಾದೇನು ಎಂಬ ಆಸೆಯ ಕುಡಿ ಸುಟ್ಟು ಕರಿಯಾಗಿತ್ತು ಅವಳ ಪಾಲಿಗೆ. ನಿರಾಶೆಯ ನಿಟ್ಟುಸಿರು ಬಿಟ್ಟಳು ಸುಶೀಲೆ.

"ಸುಬ್ಬರಾಯರೇ, ಇನ್ನು ರಾಜಮ್ಮನವರು ಬಂದು ನೀವು ಮನೆ ಮಾಡುವವರೆಗೆ ಇಲ್ಲಿಗೇ ಊಟಕ್ಕೆ ಬರಬೇಕು"

"ಬೇಡ ಜನಾರ್ಧನಯ್ಯ, ನಿಮಗೇಕೆ ವೃಥಾ ತೊಂದರೆ ? "

"ತೊಂದರೆ ಏನು ಬಂತು, ನಿಮಗಾಗಿ ಬೇರೆ ಮಾಡಬೇಕೆ ? ಕಚೇರಿಯ ಹೊತ್ತಿಗೆ ಹೇಗೂ ಅಡಿಗೆಯಾಗಿರುತ್ತದೆ; ಇಬ್ಬರೂ ಒಟ್ಟಿಗೇ ಉಂಡು ಹೊರಡಬಹುದು" ಎಂದವಳು ಸುಶೀಲ.

''ಬೇಡವೆಂದರೆ ನಾವು ಬಿಡುವವರಲ್ಲ–ಅದು ಹೇಗೆ ನೀವು ಬೇರೆ ಅಡಿಗೆ ಮಾಡುವಿರೋ ನೋಡುತ್ತೇನೆ''

''ಈ ಬೆದರಿಕೆಗೆ ಖಂಡಿತ ಹೆದರದೆ ಯತ್ನವಿಲ್ಲ....''

"ಅಡಿಗೆಯಾಗಿದೆಯೇನು? ನಿನ್ನ ಮಾತಿನಲ್ಲಿ ಒಂದು ಲೋಟ ಕಾಫಿ ಕೂಡ ಮಾಡಿಕೊಡಲು ಮರೆತುಹೋಯಿತೆ?''

"ನೀರು ಇಟ್ಟಿದ್ದೇನೆ, ಈಗ ಹಾಕಿಕೊಡ್ತೇನೆ"

"ಇಷ್ಟುಹೊತ್ತಿನಲ್ಲಿ ಎಂಥ ಕಾಫಿ?"

"ಅಡಿಗೆಯಾಗುವವರೆಗೆ ಅದು ಇದ್ದರೇ ಮೇಲು"

ಸೊಗಸಾದ ಕಾಫಿ ಬಂತು. ಕುಡಿದು ಜನಾರ್ಧನಯ್ಯ, ಸುಬ್ಬರಾಯ ಮುಸಾಫರ್ ಖಾನೆಯ ಬಳಿ ಹೋಗಿ ಬರುವುದಾಗಿ ಹೇಳಿ ಹೊರಟರು.

ವಾಪಸ್ಸು ಬರುವವೇಳೆಗೆ ಸೊಂಡಿಗೆ ಕರಿದು ಆಲೂಗಡ್ಡೆ ಹಾಕಿ ಖಾರವಾಗಿ ಹುಳಿ, ಪಡವಲಕಾಯಿ ಪಲ್ಯ, ಅನ್ನ ಇಷ್ಟು ಅಡಿಗೆ ಮಾಡಿ ಎಲೆ ಹಾಕಿ ಕಾದಿದ್ದಳು. ಇಬ್ಬರೂ ಕಂಠಬಿರಿಯ ಊಟ ಹೊಡೆದರು. ಅಡಿಗೆ ತುಂಬಾ ರುಚಿಯಾಗಿತ್ತು. ಎರಡೆರಡು ಸಲ ಹುಳಿಯನ್ನಕ್ಕೆ ಎಣ್ಣೆ ಹಾಕಿಕೊಂಡು ಸುಬ್ಬರಾಯ ಊಟ ಮಾಡಿದ. ಉಪಚಾರ ಮಾಡಿ ಬಡಿಸಿದಳು ಸುಶೀಲೆ.

ಮೊಳಕಾಲ್ಮೂರಿನ ಜೀವನದ ಮಟ್ಟ ಹೇಗೆಂದು ಕೇಳಿ ತಿಳಿದುಕೊಂಡ. ಹಾಲು ರೂಪಾಯಿಗೆ ಎಂಟು ಸೇರೆಂದಾಗ ಚಳ್ಳಕೆರೆಯಷ್ಟೆ ಎಂದೆನಿಸಿತು. ಸಾಮಾನ್ಯವಾಗಿ ಬೇಕಾದ ಸಾಧಾರಣ ಸಾಮಾನುಗಳೆಲ್ಲಾ ಸಿಕ್ಕುತ್ತಿದ್ದವು. ಹೆಚ್ಚಿನ ಅಪುರೂಪದ ವಸ್ತುಗಳಿಗೆ ರಾಯದುರ್ಗಕ್ಕೋ ಬಳ್ಳಾರಿಗೋ, ಚಿತ್ರದುರ್ಗಕ್ಕೋ ಹೋಗುವವರಿಂದ ತರಿಸಿಕೊಳ್ಳಬೇಕು.

ಅಲ್ಲಿನವರೆಲ್ಲ ಬಹುಮಂದಿ ನೇಕಾರರು. ಸೊಗಸಾದ ರೇಷ್ಮೆ ಮೊಗುಟಗಳು, ಸೀರೆಗಳು ತಯಾರಾಗುತ್ತಿದ್ದವು. ಅಲ್ಲಿನವರು ಸ್ವತಃ ಮಿಶ್ರಮಾಡಿ ತಯಾರಿಸುತ್ತಿದ್ದ ಬಣ್ಣ ಪರಮಾಯಿಷಿಯದಾಗಿರುತ್ತಿತ್ತು. ಕೈಮಗ್ಗದಲ್ಲಿ ನೇಯಿದ ಸೀರೆಗಳ ನುಣುಪು, ರಂಗು, ಜರಿ, ಕಣ್ಣಿಗೊಪ್ಪುವಂತೆ ಮನ ಸೆಳೆಯುವಂತೆ ಇರುತ್ತಿದ್ದವು. ತಲೆ ತಲಾಂತರದಿಂದ ಸಾಧಿಸಿದ ನೆಯ್ಗೆಯನ್ನು ಒಂದು ಕಲೆಯಂತೆ ರೂಢಿಸಿಕೊಂಡು ಬಂದಿದ್ದರು ಅಲ್ಲಿನ ನೇಕಾರರು.

ಕೆಲವೇ ಮಂದಿ ಮಾಸ್ತರು, ಡಾಕ್ಟರು, ಕಚೇರಿಯ ಅಧಿಕಾರಿಗಳು ಗುಮಾಸ್ತರು ಇವರನ್ನುಳಿದು ಮಿಕ್ಕವರೆಲ್ಲಾ ನೇಕಾರರು. ಕೆಲವು ಮಂದಿ ಇತರ ವ್ಯಾಪಾರಸ್ಥರು. ಸಾಧಾರಣವಾಗಿ ಪ್ರತಿ ಮನೆಯ ಮುಂದೂ ಬಣ್ಣದ

ವಾಡೆಗಳು. ನಡುಮನೆಯಲ್ಲಿ ಎರಡೋ ಮೂರೋ ಅವರ ಶಕ್ತ್ಯಾನುಸಾರ ಮಗ್ಗಗಳು. ಮನೆಮಂದಿಯೆಲ್ಲಾ ಒಂದಲ್ಲ ಒಂದು ನೇಯಿಗೆ ಕೆಲಸದ ಉಪ ಕಾರ್ಯದಲ್ಲಿ ತೊಡಗಿರುವರು. ಹೆಣ್ಣುಮಕ್ಕಳು ರಾಟೆ ಹಿಡಿದು ರೀಲು ಸುತ್ತು ವರು, ಊಕೆ ಸುತ್ತುವರು, ಪಾರ ವಿಂಗಡಿಸುವರು, ತಯಾರಾದ ಸೀರೆಯ ಮಡಿಕೆ, ಗಂಟು ತೆಗೆಯುವುದು ಇತ್ಯಾದಿ ಸದಾ ಜೇನು ಹುಳಗಳಂತೆ ಆ ನೇಕಾರ ಹೆಣ್ಣುಮಕ್ಕಳು ಕೆಲಸದಲ್ಲಿ ನಿರತರಾಗಿರುತ್ತಿದ್ದರು.

ಚಿತ್ರ ವಿಚಿತ್ರ ಬಳ್ಳಿ ಕಸೂತಿ ಇರುವ ಜರತಾರಿಯ ಸೆರಗು ನೇಯು ವುದು ಬಹು ಕುಶಲವಾದ ಕಲೆ. ಮೊದಲು ಕಾಗದದಲ್ಲಿ ಚಿತ್ರಿಸಿಕೊಂಡು, ಪ್ರತ್ಯೇಕ ವಿಧಾನದಿಂದ ಕಣ್ಣಲ್ಲಿ ಕಣ್ಣಿಟ್ಟು ವಿಶಿಷ್ಟ ಕುಶಲತೆಯಿಂದ ನೇಯು ವರು. ಅಂಚು, ಸೆರಗು ನೇಯುವುದರಲ್ಲಿ ಮೊಳಕಾಲ್ಮೂರು ನೇಕಾರರು ತೋರಿಸುವ ಜಾಣ್ಮೆ ಇನ್ನೆಲ್ಲೂ ಕಾಣಬರುವುದಿಲ್ಲ.

ಮಧ್ಯಮ ವರ್ಗದ ನೌಕರುದಾರರ ಸಂಸಾರಗಳಂತೆ ಒಬ್ಬನು ದುಡಿದು ಅದನ್ನು ಕಬಳಿಸಲು ಸುತ್ತಲಿದ ಅವನ ಅವಲಂಬಿಗಳಂತಲ್ಲ ಇಲ್ಲಿನ ಸಂಸಾರಗಳು. ಮನೆಯ ಪ್ರತಿ ವ್ಯಕ್ತಿಯೂ ನಿರ್ದಿಷ್ಟ ಕೆಲಸಮಾಡಿ ದುಡಿಮೆಯಲ್ಲಿ ನೆರವಾಗು ತ್ತಿದ್ದುದು ಗಮನಾರ್ಹ.

ಮೊಳಕಾಲ್ಮೂರು ಚಿಕ್ಕ ಚೊಕ್ಕ ಊರು. ಊರ ಹಿಂಬದಿಗೇ ಬೃಹದಾ ಕಾರವಾಗಿ ಹಬ್ಬಿದ ಗುಡ್ಡ. ರೈಲು ಗಾಡಿಯ ಗಡಿಬಿಡಿ ಇಲ್ಲ. ಮೋಟಾರು ಮಾರ್ಗ ಚಿತ್ರದುರ್ಗದಿಂದ ಮೊಳಕಾಲ್ಮೂರು, ರಾಯದುರ್ಗದವರೆಗೆ ಬೆಳಿಗ್ಗೆ ಸಂಜೆ ಎರಡು ಬಸ್ಸುಗಳು ಓಡಾಡುತ್ತಿದ್ದುವು.

ಆ ಸಂಜೆ ಜನಾರ್ಧನಯ್ಯನೊಡನೆ ಊರು ಸುತ್ತಲು ಹೋದ ಸುಬ್ಬ ರಾಯನಿಗೆ ಈ ಎಲ್ಲ ವಿಚಾರಗಳೂ ತಿಳಿದುವು.

"ಕಾಡು ಹರಟೆಯಲ್ಲಿ, ಇನ್ನೊಬ್ಬರ ಮನೆಯವರ ಮೇಲಿನ ಟೀಕೆಯಲ್ಲಿ ಕಾಲ ಕಳೆಯುವ ನಮ್ಮ ಹೆಂಗಸರು ಈ ಊರಿನ ಹೆಣ್ಣುಮಕ್ಕಳನ್ನು ನೋಡಿ ಕಲಿತುಕೊಳ್ಳಬೇಕಾದ್ದಿದೆ" ಎಂದ ಸುಬ್ಬರಾಯ.

"ನಮ್ಮ ಮನೆ ಹೆಂಗಸರು ಇದೆಲ್ಲ ಮಾಡುತ್ತಾರೆಯೇ-ನಮ್ಮಲ್ಲಿ ರೂಢಿಯೇ ಬಾರದ್ದು ಹೊಸದಾಗಿ ಕಲಿಯಲು ಸಾಧ್ಯವೆ ? "

"ಇಂಥಾ ರೂಢಿಗಳಿಂದಲೇ ನಾವು ಬಡವರಾಗಿ ಉಳಿದಿರುವುದು"

"ನಮ್ಮವರಿಗೆ ಇದು ಸಾಧ್ಯವೆ ?"

"ಯಾಕೆ ಸಾಧ್ಯವಿಲ್ಲ ? ಜಾಸ್ತಿ ಮಗ್ಗಗಳಿರುವ ಮನೆಗಳವರಿಗೆ ರೀಲು ಸುತ್ತಿ ಕೊಡುವುದು, ಇನ್ನಿತರ ಚಿಕ್ಕಪುಟ್ಟ ಕೆಲಸಮಾಡಿಕೊಟ್ಟು ಸಹಾಯ ಮಾಡಬಾರದೇ ? ಅವರು ಅದಕ್ಕೆ ತಕ್ಕ ಪ್ರತಿಫಲ ಕೊಟ್ಟೇ ಕೊಡುತ್ತಾರೆ"

"ಹೀಗೆ ಮಾಡುವುದು ನಮ್ಮವರಿಗೆ ಹೇಗೆ ಸಾಧ್ಯ ?"

"ಯಾಕೆ ಸಾಧ್ಯವಿಲ್ಲ ?"

"ನೀವು ಹೇಳೋದು ಚೆನ್ನಾಗಿದೆ. ಈಗ ಸುಶೀಲೆ ಕುಟಿಗೆ ಸುತ್ತಬೇಕೂಂತ ನಿಮ್ಮ ಅಭಿಪ್ರಾಯವೆ ?"

"ಹಾಗಲ್ಲ-ಗಂಡಸಿನ ದುಡಿತಕ್ಕೆ ಜೋತು ಬೀಳುವುದಕ್ಕಿಂತ ತಾವೂ ಸ್ವತಂತ್ರ ದುಡಿಯುವ ಮಾರ್ಗ ಕಲ್ಪಿಸಿಕೊಂಡು ಸುಖವಾದ ಸಂಸಾರ ನಿರ್ವಹಣೆಗೆ ಅನುಕೂಲರಾಗಬೇಕು"

"ಈಗಿನ ಪರಿಸ್ಥಿತಿಯಂತೆ ಅದು ಸಾಧ್ಯವಿಲ್ಲ"

ಎಂದು ಕಡ್ಡಿ ಮುರಿದಂತೆ ಹೇಳಿದ ಜನಾರ್ಧನ. ಸುಬ್ಬರಾಯನಿಗೂ ಅವನ ಮಾತು ನಿಜವಾಗಿ ಕಂಡಿತು. ಆದರೂ ಹೀಗೆಂದು ನಿರ್ದಿಷ್ಟ ಪರಿಹಾರ ತೋರಿಸಲಾಗದ ಸುಬ್ಬರಾಯನಿಗೆ ಹೆಂಗಸು ಕೂಡ ಗಂಡನೊಡನೆ ಸಂಸಾರದ ಆರ್ಥಿಕ ಪರಿಸ್ಥಿತಿಯನ್ನು ಉತ್ತಮಪಡಿಸಲು ಸಹಕಾರಿಯಾಗಬೇಕೆಂದು ಮಾತ್ರ ಅವನಿಗೆ ಹೊಳೆಯುತ್ತಿತ್ತು.

## ೧೮

ಜನಾರ್ಧನಯ್ಯ ಇದ್ದ ಮನೆಗೂ ಈ ದೆವ್ವದ ಮನೆಗೂ ಒಂದೇ ಬೇಲಿ ಅಡ್ಡವಾಗಿತ್ತು. ಆ ಬೇಲಿ ಕಟ್ಟಿದಾಗ ಬಲವಾಗಿದ್ದಿರಬೇಕು. ಬೊಂಬು ನೆಟ್ಟು ಅಡ್ಡ ಬಿದಿರು ಬಿಗಿದು ಅದರ ಬದಿಗೆ ಉದ್ದಕ್ಕೂ ಸೀಮೆ ಕಳ್ಳಿ ನೆಟ್ಟಿದ್ದರು. ಈಗ ಕಳ್ಳಿ ಬೆಳೆದು ದೊಡ್ಡದಾಗಿ ಕೆಲವುಕಡೆ ಬೆಳೆದಿದೆ. ಹಾಗೇ ಆ ಬೇಲಿ ಹಿತ್ತಲಕಡೆ ಸಾಗಿದಂತೆ ಕಳ್ಳಿ ಅಲ್ಲಲ್ಲಿ ಮಾತ್ರ ಬೆಳೆದು ಭಾವಿಯ ಬಳಿ ಎರಡು ಮನೆಯ ಹಿತ್ತಲಿಗೂ ಧಾರಾಳವಾಗಿ ಓಡಾಡುವಷ್ಟು ಜಾಗ ಬಿಟ್ಟಿತ್ತು. ಸುಬ್ಬರಾಯ ಅಲ್ಲಿಗೆ ಬರುವ ಮೊದಲು ಮೇಸ್ಟ್ರು ಈಶ್ವರಯ್ಯ ಅನ್ನೋರು ಇದ್ದರು; ಅವರ ಹೆಂಡ್ತಿಗೆ ವೈಮೇಲೆ ದೆವ್ವ ಬರುತ್ತಿತ್ತು. ರಾತ್ರಿಯೆಲ್ಲಾ ಕೂಗೂ ಅಳು ನಗು ಮಧ್ಯೆ ಈಶ್ವರಯ್ಯ ಮಾಡಿಸುತ್ತಿದ್ದ ಮಂತ್ರ ತಂತ್ರಗಳ ಹಾವಳಿಯಲ್ಲಿ ಜನಾರ್ಧನಯ್ಯ ಹಣ್ಣುಗಾಯಿ ನೀರುಗಾಯಿ ಆಗಿದ್ದ. ಪಾಪ ಮನುಷ್ಯ ಕಷ್ಟದಲ್ಲಿದ್ದಾನೆ ಇವತ್ತು ನಾಳೆ ಸರಿಹೋದೀತೆಂದು ಮೂರು ತಿಂಗಳು ಕಾದು ನೋಡಿದ. ದೆವ್ವ ಹೋಗಲಿಲ್ಲ, ಅದು ಇದ್ದರೆ ಚಿಂತೆಯಿಲ್ಲ ನಮಗೇನು ಎಂದು ಸುಶೀಲೆ ಸಮಾಧಾನವಾಗೇ ಇದ್ದಳು. ಆದರ ಜೊತೆ ದೊಡ್ಡ ದೆವ್ವ ಬಂದು ಜನಾರ್ಧನನ ಮನೆಯನ್ನೇ ಕಾಡತೊಡಗಿತು. ಆ ದೊಡ್ಡ ದೆವ್ವ ಮತ್ಯಾರೂ ಆಗಿರದೆ ಈಶ್ವರಯ್ಯನ ಅತ್ತೆಯೇ ಆಗಿದ್ದಳು. ಈ ಮಹತಾಯಿಗೆ ಆ ಮನೆ ಈ ಮನೆಯ ಬೇಧವೇ ಇರಲಿಲ್ಲ. ಮುಂಜಾನೆ ಕಸಗುಡಿಸಿ ಪಕ್ಕದ ಮನೆ ಮುಂದೆ ಎಸೆಯುವಳು. ಭಾವಿಯಲ್ಲಿ ನೀರು ಸೇದಲು ನಿಂತಳೆಂದರೆ ಸುಶೀಲೆಗೆ ಒಂದು ಕೊಡ ಸಿಕ್ಕುವುದೂ ಕಷ್ಟವಾಯಿತು. ಇಷ್ಟಕ್ಕೂ ಭಾವಿ ಇದ್ದದ್ದು ಇಬ್ಬರ ಮನೆಗೂ ನಡುವೆ. ಒಬ್ಬನೇ ಎರಡು ಮನೆಗಳನ್ನು ಕಟ್ಟಿಸಿದ್ದ ಬಾಡಿಗೆಗೆ. ಈಶ್ವರಯ್ಯನ ಅತ್ತೆಮ್ಮ ತನ್ನ ಮನೆ ದನದ ಕಸಮುಸುರೆಯನ್ನು ನಿಸ್ಸಂಕೋಚವಾಗಿ ಜನಾರ್ಧನಯ್ಯನ ಹಿತ್ತಲಲ್ಲಿ ರಾಶಿ ಹಾಕುವಳು. ಅದೇ ಜನಾರ್ಧನಯ್ಯನ ಹೆಂಡತಿ ಕೊಂಚ ಏನಾದರೂ ಬಲವಾಗಿ ಈ ಮನೆ ಕಡೆ ಸೀನಿದರೆ ಆಕ್ಷೇಪಣೆ ಮಾಡುವಳು. ಒಂದು ದಿನ ಸುಶೀಲೆ ಇವತ್ತು ಈ ದೆವ್ವವನ್ನು ಬಿಡಿಸೇಬಿಡಬೇಕೆಂದು ಮುದುಕಿಯನ್ನು ತರಾಟೆಗೆ ತೆಗೆದುಕೊಂಡಳು.

ಅಲ್ಲಿಂದ ಜನಾರ್ಧನಯ್ಯನಿಗೂ ಈಶ್ವರಯ್ಯನಿಗೂ ಕೈಕೈ ಮಿಲಾಯಿಸಿತು. ಮನೆಯ ಮಾಲೀಕ ಮಹದೇವಯ್ಯನೆ ಬರಬೇಕಾಯಿತು. ಎರಡು ಮನೆಗೂ ನಡುವೆ ಬೇಲಿ ಹಾಕಿಸಬೇಕೆಂದು ಸರ್ವಾನುಮತದಿಂದ ಅಂಗೀಕಾರ ವಾಯಿತು. ಮರುದಿನವೇ ಬೊಂಬು ನೆಡಿಸಿ, ಗಳ ಸೀಳಿಸಿ ಬಿಗಿಸಿ, ಬಂದೋ ಬಸ್ತಾದ ಅಡ್ಡ ಬೇಲಿ ಕಟ್ಟಿಸೇಬಿಟ್ಟರು ಮಹದೇವಯ್ಯನವರು. ಆದರೂ ಬೇಲಿ ದಾಟಿ ಕೆಲವು ದಿನ ಕಸ ಕಡ್ಡಿ ಬಿತ್ತು. ಅದೇನೋ ಆ ಮುದುಕಿಗೆ ನೆರೆಮನೆಯವರಿಗೆ ಕಿರುಕುಳ ಕೊಡಬೇಕೆಂದರೆ ಬಹು ಆಪ್ಯಾಯಮಾನ.

ಜನಾರ್ಧನಯ್ಯನ ಅದೃಷ್ಟವೋ ಅಥವ ಈಶ್ವರಯ್ಯನ ದುರದೃಷ್ಟವೋ ಹಿಡಿದ ದೆವ್ವ ಬಿಡಲಿಲ್ಲ. ತಿಳಿದ ಪುಣ್ಯಾತ್ಮರು ಈಶ್ವರಯ್ಯನಿಗೆ ಹಾಳು ರಾಮೇಶ್ವರದಲ್ಲಿ ಗುರುಗಳೊಬ್ಬರಿದ್ದಾರೆ, ಅವರ ಸೇವೆ ಮಾಡಿದರೆ ಈ ದೆವ್ವ ಭೂತಗಳು ಓಡಿಹೋಗುತ್ತವೆಂದು ತಿಳಿಸಿದರು. ಮೇಲಧಿಕಾರಿಗಳ ಕೈಕಾಲು ಕಟ್ಟಿ ಕುಯ್ಯೋ ಮರ್ರೋ ಎಂದು ಹೊಸದುರ್ಗ ತಾಲ್ಲೋಕು ಹಾಳು ರಾಮೇಶ್ವರಕ್ಕೆ ವರ್ಗ ಮಾಡಿಸಿಕೊಂಡು ಹೊರಟು ಹೋದರು.

ಅವರು ಹೋದ ಒಂಮು ತಿಂಗಳು ಮನೆ ಖಾಲಿಯೇ ಬಿದ್ದಿತ್ತು. ಸುಣ್ಣ ಬಣ್ಣ ಮಾಡಿಸಿಟ್ಟರೂ ಈಶ್ವರಯ್ಯನ ಹೆಂಡತಿಗೆ ಹಿಡಿದ ದೆವ್ವ ಮನೆಯ ಮುಂದಿನ ಹುಣಸೇ ಮರದಲ್ಲೇ ಇದ್ದು ಮನೆಗೆ ಬಂದ ಗೃಹಸ್ಥರಿಗೆ ಹಿಡಿಯುವ ಹೆಣ್ಣು ದೆವ್ವವೆಂದು ಜನರಾಡಿಕೊಂಡದ್ದುಂಟು. ಜನಾರ್ಧನಯ್ಯನಿಗೂ ಆ ಮನೆಯ ಬದಿಗೇ ಇರಲು ಭಯ. ಆದರೂ ಸುಶೀಲೆಯ ಧೈರ್ಯದಿಂದ ಅಲ್ಲೇ ಇದ್ದ. ಸುಬ್ಬರಾಯನಿಗೆ ಚಳ್ಳಕೆರೆಯಿಂದ ಮೊಳಕಾಲ್ಮೂರಿಗೆ ವರ್ಗ ವಾದಾಗ ಒಂದು ತಿಂಗಳು ಮನೆಯೇ ಸಿಕ್ಕಲಿಲ್ಲ. ಈಗ ಮನೆಸಿಕ್ಕ ರಾಜಮ್ಮ ಬರುವವರೆಗೂ ಜನಾರ್ಧನಯ್ಯನ ಮನೆಯಲ್ಲಿಯೇ ಊಟ ಮಾಡುತ್ತಿದ್ದ. ಸುಶೀಲೆ ಪಕ್ಕದ ಮನೆಗೇ ಬರುವಂತೆ ಸೂಚಿಸಿದಳು. ಈ ದೆವ್ವ ಭೂತ ಪಿಶಾಚಿಗಳಲ್ಲಿ ನಂಬಿಕೆ ಇಲ್ಲವೆಂದು ಒಂದು ಹೆಂಗಸು ಹೇಳುವಾಗ ತಾವು ಗಂಡಸರು ಅದಕ್ಕೆ ಹೆದರುವುದರಲ್ಲಿ ಅರ್ಥವಿಲ್ಲವೆಂದು ಸುಬ್ಬರಾಯ ಜನಾರ್ಧನಯ್ಯ ಒಂದು ಸಂಜೆ ಕಚೇರಿಯಿಂದ ಮುಂಚೆ ಹೊರಟು ನೇರವಾಗಿ ಮನೆಯ ಮಾಲೀಕ ಮಹದೇವಯ್ಯನ ಮನೆಗೆ ಹೋದರು. ಇವರನ್ನು ಕಂಡ ಮಹ

ದೇವಯ್ಯ ಮಗ್ಗದ ಕುಳಿಯಿಂದ ಎದ್ದು ಬಂದು ಹೊರಗಡೆ ಕಟ್ಟೆಯ ಮೇಲೆ ಈಚಲ ಚಾಪೆ ಹಾಕಿ ಕೂಡಿಸಿದ.

"ಬಂದ ವಿಚಾರ ಏನು ತಿಳಿಯಲಿಲ್ಲ; ಮದುವೆ ಮುಂಜಿಗಳಿಗೆ ಏನಾದರೂ ರೇಷ್ಮೆ ಮೊಗುಟ, ಸೀರೆ ಬೇಕಾಗಿತ್ತೆ...." ಎಂದು ಕಚ್ಚೆಹಾಕಿ ಉಟ್ಟ ಕಾಫಿ ಬಣ್ಣಕ್ಕಿಳಿದ ಪಂಚೆಯ ನೆರಿಗೆಯ ತುದಿಯಲ್ಲಿನ ಅಂಚಿನ ಕೊನೆಯಿಂದ ಸೀರೆ ಸೆರಗು ಹೊದ್ದಹಾಗೆ ಮೇಲೆ ಹೊದ್ದುಕೊಂಡು ವಿನಯದಿಂದ ವಿಚಾರಿಸಿದ.

"ಅಂಥಾದ್ದೇನೂ ಇಲ್ಲ ಮಹದೇವಯ್ಯನವರೇ, ಇವರು ನಮ್ಮ ಆಫೀಸಿಗೆ ಹೊಸದಾಗಿ ಬಂದಿದ್ದಾರೆ. ಇವರಿಗೆ ಮನೆ ಬೇಕಾಗಿದೆ. ಆಚೆ ಬೀದೀಲಿರೋ ನಿಮ್ಮ ಮನೆ ಅದೇ, ನಮ್ಮ ಮನೆ ಪಕ್ಕದ್ದು ಕೊಡ್ತೀರಾ?"

"ಧಾರಾಳವಾಗಿ ಸ್ವಾಮಿ. ಸೊಗಸಾದ ಮನೆ ಅದು, ಆ ಈಶ್ವರಯ್ಯ ತನ್ನ ದೆವ್ವಾನ ಅಲ್ಲೆ ಬಿಟ್ಟು ಹೋಗಿದ್ದಾನೇಂತ ಜನ ಹುಟ್ಟಿಸಿದ್ದಾರೆ ಅಷ್ಟೆ. ಸುಣ್ಣ ಬಣ್ಣ ಮಾಡಿಸಿ ತಯಾರಾಗಿದೆ. ನಿಮ್ಮಂಥವರ ಅನುಕೂಲಕ್ಕೇ ನಾನು ಕಟ್ಟಿ ಸಿದೋದು ಮನೇನ"

"ಖಂಡಿತ ದೆವ್ವ ಇಲ್ಲಾಂತೀರಾ–ನಾನು ಮಕ್ಕಳೊಂದಿಗಾ ಸ್ವಾಮಿ"

"ಆ ಭಯವೇ ಬೇಡ ಸ್ವಾಮಿ ಎರಡು ತಿಂಗಳು ಇರಿ, ನೋಡಿ ಆ ಮೇಲೆ ಬಾಡಿಗೆ ಕೊಡಿ"

"ಎಷ್ಟು ಬಾಡಿಗೆ ಅದಕ್ಕೆ...."

"ಈಶ್ವರಯ್ಯ ನಾಲ್ಕು ರೂಪಾಯಿ ಕೊಡೋರು; ನೀವು ಮೂರೇ ಕೊಡಿ ಸ್ವಾಮಿ...."

"ಸರಿ ಹಾಗಾದರೆ ಭಯಗಿಯ...."

"ಎರಡು ದಿನ ಅಲ್ಲಿದ್ದು ನೋಡೀಂತ ಹೇಳ್ತಾ ಇದ್ದೀನಿ–ಮನೆ ಅಪರಂಜಿ ಸ್ವಾಮಿ ನೋಡಿ. ಇನ್ನು ಒಂದು ತಿಂಗಳು ನಾನು ನೋಡ್ತೀನಿ, ಯಾರೂ ಬರ ಲಿಲ್ಲವೋ ಎರಡು ಮಗ್ಗ ಹಾಕಿಸಿಬಿಡ್ತೀನಿ ಇಲ್ಲವೆ ಬಣ್ಣ ಕಲಸೊ ವಾಡೆ ಹೂಳಿಸಿಬಿಡ್ತೀನಿ...."

"ವಾಸಕ್ಕೇಂತ ಕಟ್ಟಿದ್ದು ಯಾಕೆ ಹಾಗೆ ಮಾಡ್ತೀರ? ಬೀಗದ ಕೈ ಕೊಡಿ"

"ನಾಳೆ ಗುರುವಾರ ಮನೆಗೆ ಬಂದುಬಿಡಿ ನಾನೇ ಕಚೇರಿಗೆ ಬಂದ

ಬೀಗದಕೈ ಕೊಡ್ತೀನಿ, ಇನ್ನೊಂದುಸಲ ಚೆನ್ನಾಗಿ ಚೊಕ್ಕಟ ಮಾಡಿಸಿ ಕೊಡ್ತೇನೆ"

"ಹಾಗೇ ಆಗಲಿ ನೀವು ಹೇಳೋದೂ ಸರಿಯೆ. ಅಡ್ವಾನ್ಸು ಗಿಡ್ವಾನ್ಸೂ........"

"ಛೆ ಛೆ ಛೆ–ಏನೂ ಬೇಡ ಸ್ವಾಮಿ. ತಾಲ್ಲೋಕು ಆಫೀಸು ಗುಮಾಸ್ತ ರೂಂದರೆ ನನಗೆ ನಂಬಿಕೆ–ತಿಂಗಳು ತಿಂಗಳಿಗೆ ಮೂರು ರೂಪಾಯಿ ನನ್ನ ಕೈಗೆ ಹಾಕಿಬಿಡಿ ಸಾಕು"

"ತುಂಬಾ ಉಪಕಾರ ಮಾಡಿದಿರಿ ಮಹದೇವಯ್ಯ"

"ನಂದೇನಿದೆ ಸ್ವಾಮಿ ಉಪಕಾರ, ದೆವ್ವದ ಮನೆ ಅನ್ನೋ ಹೆಸರು ಹೋಗಿ ನಾಲ್ಕು ದಿನ ನಿಮ್ಮಂಥ ಮಕ್ಕಳಂದಿಗರು ಸಂಸಾರ ಮಾಡ್ಕೊಂಡಿದ್ದರೆ ಸಾಕು ....ಅಲ್ಲಿ ಇರ್‍ತಿನೀಂತ ನೀವು ಅಂದದ್ದು ನನಗೇ ಉಪಕಾರ ಮಾಡಿದ ಹಾಗಿದೆ"

"ಒಳ್ಳೇದು....ಬರೋಣವೇ...."

"ನಮಸ್ಕಾರ"

"ಶರಣು"

ಗುರುವಾರ ಮುಂಜಾನೆ ಸ್ವತಃ ಮಹದೇವಯ್ಯನೇ ಬಂದು ಮುಸಾಫರ್ ಖಾನೆಯಲ್ಲಿ ಮಲಗಿದ್ದ ಸುಬ್ಬರಾಯನನ್ನು ಎಬ್ಬಿಸಿ ಬೀಗದ ಕೈ ಕೊಟ್ಟು ಹೋದ.

ಜನಾರ್ಧನಯ್ಯನ ಹೆಂಡತಿ ಸುಶೀಲಮ್ಮ ಮನೆಯನ್ನೆಲ್ಲಾ ಸಾರಿಸಿಸಿ ರಂಗೋಲು ಹಾಕಿಸಿದರು. ಊರ ಪುರೋಹಿತರನ್ನು ಕರೆದು ಹೋಮ ಗೀಮ ಮಾಡಿಸಿ ಶುದ್ಧ ಪುಣ್ಯೋಚನೆ ಮಾಡಿಸಿದರು. ಸುಬ್ಬರಾಯ ದೇವರು ಮನೆಯ ಗೂಡಿನಲ್ಲಿ ಪಟ್ಟಾಭಿರಾಮ ದೇವರ ಫೋಟೊ ಮತ್ತು ತಿರುಪತಿ ಶ್ರೀ ವೆಂಕಟ ರಮಣ ಸ್ವಾಮಿ ಚಿತ್ರ ಇಟ್ಟು ದೀಪ ಹಚ್ಚಿದ. ರಾಜಮ್ಮ ಬಂದಮೇಲೆ ಎಲ್ಲಾ ಮಾಡಿದರಾಯಿತೆಂದು ಎಷ್ಟು ಹೇಳಿದರೂ ಕೇಳದೆ ಸುಶೀಲಮ್ಮ ಪಾತ್ರೆ ಪಡಗ ಬಿಚ್ಚಿ ಜೋಡಿಸಿ ಕೊಡುವುದರಲ್ಲಿ ಸಹಾಯ ಮಾಡಿದರು. ಜನಾರ್ಧನಯ್ಯ ಸಂಜೆ ಬಂದು ಎಲ್ಲಾ ವ್ಯವಸ್ಥೆ ನೋಡಿಕೊಂಡರು. ಸುಬ್ಬರಾಯನೇ ಮಾತು ತೆಗೆದ.

"ಜನಾರ್ಧನಯ್ಯ–ನಿಮ್ಮ ಉಪಕಾರ ಮರೆಯೋಹಾಗಿಲ್ಲ"

"ಏನು ಅಂಥಾ ಉಪಕಾರ ಈಗ ನಾವು ಮಾಡಿರೋದು ಬಿಡ್ರಿ"

"ಅಣ್ಣ ತಮ್ಮ ಈಗಿನ ಕಾಲದಲ್ಲಿ ಆಗೋಲ್ಲ, ಅಂಥಾದ್ದರಲ್ಲಿ ಬೆಳಗಿನಿಂದ ಸುಶೀಲಮ್ಮನೋರು ನಮ್ಮ ಮನೆ ಸರಿಮಾಡೋದರಲ್ಲೇ ಇದ್ದಾರೆ."

"ಹಾಗೇ ನಿಮಗೆ ನಾವು ನಮಗೆ ನೀವು-ಇವತ್ತಿದ್ದು ನಾಳೆ ಹೋಗೋ ಈ ನೀರ ಮೇಲಿನ ಗುಳ್ಳೆ ಹಾಗಿರೋ ಈ ಜೀವ ಇರೋತನಕ ನಾಲ್ಕುಜನಕ್ಕೆ ಅಯ್ಯೋ ಅಂದು ಕೈಲಾದ ಉಪಕಾರ ಮಾಡೋದೇ ಒಳ್ಳೇದೂಂತ ನನ್ನ ನಂಬಿಕೆ."

"ಜನಾರ್ಧನಯ್ಯನವರೇ ಅಪರಂಜಿಯಂಥ ಮಾತಾಡಿದಿರಿ ಎಲ್ಲಕ್ಕಿಂತ ಸುಶೀಲಮ್ಮನವರ ಉತ್ಸಾಹ ನೋಡಿದರೆ ರಾಜೀವಿಯಲ್ಲಿ ಅವರು ಎಷ್ಟು ಪ್ರೀತಿ ಇಟ್ಟಿದ್ದಾರೆ ಅನ್ನೋದು ಅರ್ಥವಾಗುತ್ತೆ"

ಹಾಗೆನ್ನುವುದಕ್ಕೂ ಸುಶೀಲಮ್ಮ ಬರುವುದಕ್ಕೂ ಸರಿಹೋಯಿತು. ಸುಬ್ಬರಾಯ ತನ್ನ ವಿಷಯ ಮಾತಾಡಿದ್ದು ಒಂದುತರಹ ಅನ್ನಿಸಿತು ಆಕೆಗೆ. ಯಾವುದೊ ಒಳಮನಸ್ಸು ರಾಜೀವಿಗಲ್ಲ ಸುಬ್ಬರಾಯನಿಗೇ ಈ ಎಲ್ಲ ಅಣಿ ಮಾಡಿದ್ದು ಎಂದು ಹೇಳಿದಂತಾಯಿತು. ಈ ಮನಸ್ಸಿಗೆ ತಾನೇ, ನಾಚಿ ಕೊಂಡು 'ಛೆ ಎಂಥಾ ಯೋಚನೆ ಇದು' ಎಂದುಕೊಂಡು ತುಂಬಿದ ನೀರಿನ ಕೊಡವನ್ನು ಅಡಿಗೆಮನೆಯಲ್ಲಿಟ್ಟು "ಬನ್ನಿ ಎಲೆ ಹಾಕಿದೆ" ಎಂದು ಯಜ ಮಾನರನ್ನು-ಸುಬ್ಬರಾಯನನ್ನೂ ಕರೆದು ಹೊರಟುಹೋದಳು.

ರಾತ್ರಿ ಊಟ ಮುಗಿಸಿ ಎಲೆಅಡಿಕೆಹಾಕಿಕೊಂಡು ಸುಬ್ಬರಾಯನ ಮನೆಗೇ ಬಂದರು. ಬೇಗ ರಾಜೀವಿಯನ್ನು ಕರೆಸಬೇಕೆಂದು ಸುಬ್ಬರಾಯ ಎಣಿಕೆ ಹಾಕುತ್ತಿದ್ದ. ಹೆಂಡತಿಯನ್ನು ಬಿಟ್ಟಿರುವುದೆಂದರೆ ಅವನಿಗೆ ತಲೆನೋವು. ಈಗ ಯತ್ನವಿಲ್ಲದೆ ಇರಬೇಕಾಗಿತ್ತು. ರಾಜಮ್ಮ ಹೆತ್ತು ಆಗಲೆ ಐದು ತಿಂಗ ಳಾಗಿತ್ತು. ರಾಜಮ್ಮ ಕೂಡ ಎಂದು ಕರೆಸಿಕೊಳ್ಳುವಿರಿ-ನಿಮ್ಮ ಮಗಳು ಮತ್ತು ಮಗ ನಿಮ್ಮನ್ನು ನೋಡಲು ತುಂಬಾ ಕಾತುರರಾಗಿದ್ದಾರೆ ಎಂದು ಕಾಗದ ಬರೆದಿದ್ದಳು. ಕಾತುರತೆ ಇದ್ದದ್ದು ಐದು ತಿಂಗಳ ಬತ್ತಿ ಶಾಮಣ್ಣನಿ ಗಲ್ಲ ಅದರ ಅಮ್ಮ ರಾಜಿವಿಗೇ ಎಂದು ಸುಬ್ಬರಾಯನಿಗೆ ಅರ್ಥವಾಗದಿರಲಿಲ್ಲ. ಇದೆಲ್ಲಕ್ಕಿಂತ ಸುಶೀಲಮ್ಮನ ಉಪಚಾರ-ಆಕೆಯ ನೋಟ ಆಕೆಯ ನಿಲುವು

ರಾಜೀವಿ ಬೇಗ ಬಂದರೇ ಉತ್ತಮವೆಂದು ಸುಬ್ಬರಾಯನಿಗನ್ನಿಸುತ್ತಿತ್ತು. ಅದೇ ಆ ಕರೆಯುವ ಕಣ್ಣಿನ ನೋಟ. ಆ ಕಿರುನಗೆ ತುಟಿಗಳ ಮೇಲೆ? ಜನಾರ್ಧನಯ್ಯನಿಗೆ ಬೆನ್ನಲ್ಲಿ ಇರಿಯುವ ಕೆಲಸ ತನ್ನಿಂದಾಗಬಾರದೆಂದು ಕೂಡಲೇ ರಾಜೀವಿಯನ್ನು ಕರೆಸಿಬಿಡಬೇಕೆಂದೂ ನಿರ್ಧರಿಸಿದ. ಆ ನಿರ್ಧಾರಕ್ಕೆ ಇಂಬು ಕೊಡುವಂತೆ ಮನೆಯೂ ಅಣಿಯಾಗಿತ್ತು. ಈ ಅಚ್ಚುಕಟ್ಟಿನ ಮನೆಯ ವ್ಯವಸ್ಥೆಗೆ ಕಾರಣಳಾದ ಸುಶೀಲ, ಹಾಕಿದ ರಂಗವಲ್ಲಿಯ ಕಣ ಕಣಗಳಲ್ಲೂ ಕಾಣತೊಡಗಿದಳು.

ಮೆಲ್ಲಗೆ ಬೇಲಿಯನ್ನು ದಾಟಿ ಮನೆಯ ಮೆಟ್ಟಲನ್ನು ಹತ್ತಿದಾಗ ಹಿಂದೆಯೇ ಇದ್ದ ಜನಾರ್ಧನಯ್ಯ ತನ್ನ ಮನೆ ಕಡೆ ತಿರುಗಿ ಲಾಂದ್ರ ಹಿಡಿದು ನಿಂತ ಸುಶೀಲೆಗೆ "ನೀನು ಒಳಕ್ಕೆ ಹೋಗಿ ಮಲಗಿಕೋ, ನಾನು ಕೊಂಚ ಹೊತ್ತು ಮಾತಾಡುತ್ತಿದ್ದು ಬರುವೆ" ಎಂದು ಹೇಳಿದ. ಎತ್ತಿ ಹಿಡಿದ ಲಾಂದ್ರದ ಹೊಂಬಣ್ಣದಲ್ಲಿ ಬೆಳಗುತ್ತಿದ್ದ ಅವಳ ಮುಖವನ್ನು ನೋಡಿದಾಗ ಸುಬ್ಬರಾಯನ ಮನಸ್ಸು ಅಲ್ಲೋಲ ಕಲ್ಲೋಲವಾಯಿತು. ಅದೇ ಹೊಳೆಯುವ ಕಣ್ಣು ಅದೇ ಮಂದಹಾಸ.

ಇಕ್ಕಿದ ಬೀಗ ತೆಗೆದು ಮೂಲೆಯಲ್ಲಿ ಚಿಕ್ಕದು ಮಾಡಿಟ್ಟಿದ್ದ ಲಾಂದ್ರದ ಬತ್ತಿಯನ್ನು ದೊಡ್ಡದು ಮಾಡಿದಾಗ ಮಂದವಾದ ಬೆಳಕು ಕೋಣೆ ತುಂಬಾ ಚೆಲ್ಲಿತು. ಹಾಸಿದ ಚಾಪೆಯ ಮೇಲೆ ಇಬ್ಬರೂ ಕುಳಿತರು. ಊಟ ಪ್ರಾರಂಭವಾದಾಗ ಪ್ರಾರಂಭಿಸಿದ ಯಾವುದೋ ಕಚೇರಿಯ ವಿಷಯವನ್ನು ಹೇಳುತ್ತಿದ್ದದು ಮುಗಿದೇ ಇರಲಿಲ್ಲ. ಜನಾರ್ಧನಯ್ಯನ ಜಾಯಮಾನವೇ ಅಷ್ಟು. ಸದಾ ತಾಲ್ಲೋಕಾಫೀಸಿನ ವಿಷಯವನ್ನೇ ಮೆಲುಕುವನು. ಆ ಅರ್ಜಿ, ಆ ತಕರಾರು, ಅಮಲ್ದಾರರ ಅವಾಂತರ, ಸಿರಸ್ತೆದಾರರ ಸುಸ್ತು, ಶೇಕದಾರರ ಸತಾಯಿಸುವಿಕೆ, ಹೆಬ್ಬೆಟ್ಟಿನ ಗುರುತ್ತು ಸರಿಯಾಗಿ ಹಾಕದ ದರಕಾಸ್ತದಾರ ಒಂದೇ ಎರಡೆ? ಇಡೀ ಕಚೇರಿಯೇ ತನ್ನನ್ನು ಅವಲಂಬಿಸಿ ಸದಾ ಅದೇ ವಿಷಯದಲ್ಲಿ ಪ್ರಾಣಿ ಪೇಚಾಡುತ್ತಿದ್ದ.

ಇಸಮು ಭಯಸ್ಥ ಮುಖದ ಮೇಲೆ ಸದಾ ತಪ್ಪು ಮಾಡಿದವರ ಕಳೆ. ಎಲ್ಲಿ ಫೈನು ಹಾಕುವರೋ—ಎಲ್ಲಿ ಬೈಯ್ಯುವರೋ ಸಾಹೇಬರು ಎಂಬ ಭಯ ಹಗಲಿರುಳು ಕಾಡುತ್ತಿತ್ತು. ಅದಕ್ಕೆ ಹನ್ನೊಂದು ಘಂಟೆಗೆ ಕಚೇರಿಗೆ

ಹೋಗುವುದೆಂದರೆ ಮುಂಜಾನೆ ಎಂಟಕ್ಕೇ ಹೋಗಿಬಿಡುವ. ಮತ್ತೆ ಹನ್ನೊಂದರ ಹೊತ್ತಿಗೆ ಬಂದು ಊಟದ ಶಾಸ್ತ್ರ ಮುಗಿಸಿಹೋದರೆ ಮತ್ತೆ ಬರುತ್ತಿದ್ದುದು ಸಂಜೆ ಆರಕ್ಕೆ. ಬಂದು ಸಂಜೆ ಸುಬ್ಬರಾಯನ ಜೊತೆ ಅಡ್ಡಾಡಲು ಹೋದರೆ ಆಗಲೂ ಬರೀ ತಕರಾರು ಅರ್ಜಿ–ಮೂಗರ್ಜಿ ಹೆಡ್ ಮುನ್ಶಿಯ ಹೆಡ್ಡತನ, ಶಿರಸ್ತೇದಾರರ ಸಿಟ್ಟಿನ ವಿಷಯವಲ್ಲದೆ ಬೇರಾವ ವಿಷಯವೇ ಆ ಮಹರಾಯನಿಗೆ ಗೊತ್ತಿರಲಿಲ್ಲವೇನೊ ಎಂದೆನ್ನುವಷ್ಟರಮಟ್ಟಿಗೆ ಹರಟುವ. ತಾನಾಯಿತು, ತನ್ನ ಆಫೀಸಾಯಿತು, ಆಫೀಸಿನ ಮಾತಾಯಿತು ಇವಿಷ್ಟೆ ಆತನ ಜೀವನದ ಆದರ್ಶಗಳು. ನಿಗರ್ವಿ ಮನುಷ್ಯ ನಿಯತ್ತಿನಿಂದ ಕೆಲಸ ನಿರ್ವಹಿಸುತ್ತಿದ್ದರೂ ಆ ಹೆಡ್ ಮುನ್ಶಿ ಸದಾ ಇವನನ್ನೇ ಸತಾಯಿಸುವ. ಇವನು ಹೆದರಿದಷ್ಟೂ ವೈಮೇಲೆ ಕಪ್ಪೆ ಒಗೆದಂತೇ ಮಾತಾಡುವ. ಈತ ಮಾಡಿದ ಯಾವುದೊಂದು ಕೆಲಸವನ್ನೂ ಮೆಚ್ಚಿದ್ದೇ ಇಲ್ಲ ಆ ಮಹರಾಯ. ಈ ವಿಷಯದಲ್ಲಿ ಸುಬ್ಬರಾಯನೇ ಸುಖಿ ಎಂದು ಜನಾರ್ಧನಯ್ಯನ ಅಭಿಮತ. ಸುಬ್ಬರಾಯನ ಶಾಖೆಯ ಮುಖಾಧಿಕಾರಿಗಳಾದ ಶಿರಸ್ತೇದಾರರು ಒಂದು ದಿನಕ್ಕೆ ಸುಬ್ಬರಾಯನನ್ನು ಗದುರಿದವರಲ್ಲ. ಶಿರಸ್ತೆದಾರರೇ ಸಬ್ ರಿಜಿಸ್ಟ್ರಾರರ ಕೆಲಸವಾದ ರಿಜಿಸ್ಟ್ರೇಷನ್ ಶಾಖೆಯನ್ನು ನೋಡಿಕೊಳ್ಳಬೇಕಾಗಿತ್ತು. ಈ ಬಾಬಿನ ಗುಮಾಸ್ತಗಿರಿಯು ಸುಬ್ಬರಾಯನ ಪಾಲಿಗೆ ಬಂದಿತ್ತು.

ಈ ಶಾಖೆಯ ಗುಮಾಸ್ತಗಿರಿ ದೊರಕಿದ್ದು ಅನೇಕರಿಗೆ ಹೊಟ್ಟೆ ಚುರುಕ್ ಎನ್ನಿಸಿತ್ತು. ಈ ಶಾಖೆಯಲ್ಲಿ ಶಾಖಾಯ ಲವಣಾಯಕ್ಕೆ ಬಹು ಹಿತವಾದ ವಾತಾವರಣವಿತ್ತು. ಮೊಳಕಾಲ್ಮೂರು ತಾಲ್ಲೋಕಿನ ಯಾವ ಹೋಬಳಿ ಹಳ್ಳಿಗಳಲ್ಲು ಯಾರಾದರೂ ಯಾರ ಹೆಸರಿಗಾದರೂ ಹೊಲ, ಮನೆ, ತೋಟ, ಗದ್ದೆಗಳನ್ನು ರಿಜಿಸ್ಟರ್ ಮಾಡಬೇಕಿದ್ದರೆ ಸುಬ್ಬರಾಯನ ಸಮ್ಮುಖದಲ್ಲಿ ಹತ್ತಾರು ಪತ್ರಗಳಲ್ಲಿ ಹೆಬ್ಬೆಟ್ಟು ಒತ್ತದಿದ್ದರೆ ವಿಧಿಯೇ ಇರಲಿಲ್ಲ. ಪ್ರತಿ ಇಸಮೂ ಶಿರಸ್ತೆದಾರರಿಗೆ ಅವರ ಪರಿವಾರದ ಸುಬ್ಬರಾಯನಿಗೆ ಇಷ್ಟೂಂತ ಮಾಮೂಲು ಬೀಳುವುದು ತಲೆತಲಾಂತರದಿಂದ ನಡೆದುಬಂದ ಸಂಪ್ರದಾಯ. ಅಂದಮೇಲೆ ಸುಬ್ಬರಾಯನ ಕಾಲಕ್ಕೂ ಆ ಸಂಪ್ರದಾಯ ನಡೆದು ಬರಬೇಕಷ್ಟೆ.

ಈ ಶಾಖಾಯ ಲವಣಾಯ ಜನಾರ್ಧನಯ್ಯನ ಪಾಲಿಗೆ ಶೂನ್ಯವೆಂದು ಭಾವಿಸಬಾರದು. ಹೆಡ್ ಮುನ್ಶಿಯವರ ಕೃಪಾಕಟಾಕ್ಷದ ಮೇಲೆ ಅದು

ಅವಲಂಬಿಸಿತ್ತು. ಹೆಡ್ ಮುನ್ಷಿ ಮಕ್ಕಳಂದಿಗ. ಆಸಾಮಿ ತಾಪತ್ರಿ; ಹೆಣ್ಣು ಮಕ್ಕಳ ಬಾಣಂತನ ವರ್ಷ ವರ್ಷ ತಪ್ಪಿದ್ದಲ್ಲ. ಮೇಲೆ ಹೆಂಡತಿಯೋ ಸಂತಾನಲಕ್ಷ್ಮಿ ಪ್ರಸನ್ನ! ಕೇಳಬೇಕಾದ್ದೇ ಇಲ್ಲ. ಒಂದುಸಾರಿಯಂತೂ ಹಿರೇ ಮಗಳು ಮೂರನೆ ಮಗಳು ಮತ್ತು ಹೆಂಡತಿ ಮೂರುಮಂದಿಯ ಬಾಣಂತನ ಒಂದೇಸಾರಿ ಬಂದುಬಿಟ್ಟಿತ್ತು. ಆಗ ಜನಾರ್ಧನಯ್ಯನ ಜೀವ ಜಾಲಾಡಿಬಿಟ್ಟರು ಹೆಡ್ ಮುನ್ಷಿಗಳು. ಇಂತಹ ಅಧಿಕಾರಿ ಕೆಳಗಿನ ಗುಮಾಸ್ತೆಗೆ ಇನ್ನೆಲ್ಲಿ ಶಾಖಾ ಇನ್ನೆಲ್ಲಿ ಲವಣ. "ಬರೀ ಬೈಗಳು, ಬಂದದ್ದೆಲ್ಲಾ ಭೂತಪ್ಪನ ಪಾಲೇ" ಎಂದು ಸುಬ್ಬರಾಯನ ಹತ್ತಿರ ಜನಾರ್ಧನಯ್ಯ ತೋಡಿಕೊಳ್ಳುತ್ತಿದ್ದ

ಮಂದವಾದ ಲಾಂದ್ರದ ಬೆಳಕಿನಲ್ಲಿ ಬೆಳಗಿ ಮಾಯವಾದ ಸುಶೀಲೆಯ ಮಂದಹಾಸ ಒಂದೇಸಮನೆ ಸುಬ್ಬರಾಯನನ್ನು ಕಾಡುತ್ತಿತ್ತು.

"ಅಲ್ಲ್ರೀ ನೀವೇ ಹೇಳಿ. ಆ ರಾಂಪುರದ ಕುಳ ಹೆಡ್ ಮುನ್ಷಿನ ಜೇಬಿಗೆ ಹಾಕಿಕೊಂಡದ್ದು ನನ್ನ ಕತ್ತಿಗೆ ಬಂದಿದೆ" ಎಂದು ಜನಾರ್ಧನಯ್ಯ ಹೇಳಿದಾಗಲೇ ಸುಬ್ಬರಾಯನಿಗೆ ಎಚ್ಚರವಾದುದು.

"ಹೂಂ ಅವನೊಬ್ಬ ಬಿಡಿ" ಎಂದು ಏನೋ ಹೇಳಿದ.

"ಆ ಗೌಡ ನನ್ನ ಹತ್ತಿರ ಬಂದು ಜೋರು ಮಾಡಿದ"

"ಯಾವ ಗೌಡ ?"

"ಅದೇ ಆ ರಾಂಪುರದ ಕುಳ ಅಂತ ಹೇಳಲಿಲ್ಲವೆ? ಸರಿ ಸರಿ ನಿಮಗೆಲ್ಲೋ ಯೋಚನೆ ಮನಸ್ಸು ಹಿರೇಹಳ್ಳಿಗಿ ಹರಿಯಿತೂಂತ ತೋರತ್ತೇ"

—ಎಂದಾಗ ಸುಬ್ಬರಾಯನಿಗೆ ಚಾವಟಿಯಿಂದ ಹೊಡೆದಂತಾಯಿತು. ಲಕ್ಷಣವಾಗಿ ಊಟ ಹಾಕಿ ಎಲೆ ಅಡಿಕೆ ಕೊಟ್ಟು ಕಳಿಸಿದ ಜನಾರ್ಧನಯ್ಯ ಹೀಗಂದದ್ದು ಸುಬ್ಬರಾಯನಿಗೆ ಹೇಗೋ ಅನ್ನಿಸಿತು. ಹೌದು ಈಗ ತಾನು ರಾಜೀವಿಯನ್ನು ನೆನೆಯಬೇಕಿತ್ತು. ಛೆ! ಎಂತಹ ಯೋಚನೆ. ಬೇಡ ಬೇಡವೆಂದರೂ ಸುಶೀಲೆಯ ಕಿರುನಗೆ ಮತ್ತೆ ಮತ್ತೆ ಮನಸ್ಸಿನಲ್ಲಿ ಮೂಡುತ್ತಿತ್ತು.

"ಹೌದು ಜನಾರ್ಧನಯ್ಯ ನಿಮ್ಮ ಮೆಹನತ್ತಿನಿಂದ ಮನೆ ಸಿಕ್ಕಿತು. ಮುಂದಿನ ದ್ವಾದಶಿ ಹೊತ್ತಿಗೆ ಹೇಗೂ ಊರಿಗೆ ಹೋಗಬೇಕು"

"ಏನು ವಿಷಯ ?"

"ತಂದೆಯವರ ವೈದೀಕ, ನಮ್ಮಣ್ಣ ಕಾಗದಾ ಬರೆದಿದ್ದಾನೆ. ಹೋಗಲೇ ಬೇಕು ಹಾಗೇ ಅಷ್ಟುಹೊತ್ತಿಗೆ ಅಮ್ಮನಹಳ್ಳಿಗೇ ತಂದುಬಿಡಿ ಅಂತ ಕಾಗದಾ ಹಾಕಿದ್ದೀನಿ ಮಾವನವರಿಗೆ. ಬರುವಾಗ ಜೊತೆಗೆ ಕರೆದುಕೊಂಡು ಬರೋಣಾಂತ"

"ಒಳ್ಳೇದು. ರಜಕ್ಕಾಗಲೇ ಬರೆದುಕೊಂಡಿದ್ದೀರೇನು ?"

"ಇನ್ನೂ ದಿನವಿದೆಯಲ್ಲ. ಆಗಲೇ ಒಂದು ಮಾತು ಶಿರಸ್ತೆದಾರ್ರಿಗೆ ಹೇಳಿದ್ದೀನಿ."

"ನಿಮ್ಮ ಸಾಹೇಬರು ಅಪರಂಜಿಯಂಥ ಮನುಷ್ಯರಪ್ಪ"

"ಯಾಕೆ ಹೆಡ್ ಮುನ್ಶಿಗಳು ರಜಾ ಕೊಡೋಲ್ಲವೆ ನಿಮಗೆ"

"ರಾಜಾ ಕೊಡದೆ ಹೋದರೆ ಬೇಡ. ತೊಂದರೆ ಕೊಡಬೇಡ ಮಹ ರಾಯಾಂತ ಆತನ್ನ ಕೇಳೋದು ?"

"ಅಷ್ಟು ಕೆಟ್ಟವನೇನು ಮನುಷ್ಯ ?"

"ಅಯ್ಯೋ ತೀರ ನಶಿ ನಶಿ ಇಸಮು. ಜೋರಾಗಿ ಅನ್ನೋಲ್ಲ ಮನಸ್ಸಲ್ಲೇ ಕೊರಗಿ ಸಾಯ್ತಾನೆ. ಏನುಮಾಡಿದರೂ ತಪ್ಪು. ನಾನು ನೋಡೋವರೆಗೂ ನೋಡ್ತೀನಿ. ಒಂದು ದಿನ ಅಮಲ್ದಾರರ ಹತ್ತಿರ ಹೇಳಿಬಿಡ್ತಿನಿ ಅಷ್ಟೆ."

"ನಿಮಗೆ ನೀವೇ ಹೀಗೆ ಮಾಡಿಕೊಂಡಿದ್ದೀರ. ಹೆದರಿ ಹೆದರಿ ಹೀಗಾ ಗಿದೆ. ಒಂದು ಸಲ ಎದುರುಬಿದ್ದರೆ ಗೊತ್ತಾಗತ್ತೆ."

"ತಾಬೇದಾರಿ, ಸುಬ್ಬರಾಯರೇ ಏನುಮಾಡೋದು ಅನುಭವಿಸೋದು"

"ತಾಬೇದಾರೀಂದರೂ ತೀರ ಹೀಗೆ ಕೈಕೆಳಗಿರೋರ್ನ ಉರಿಸಬಾರದು."

"ಏನುಮಾಡೋದು ಹೇಳು. ಆಗಲೆ ನಾಲ್ಕುಸಲ ಸಸ್ಪೆಂಡ್ ಅಂತ ಹೆದರಿಸಿದ್ದಾನೆ. ಅವನ ಕೈಲೇನೂ ಇಲ್ಲ. ಅಲ್ಲಿ ಅಮಲ್ದಾರರ ಹತ್ತಿರ ತಿರುವಿಬಿಡ್ತಾನೆ. ಅವರು ಹಿಂದು ಮುಂದು ನೋಡದೆ ದಬಾಯಿಸಿಬಿಡ್ತಾರೆ. ಮುಖ್ಯ ಕೇಳೋರಿಗೆ ಬುದ್ಧಿಯಿಲ್ಲ."

"ಅದು ನಿಜ–."

"ಹೌದೋ ಅಲ್ಲೋ ಕಷ್ಟವೋ ನಿಷ್ಠೂರವೋ–ನಾನು ಇನ್ನು ಅಮಲ್ದಾರ ರಿಗೆ ಹೇಳಿದರೆ ಅವರೂ ಒಂದು ತರಹ ಮನುಷ್ಯ–ನನಗ್ಯಾಕಪ್ಪಾ ಒಣಾ

ಹವ್ಯಾಸ–ಅಂದರೆ ಅಲ್ಲಿ ಸಾಗೋ ಅಷ್ಟು ದಿನ ಪಥ ಸಾಗಿಸೋದೂಂತ ನನ್ನ ಅಭಿಪ್ರಾಯ."

"ಲೆಖ್ಖಾಚಾರಾ–ಹಾಗಿದ್ದರೇ ಈಗಿನ ಕಾಲದಲ್ಲಿ ಉಳಿಗಾಲ."

ಹೀಗೆ ಮಾತು ಕಚೇರಿಯ ಇತರ ಗುಮಾಸ್ತರ ಟೀಕೆಗಳತ್ತ ಹರಿದು ಕಡೆಗೊಮ್ಮೆ ನಾನು ಹೊರಡುತ್ತೇನೆ ಎಂದು ಜನಾರ್ಧನಯ್ಯ ಎದ್ದು ನಿಂತ. ಮೈ ಮುರಿಯುತ್ತಾ ಸುಬ್ಬರಾಯನೂ ಎದ್ದು ನಿಂತ. ಆಕಳಿಸಿ ಬಾಯಿ ಹತ್ತಿರ ಚಿಟಿಕೆ ಹೊಡೆದು ಹಾಸಿಗೆಯನ್ನು ಚಾಪೆಯಮೇಲೆ ಉರುಳಿಸಿ, ಹೊರಟು ನಿಂತ ಜನಾರ್ಧನಯ್ಯನಿಗೆ ಲಾಂದ್ರ ಹಿಡಿದು ಅವರ ಮನೆತನಕ ಬೆಳಕು ತೋರಿಸಿದ. ಪರವಾಗಿಲ್ಲ ನೀವು ಹೋಗಿ ಮಲಗಿ ಎಂದಾಗ ಸುಬ್ಬರಾಯ ಮನೆಗೆ ಬಂದು ಬಾಗಿಲಿಕ್ಕಿ ಹಾಯಾಗಿ ಹಾಸಿಗೆ ಮೇಲೆ ಮಲಗಿಕೊಂಡ. ಜನಾರ್ಧನಯ್ಯನ ಕರ್ಕಶವಾದ ಕೂಗು "ಸುಶೀಲಾ–ಏ ಸುಶೀಲಾ" ಎನ್ನುವುದು ಕಿಟಕಿಯಲ್ಲಿ ತೂರಿ ಬಂದು ಸುಬ್ಬರಾಯನನ್ನು ಕಾಡಿತು. ಯಾವುದೋ ಒಳಕಣ್ಣು ಸುಶೀಲೆ ಬಂದು ಬಾಗಿಲು ತೆಗೆದುದರ ಭಂಗಿ ಹೀಗಿರಬಹುದೇ ಎಂದು ಚಿಂತಿಸುತ್ತಿತ್ತು.

ಅದೇ ಚಿಂತೆಯಲ್ಲಿ ಮಲಗಿದಾಗ ಯಾವಾಗಲೋ ನಿದ್ರೆ ಹತ್ತಿತ್ತು. ಏನೇನೋ ಕನಸು–ಯಾರೊಂದಿಗೋ ಯಾವ ಬೆಟ್ಟದಿಂದಲೋ ಹಾರಿ ಹೊರಟಂತೆ ಇತ್ತು. ಗಾಳಿಯಲ್ಲಿ "ಏ ಸುಶಿಲಾ" ಎಂಬ ಕೂಗು ತೂರಿ ಬಂದಂತಿತ್ತು.

ಮತ್ತೆ ಎಚ್ಚರವಾದಾಗ ಮನೆಯ ಮುಂದಿನ ಹುಣಿಸೇಮರದಲ್ಲಿನ ಕಾಗೇಗಳು ಕೂಗುತ್ತಿದ್ದವು. ಸೂರ್ಯನ ಕಿರಣ ಮನೆ ಮುಂದೆ ಬಿದ್ದ ಹುಣಿಸೇಮರದ ಹೂವನ್ನು ಚುಂಬಿಸುತ್ತಿತ್ತು. ತಂಡ ತಂಡವಾಗಿ ದನಗಳು ಮೇಯಲು ಅಡವಿಗೆ ಹೊರಟಿದ್ದವು. ಕೋಳಿ ತನ್ನ ಪರಿವಾರದೊಡನೆ ಹೊರಟಿತ್ತು.

ಜನಾರ್ಧನಯ್ಯ ಕೂಗಿ ಕರೆದರು. "ಸುಬ್ಬರಾಯಾ–ಕಾಫಿ ತಯಾರಿದೆ ಬರೋಲ್ಲವೆ ? " ಎಂದು.

ಕಣ್ಣುಜ್ಜಿ ಎದ್ದು–ಮುಖ ಮಾರ್ಜನ ಮಾಡಿಕೊಂಡು ಟವಾಲು ಹೆಗಲಿಗೆ ಹಾಕಿ ಜನಾರ್ಧನಯ್ಯನ ಮನೆಗೆ ಹೋದ. ಬಿಸಿ ಬಿಸಿಯಾದ ಸೊಗಸಾದ ಕಾಫಿಯನ್ನು ಥಳ ಥಳಿಸುವ ಕಂಚಿನ ಲೋಟದಲ್ಲಿ ಹಿಡಿದು ತಂದು ಗಂಡನ

ಕೈಗೆ ಕೊಡುವಾಗ ಸುಶೀಲೆಯ ಕಣ್ಣು ಸುಬ್ಬರಾಯನ ಮೇಲಿತ್ತು. ಪಡಸಾಲೆಯಲ್ಲಿ ಹಾಕಿದ ಚಿಕ್ಕ ಚಾಪೆಯ ಮೇಲೆ ಕುಳಿತುಕೊಳ್ಳುತ್ತಾ ಜನಾರ್ಧನಯ್ಯನ ಕೈಯಿಂದ ಕಾಫಿ ಲೋಟ ತೆಗೆದುಕೊಂಡು ಒಮ್ಮೆ ಹೀರಿದಾಗ ಅದರ ರುಚಿ ಅಪ್ಸರೆ ಅಮೃತಕೊಟ್ಟಂತೆ ಭಾಸವಾಯಿತು ಸುಬ್ಬರಾಯನಿಗೆ.

ಸುಬ್ಬರಾಯ ರಾಜೀವಿಯನ್ನೂ ಮಗ ಶಾಮಸುಂದರ, ಮಗಳು ಸರಸ್ವತಿಯರನ್ನು ಕೆಲದಿನಗಳ ನಂತರ ಕರೆತಂದ. ಸಾಗಿತ್ತು ಸಂಸಾರ. ಹೀಗೇ ದಿನಗಳುರುಳಿದವು.

೧೯

"ಅಶ್ವತ್ಥಾಮ, ಬಲಿ, ವ್ಯಾಸ, ಕೃಪ, ಜಾಂಬುವಂತ, ಹನುಮಂತ, ವಿಭೀಷಣ ಸಪ್ತೈತೀ ಚಿರಂಜೀವಿತಾಃ" ಎಂದು ಒಂದೊಂದೇ ಎಣ್ಣೆ ಬೊಟ್ಟನ್ನು ರಾಜಮ್ಮ ಶಾಮಣ್ಣನ ಎಳೆಯ ತೊಡೆಯ ಮೇಲಿಡುತ್ತಾ ಹೇಳಿದಳು. ತಲೆಗೆ ಎಣ್ಣೆ ಮೆತ್ತಿಕೊಂಡು ಪವಾಡವನ್ನು ಸೊಂಟಕ್ಕೆ ಸುತ್ತಿಕೊಂಡ ಸರಸ್ವತಿ ನೀರೊಲೆ ಉರಿಮಾಡುತ್ತಿದ್ದಳು. ಹೊಗೆ ಕಣ್ಣಿಗೆ ಬಡಿದು ಅಮ್ಮಾವರ ಕಣ್ಣೂ ಕೆಂಪಗಾಗಿತ್ತು. ನೆತ್ತಿಗೆ ಎಣ್ಣೆ ಸುರಿದು ತಟ್ಟಿದಂತೆ ಅದರ ಬಿಸಿ ಕೈಗೆ ತಾಕಿದಾಗ "ನೆತ್ತಿ ನೋಡು ಹೇಗೆ ಸುಡ್ತಾಯಿದೆ ವಾರಕ್ಕೊಂದ್ಸಾರಿಯಾದ್ರು ಎರದುಕೊಂಡ್ರೆ ಸರಿ ನಿನಗೆ ಆಟಕ್ಕೆ ಪುರುಸೊತ್ತಿಲ್ಲ ಇನ್ನು ಎರತಿಕ್ಕೆಲ್ಲಿ ನಿನಗೆ ಹೊತ್ತು" ಎಂದು, ಮೆತ್ತನೆಯ ತೋಳುಗಳಿಗೆ ತಿಕ್ಕಿ ತಿಕ್ಕಿ ಎಣ್ಣೆ ಸವರುವಳು. ಹಾಗೆ ತಿಕ್ಕುವಾಗ ಮಗನಲ್ಲಿನ ಆತ್ಮೀಯತೆ ಹೆಚ್ಚಿ ತನ್ನ ದೇಹದ್ದೇ ಭಾಗವೊಂದನ್ನು ತಿಕ್ಕಿಕೊಂಡ ಅನುಭವವಾಗುವುದು ರಾಜಮ್ಮನಿಗೆ.

ರಾಜಮ್ಮ ಹೇಳುತ್ತಿದ್ದ ಆರತಿ ಹಾಡು "ಆರುತಿ ತಾ ಕೃಷ್ಣ ಮೂರುತಿಗೇ" ಹಾಡನ್ನು ಗೊಣಗುತ್ತಾ ಸರಸ್ವತಿ ಬಿಸಿ ಬಿಸಿಯಾದ ನೀರನ್ನು ಹಂಡೆಯಿಂದ ಕೊಳಗಕ್ಕೆ ತೋಡ ತೊಡಗಿದಳು.

"ಗಂಡನಿಗೆ ಆರ್ತಿ ಮಾಡೋಕೆ ಈಗಲೇ ಅಭ್ಯಾಸ ಮಾಡ್ಕೊತೀಯಾ?" ಎಂದು ಪಕಪಕನೆ ನಕ್ಕ ಶಾಮು. "ಬಿಸಿ ಬಿಸಿ ನೀರು ಸುರಿದುಬಿಡ್ತೀನಿ ನೋಡು" ಎಂದು ಬೆದರಿಸಿದಳು. "ನಾಳೇ ನಿನ್ನ ಗಂಡ ಬರ್ತಾನಲ್ಲಾ ಅವನ್ನ ಹೆದರ್ಸೇ–" ಎಂದು ಮತ್ತೆ ಮೂಗು ಕೆರೆದ. ಚಿಳ್ ಎನ್ನುವ ಹೆಣ್ಣು ಧ್ವನಿಯಲ್ಲಿ ರಾಗವಾಗಿ "ನೋಡಮ್ಮಾ ಈ ಶಾಮೀನಾ" ಎಂದು ಕೂಗುವಳು.

"ಎರ್ಕೊಳ್ಳೊ ವರೆಗೂ ಸಧ್ಯ ಸುಮ್ಮನಿರಬಾರದೇ ?"

"ಮತ್ತೆ ನೋಡು ಈ ಶಾಮಿ ಅನ್ನೋದು"

"ನಾನೇನಮ್ಮಾ ಅಂದೆ"

"ಅವನಂತೂ ಹುಡುಗ ನೀನೂ ಹಾಗೇ ಆಡ್ತಿಯಲ್ಲೆ ಸರಸ."

"ಹೂಂ ಹುಡುಗ....ಧಡಿಯ ಆಗಿದ್ದಾನೆ"

"ನೋಡ್ದೇನಮ್ಮ ಥಡಿಯ ಅನ್ನೋದು"

"ನೀನು ಸುಮ್ಮನೆ ನಿಂತ್ಕೋಪ್ಪ. ಹೂಂ ನೀರು ಹಾಕೆ"

"ಅಮ್ಮಮ್ಮಮ್ಮ ಭಾಳ ಬಿಸಿ ಅಮ್ಮ"

"ಎರಡು ಚೊಂಬು ತಣ್ಣೀರು ಹಾಕ್ಕೊಳೆ ಸರ್ಸು"

"ಇನ್ನೂ ಬಿಸೀನೇ ಇದೆಯಮ್ಮ...."

"ಎರಡು ತಂಬಿಗೆ ಬೀಳತ್ಲು ಸರಿಹೋಗತ್ತೆ"

"ನೋಡಮ್ಮ ಸರ್ಸಿನ್ನಾ ಜೇಕಂತ ಬಿಸೀನೇ ಹಾಕ್ತಾಳೆ"

"ಸಾಕು ಕಣೆ, ಇನ್ನೊಂದು ಕೊಳಗ ತೋಡು"

"ಸೀಗೆಪುಡಿ ಕಣ್ಣಿಗೆ ಬೀಳಿಸಬೇಡಮ್ಮಾ"

"ನೀನು ಸರಿಯಾಗಿ ಕೂತುಕೋ. ಚಕ್ಕಳ ಮುಕ್ಕಳ ಹಾಕ್ಕೊಂಡು ಕೂತ್ಕೊ–ಕಣ್ಣು ಬಿಡಬೇಡ"

ಊಂ....ಹಾಹಾಹಾ....ಅಮ್ಮಯ್ಯಾ....ಅಯ್ಯೋ ಕಣ್ಣಲ್ಲಿ ಸೀಗೆಪುಡಿ ಬಿತ್ತೂಊ...."

"ಕಣ್ಣು ಮುಚ್ಕೊಳ್ಳೋಂತ ಹೇಳಲಿಲ್ಲವೇ....ಸರಸು ಕೊಂಚ ತಣ್ಣೀರು ತೊಗೊ....ಎಲ್ಲಿ ಮರಿ ಚೆನ್ನಾಗಿ ತಣ್ಣೀರು ಎರಚಿಕೋ ಕಣ್ಣಿಗೆ... ಹಾಗೇ.... ಇನ್ನು ಕೊಂಚ... ತಲೇಲಿ ಎಣ್ಣೆ ಉಳಿದರೆ ಥಂಡಿ ಬಡಿಯುತ್ತಮ್ಮಾ–ಗಸ ಗಸಾಂತ ಉಜ್ಜಿಬಿಡ್ತೇನೆ ಕಣ್ಣು ಮುಚ್ಕೊಂಡು ಕೂತ್ಕೊಂಡುಬಿಡು–ಹಾಗೇ ಜಾಣಮರಿ ನೀನು. ಅಪ್ಪನಿಗೆ ಹೇಳಿ ನಿನಗೆ ತುಂಬಾ ಮತಾಪು, ಪಟಾಕಿ, ಸುರು ಸುರುಬತ್ತಿ, ಹೂ ಬಾಣ ಎಲ್ಲ ತರಿಸಿಕೊಡ್ತೀನಿ. ಈ ಸರಸ್ವತಿಗೆ ಒಂದೇ ಒಂದು ಮತಾಪು ಎಲ್ಲಾ ನಿನಗೇ....ಎಲ್ಲಿ ಮೈ ಒಂದುಸಾರಿ ತಿಕ್ಕಿಬಿಡ್ತೀನಿ ನೀರು ಹಾಕೇ ಸರಸು, ಮೆತ್ತಗೇ ಇನ್ನೆರಡು ತಂಬಿಗೆ ನೀರು ಸುರಿ....ಎಲ್ಲಿ ಆ ಸೋಪು ಈ ಕಡೆ ಕೊಡು. ಆಯ್ತು ಕಣೋ ಶಾಮು ಆಗೇಹೋಯ್ತು....ಹೂಂ ಸೋಪು ತಿಕ್ಕಿದರೆ ಆಗೇಹೋಯ್ತು....ನೀರು ಹಾಕೆ ಸರ್ಸು ಬೇಗ ಥಂಡಿ ಗಾಳಿ ಬೇರೆ ಬೀಸ್ತಾ ಇದೆ. ಉದ್ದಂಡ ಆಯುಷ್ಯವಂತನಾಗು, ಐಶ್ವರ್ಯವಂತನಾಗು, ಮುಂಜಿ ಮದುಮಗನಾಗು, ಶ್ರೀರಾಮರಕ್ಷೆ, ಆಡೋಡಿ ಬಾ" ಎಂದು ಒಂದೊಂದು ಹರಕೆಗೂ ಒಂದು ತಂಬಿಗೆ ನೀರು ಹಾಕಿ ಸರಸು ಹಿಡಿದು ನಿಂತಿದ್ದ

ಟೌಲಿನಿಂದ ಶಾಮಣ್ಣನ ಮೈಯ್ಯನ್ನು ಒರಸಿ ತಲೆಯ ನೀಳವಾದ ಕೂದಲನ್ನು ಚೆನ್ನಾಗಿ ಒರಸಿ ಇನ್ನೊಂದು ಒಣಗಿದ ಟೌಲನ್ನು ತಲೆಗೆ ಸುತ್ತಿ ಕೂದಲನ್ನೂ ಟೌಲನ್ನೂ ಸೇರಿಸಿ ತುರುಬುಕಟ್ಟಿ, ಟೌಲನ್ನು ಹೊಚ್ಚಿ ಹೊರಕ್ಕೆ ಕಳಿಸಿ, "ನೀನು ಬಚ್ಚಲಿಗೆ ಇಳಿಯೆ ತಾಯಿ" ಎಂದು ನೀರುಮನೆ ಬಾಗಿಲು ಮುಂದೆ ಮಾಡಿದಳು.

ಆ ಸಲದ ದೀಪಾವಳಿಯು ಸುಬ್ಬರಾಯು, ಮನೆಯಲ್ಲಿ ರಾಜಮ್ಮನಂತಹ ಪ್ರೀತಿಯ ಹೆಂಡತಿ, ಶಾಮಣ್ಣ ಸರಸ್ವತಿಯರಂತಹ ಮುದ್ದು ಮಕ್ಕಳೊಡನೆ ಸಂತೋಷವಾಗಿ ನಡೆದಿತ್ತು. ಗಂಡನಿಗೂ ಅಭ್ಯಂಜನ ಸ್ನಾನ ಮಾಡಿಸಿ ತಾನೂ ನೀರು ಹಾಕಿಕೊಂಡು ಹೂರಣದ ಕಡುಬು ಶಾವಿಗೆ ಪಾಯಸ ನಿಂಬೆ ಹುಳಿ ಚಿತ್ರಾನ್ನ ಕೋಸಂಬರಿಯನ್ನೊಳಗೊಂಡ ಸವಿಯಾದ ಅಡಿಗೆ ಮಾಡಿದ್ದಳು ರಾಜಮ್ಮ.

ರಕ್ತ ಚಿಮ್ಮುವಂತಹ ಕೆಂಪು ಕೆನ್ನೆಯಲ್ಲಿ ನಸು ಗುಲಾಬಿಯಂತೆ ನಕ್ಕಾಗ ಪುಟ್ಟಕುಳಿ ಬೀಳುತ್ತಿದ್ದುದು ಸರಸ್ವತಿಯ ರೂಪಕ್ಕೆ ಸಾಣೆ ಹಿಡಿದ ಕಳೆ ಕೊಡುತ್ತಿತ್ತು. ಜರತಾರಿಯ ಪರಕಾರ ಬುಟ್ಟಾ ಹೂವಿನ ಚೋಳಿ ನೀಳವಾಗಿ ಬೆಳೆದ ದಪ್ಪ ಕಪ್ಪು ಕೂದಲು ಕೆಳಗೊಂದು ಗೊಂಡೆ, ಕಿವಿಗೆರಡು ಲೋಲಕ್ಕು, ಗುಂಗುರು ಗುಂಗುರು ಮುಂಗುರುಳು, ಗೀರು ಹುಬ್ಬು, ಕಾಡಿಗೆ ಹಚ್ಚಿದ ಬಟ್ಟಲ ಗಣ್ಣುಗಳು, ಒಂದೇ ಎಳೆ, ಸಣ್ಣ ಚಿನ್ನದ ಸರದೊಡಗೂಡಿ ಹಬ್ಬದೂಟಕ್ಕೆ ಎಲೆಹಾಕಿ ಅದರ ಮುಂದೆ ರಂಗವಲ್ಲಿ ಎಳೆ ಹಾಕುತ್ತಿದ್ದಾಗ ದೃಷ್ಟಿ ಬಡಿಯುವಂತೆ ಕಂಡಳು.

ಮಡಿಯುಟ್ಟು ಊಟಕ್ಕೆ ಸಿದ್ಧವಾಗಿ ನಿಂತ ಸುಬ್ಬರಾಯ ತನ್ನ ಮಗಳನ್ನು ಕಣ್ಣು ತುಂಬಾ ನೋಡಿದ. ಒಂದು ಕ್ಷಣ ತನ್ನ ಮದುವೆಯಲ್ಲಿ ಹೆಚ್ಚು ಕಡಿಮೆ ರಾಜಮ್ಮ ಹೀಗೆ ಕಂಡದ್ದು ಮನಸ್ಸಲ್ಲಿ ಸುಳಿದುಹೋಯಿತು.

—ಬೇಡ ಬೇಡವೆಂದು ಸಿಡಿಸಿಡಿಯ ಮುಖ ಮಾಡಿಕೊಂಡೇ ವರ

ತೈಗೆ, ಹೋಗಿ ಬಂದದ್ದು, ಧಾರೆ ಮುಹೂರ್ತದಲ್ಲಿ ಅಂತರಪಟ ತೆಗೆಯುವವರೆಗೂ ಗಂಟುಹಾಕಿದ್ದ ಮುಖದ ಸುಕ್ಕು ಬಿಡಿಸದ ಸುಬ್ಬರಾಯ ಅಕ್ಕಿ ಕಾಳು ರಾಜಮ್ಮನ ತಲೆಯ ಮೇಲೆ ಹಾಕಿ ಒಮ್ಮೆ ಅವಳ ಮುಖ ನೋಡುತ್ತಲೇ ಮುಖದ ಗಂಟು ಮಾಯವಾಯಿತು, ಅಯ್ಯೋ ಬೇಡವೆಂದಿ

ದ್ದೆನೆ ಇಂಥ ಹುಡುಗೀನ್ನ! ಎಂದುಕೊಂಡ. ಎಳೆ ನಗು ಮುಖದಲ್ಲಿ ಮೂಡಿತು. ಬಾಸಿಂಗ ಬಿಗಿದ ಅರಿಶಿನ ಗಲ್ಲದ ಪುಟ್ಟ ಚಲುವೆ ರಾಜಮ್ಮ ಸುಬ್ಬ ರಾಯನಿಗೆ ರಾರಾಜಿಸುವ ರಾಜರಾಜೇಶ್ವರಿಯಂತೆ ಕಂಗೊಳಿಸಿದಳು. ಆನಂದ ರಾಯರ ಬಲವಂತಕ್ಕೇ ತಾನು ತಾಳಿ ಕಟ್ಟುತ್ತಿರುವುದೆಂದು ತೋರಿಸಲು ಒಂದು ನಾರಿಯೂ ಮದುವೆಗೆ ಮುಂಚೆ ಹುಡುಗಿಯನ್ನೂ ನೋಡಿರಲಿಲ್ಲ ಪುಣ್ಯಾತ್ಮ. ಭಾರಿಯ ಬುಟ್ಟಾ ಹೂವಿನ ಸೀರೆ ಹೊರಲಾರದೆ ಹೊತ್ತ ಪುಟ್ಟ ಕೈಯ್ಯನ್ನು ತನ್ನ ಕೈಯ್ಯಲ್ಲಿಟ್ಟು ಅಗ್ನಿದೇವರ ಸುತ್ತ ತಿರುಗುವಾಗ ಹೂವನ್ನೇ ಹಿಡಿದು ಸುತ್ತಿದ ಅನುಭವವಾಯಿತು.

ಮದುವೆಯ ಕಡೆಯ ದಿನದ ಮೆರವಣಿಗೆಯಲ್ಲಿ, ಆ ವಾಲಗದ ನಾದ, ಡೋಲಿನ ಡಬಡಬ ಸದ್ದಿನಲ್ಲಿ ಆ ಕಡೆ ಈ ಕಡೆ ಹಿಲಾಲು ಹಿಡಿದು ನಾಗರಾಜ ಜೋಯಿಸರು ಅವರ ಪರಿವಾರ, ಆನಂದರಾಯರೂ ಅವರ ಪರಿವಾರದ ನಡುವೆ, ಅಲಂಕರಿಸಿದ ಕುದುರೆಯ ಮೇಲೆ ಮುಂದೆ ರಾಜಮ್ಮನನ್ನು ಕೂಡಿಸಿ ಕೊಂಡು ಹಿಂದೆ ತಾನು ಕುಳಿತು, ಮೆರವಣಿಗೆ ಹೊರಟದ್ದು ನೆನಪಿಗೆ ಬಂದು ಕಿರುನಗೆಯೊಂದು ಸುಬ್ಬರಾಯನ ಮುಖದಲ್ಲಿ ಮೂಡಿತು.

ಇದೇ ಸಮಯಕ್ಕೆ ಅಡ್ಡ ಸೆರಗು ಕಟ್ಟಿಕೊಂಡು ಎರೆದುಕೊಂಡ ತಲೆ ಯನ್ನು ಹಾಗೇ ಗಂಟುಹಾಕಿಕೊಂಡು ಉಪ್ಪು ಬಡಿಸಲು ಬಂದ ರಾಜಮ್ಮ ಯಜಮಾನರ ಮುಖದ ಮೇಲಿನ ಹೂವಿನಂತಹ ಎಳೆನಗು ಕಂಡು

"ಇದೇನು ಯಾವುದೋ ಸುಖಸ್ವಪ್ನ ನೆನಸ್ತಾ ಇದ್ದ ಹಾಗಿದೆ" ಎಂದಳು.

ಅವಳ ಮಾತಿನಿಂದ ಮದುವೆಯ ಮಧುರ ನೆನಪಿನಿಂದ ವಾಸ್ತವಿಕತೆಗೆ ಬಂದ ಸುಬ್ಬರಾಯ. ಎದುರಿಗೆ ನಿಂತ ರಾಜಮ್ಮನನ್ನು ನೋಡಿ ಎಳೆನಗು ಬೃಹದಾಕಾರ ತಾಳಿ ಗಹಗಹಿಸಿ ನಗುವಂತಾಯಿತು.

"ಇದೇನೂಂದ್ರೆ ಹೀಗೆ ನಗ್ತೀರಿ–ನನ್ನ ತಲೆ ಮೇಲೆ ಗುಬ್ಬಚ್ಚಿ ಕೂತಿ ದೆಯೆ ?"

"ಇಲ್ಲ ರಾಜಿ ನನ್ನ ತಲೆ ಮೇಲೆ ಪಾರಿವಾಳ ಕೂತಿದೆ"

"ನಿಮ್ಮ ಮಾತು ನನಗೆ ತಿಳಿಯೋಲ್ಲ–ಬನ್ನಿ ಎಲೆಹಾಕಿದೆ ಕೂತುಕೊಳ್ಳ ಬಾರದೆ–ಆಗಿನಿಂದ ನೋಡ್ತಾ ಇದ್ದೀನಿ–ಸರ್ರು ಎಲೆ ಹಾಕಿ ರಂಗೋಲೆ ಹಾಕಿ ದಳು–ನೀರು ಚಿಮುಕಿಸಿ ತೊಳೆದದ್ದೂ ಆಯಿತು–ಎಲೆಗೆ ಉಪ್ಪು ಬಡಿಸುವುದೂ

ಆಯಿತು ಇನ್ನೂ ಅಲ್ಲಿ ನಿಂತು ಕನಸು ಕಾಣುವುದು ಮುಗಿಯಲಿಲ್ಲ, ವಿಷಯ ವೇನು ಹೇಳಬಾರದೆ"

"ಅದೇ ಪಾರಿವಾಳದ ವಿಚಾರ"

"ಸರಿಹೋಯ್ತು–ಇದೇನು ಹಬ್ಬದ ದಿನದ ವಗಟೇನು?"

"ಬಿಡಿಸದ ವಗಟಲ್ಲಾ ರಾಜಿ–ನಿನ್ನ ಮಾವನವರನ್ನು ನೆನೆಯುತ್ತಿದ್ದೆ"

"ಪಾರಿವಾಳ–ಮಾವನವರು ಇದೇನೂಂಪ್ರೆ, ಬನ್ನಿ ಊಟಕ್ಕೆ ಕುಳಿತು ಕೊಳ್ಳಿ ಎರಡು ತುತ್ತು ಬಿದ್ದರೆ ಸರಿಹೋಗಬಹುದು. ಹಸಿದ ಹಾರವರು ಹೀಗೇ ಹರಟುವುದು"

"ನೀನೇನಾದರೂ ಅನ್ನು–ನೀನು ನನ್ನ ಪರಿಮಳ"

"ಚೆನ್ನಾಯ್ತು.... ಸುಮ್ಮನೆ ಊಟಕ್ಕೆ ಕೂಡಿ"

ಸರಸ್ವತಿಯ ಕಡೆ ಕಣ್ಣು ಹಾಯಿಸಿ–ಮುಖದ ಚರ್ಯೆಯಲ್ಲೇ ಹುಡುಗ ರಿದ್ದಾರೆ ಸರಸದ ಮಾತು ಬೇಡವೆಂದು ಸೂಚಿಸಿದಳು. ಗದ್ದದ ಮೇಲೆ ಕೈ ಊರಿ ಕುಳಿತ ಸರಸು ಅಪ್ಪ ಅಮ್ಮನ ಈ ಮಾತುಗಳನ್ನು ಕೇಳುತ್ತಿದ್ದಳು. ಅಂಗಿ ಇಲ್ಲದ ಬರೀ ನಿಕ್ಕರ್ರು ಹಾಕಿ ಕುಳಿತಿದ್ದ ಶಾಮಣ್ಣ.

ಪಾಯಸ ಬಡಿಸಿ ಅನ್ನ ಹಾಕಿ ಅಭಿಗಾರ ಮಾಡಿದ ಮೇಲೆ ರಾಜಮ್ಮ "ಹೂಂ ಊಟಕ್ಕೆ ಕೂಡಬಹುದು" ಎಂದಾಗಲೇ ತನ್ನ ಚೇಷ್ಟೆಯನ್ನು ಶಾಮಣ್ಣ ನಿಲ್ಲಿಸಿದ್ದು.

ಆನಂದರಾಯರ ಮನೆತನ ಊಟಕ್ಕೆ ಹೆಸರಾದದ್ದೆಂದು ಹೇಳಿತ್ತಲ್ಲವೆ? ರಾಯರಿಂದ ಮಗನಿಗೂ ಮತ್ತು ಮೊಮ್ಮಕ್ಕಳಿಗೂ ಪಗಡದಸ್ತಾಗಿ ರಸಗವಳ ಕಬಳಿಸುವ ಅಭ್ಯಾಸ ಸಾಗಿಬಂದಿತ್ತು. ಆನಂದರಾಯರ ಕಾಲದಷ್ಟು ಹೇರಳ ತುಪ್ಪ ಹೋಳಿಗೆಗಳು ಗುಮಾಸ್ತಗಿರಿಯನ್ನವಲಂಬಿಸಿದ ಮಗ ಸುಬ್ಬರಾಯನ ಕಾಲಕ್ಕೆ ದಿನಂಪ್ರತಿ ಇಲ್ಲವಾಗಿದ್ದರೂ ಹಬ್ಬ ಹರಿದಿನಗಳಲ್ಲಿ ನಿಸ್ಸಂಕೋಚವಾಗಿ ಆ ಪದ್ಧತಿಯನ್ನು ನಡೆಸಿಕೊಂಡು ಬಂದಿದ್ದರು. ಈ ಪುಷ್ಟ ಆಯಕಟ್ಟೋ ಆನಂದರಾಯರಿಗಿದ್ದಷ್ಟು ಮಗ ಸುಬ್ಬರಾಯನಿಗೆ ಇರಲಿಲ್ಲ, ಮೊಮ್ಮಗ ಶಾಮಣ್ಣನಿಗೆ ಇನ್ನೂ ಕಡಿಮೆಯಾಗಿತ್ತು. ಹಳೆಯ ಕಾಲದ ಹುಲಿಗಳ ವಂಶ ಪರಂಪರೆ ಕಡೆಗೊಮ್ಮೆ ಇಲಿಗಳಾಗಿ ಉಳಿಯುವುದೇನೊ? ಎಂಬ ಶಂಕೆ ಈ ಪರಂಪರೆಯ ಪೌರುಷವನ್ನು ಸೂಕ್ಷ್ಮವಾಗಿ ವೀಕ್ಷಿಸಿದರೆ ಕಂಡುಬರುತ್ತದೆ.

ಹೊಟ್ಟೆ ಪುಟ್ಟೆ ಗುಂಡಾಣದಂತೆ ಗುಂಡಗಾಗಿ ಅದರ ಮೇಲೆ ಕೈ ಆಡಿಸುತ್ತಾ 'ಓಬ್ಬ' ಎಂದು ತೇಗಿದ ಶಾಮಣ್ಣ. ರುಚಿರುಚಿಯಾದ ಖೀರು, ಕಡುಬು ತಿಂದ ಸುಬ್ಬರಾಯನೂ ಒಂದು ತೇಗು ಹೊರಹೊಮ್ಮಿಸಿದ. ಸರಸ್ವತಿಯೂ ಉಸ್ಸಪ್ಪ ಹೊಟ್ಟೆ ಭಾರವಾಯಿತು ಎಂದಳು. ಊಟ ಮುಗಿಸಿ ಸುಬ್ಬರಾಯ ಮುಂದಿನ ಕೋಣೆಯಲ್ಲಿ ಹಾಸಿಗೆಗೆ ಒರಗಿ ಮಲಗಿದ್ದ. ರಾಜಮ್ಮನೂ ಊಟ ಮಾಡಿ ಕೈಯ್ಯಲ್ಲಿ ಎಲೆ ಅಡಿಕೆ ತಟ್ಟೆ ಹಿಡಿದು ಬಂದಳು. ಬದಿಯಲ್ಲೇ ಕುಳಿತು ಅಡಿಕೆಪುಡಿ ಸುಬ್ಬರಾಯನ ಅಂಗ್ಯೆಗೆ ಹಾಕಿದಳು. ವೀಳೆದೆಲೆಗೆ ಸುಣ್ಣ ಹಚ್ಚಿ ಕೊಟ್ಟಳು. ಆರು ಎಲೆ ತಿಂದಮೇಲೆ ಸುಬ್ಬರಾಯ ಮಾತಿಗೆ ಪ್ರಾರಂಭಿಸಿದ. ಸರಸ್ವತಿ ಶಾಮಸುಂದರ ಸುಶೀಲೆಯ ಮನೆಗೆ ಹೋದರು.

"ನಿಜವಾಗಲೂ ನಿನಗೆ ಅನ್ನಪೂರ್ಣ ಅಂತ ಹೆಸರಿಡಬೇಕಾಗಿತ್ತು ಕಣೆ"

"ಗೊತ್ತಾಯ್ತು ನಿಮ್ಮ ಅಭಿಪ್ರಾಯ"

"ಏನು ಹೇಳು"

"ಅಡಿಗೆ ಕೊಂಚ ರುಚಿಯಾಗಿತ್ತೂಂತ ಕಾಣತ್ತೆ"

"ಕೊಂಚವೇನು ಬಂತೇ, ನಮ್ಮಮ್ಮ ಇದ್ದಾಗ ಇಂಥ ರುಚಿ ನಾನು ಕಂಡದ್ದು"

"ನಿಮ್ಮ ಹೊಗಳಿಕೆಗೇನಂತೆ, ಯಾವ ಹಬ್ಬವಾದರೂ ಹೀಗೇ ಹೊಗಳುತ್ತೀರ"

"ಅಳತೆಗೆ ಸರಿಯಾಗಿ ಪದಾರ್ಥಗಳನ್ನ ಬೆರಸಿ ಬೇಯ್ಸೋದೂಂದ್ರೆ ಒಂದು ಕಲೆ ಕಣೆ. ನೀನು ತಲೆ ಆಡಿಸಬೇಡ, ಆ ನಿನ್ನ ಕೈಗಳಿಗೆ ಕಟ್ಟು ಹಾಕಿಸಬೇಕು"

"ಹ್ಹಹ್ಹಹ್ಹ....ಆ ಮೇಲೆ"

"ನಗೋ ಮಾತಿಗಲ್ಲ ನಿಜವಾಗಲೂ ಹೊಗಳೋ ವಿಷಯವೇ ಇದು. ಇಲ್ನೋಡೆ ಚೆನ್ನಾಗಿದ್ರೆ ಚೆನ್ನಾಗಿದೇಂತ ಬಾಯಿ ತುಂಬ ಹೊಗಳ್ತೀನಿ. ಇಲ್ಲವೋ ಕಂಠ ಪೂರ್ತಿ ಬೈದುಬಿಡ್ತೀನಿ...."

"ಈ ವಿಚಾರ ಹೊಸದಾಗಿ ನೀವು ಹೇಳಬೇಕಾಗಿಲ್ಲ, ನಿಮ್ಮನೆ ಸೇರಿದ ವರ್ಷದಲ್ಲೆ ಅನುಭವಕ್ಕೆ ಬಂತು"

"ಅದು ಗೊತ್ತು ಕಣೆ....ಪೂರ್ತಿ ಹೇಳೋದರಲ್ಲೇ ಅಡ್ಡಬಾಯಿ ಹಾಕ್ತೀಯಲ್ಲ....ಏನು ಹೇಳ್ತಿದ್ದೇಂದ್ರೆ ಹೂಂ ಹಾಗೆ ಹೊಗಳಿ ತೆಗಳೋ ವಿಚಾರದಲ್ಲಿ

ನೀನು ತೆಗಳಿಕೆಗಿಂತ ಹೊಗಳಿಕೆಗೇ ಹೆಚ್ಚು ಪಾತ್ರಳಾಗ್ತಾ ಇದ್ದೀಯಲ್ಲಾಂತ ಹೇಳ್ತಾ ಇದ್ದೆ"

"ಬರೀ ಹೊಗಳಿದರೇನು ಬಂತು ?"

"ನೋಡ್ದ್ಯಾ-ಆಗಲೇ ಕೊಂಕು ಮಾತು ತೆಗೆದೆಯಲ್ಲ, ನಾನು ಮರ್‍ತಿಲ್ಲ ಕಣೆ. ಆ ರೊಟ್ಟಿ ಅಂಚಿನ ರೇಷ್ಮೆ ಸೀರೆತಾನೆ ?"

"ಸರಿ ಬಾಯಿಬಿಟ್ಟು ಬೇರೆ ಕೇಳಬೇಕೇನೂ ?"

"ಇಬ್ನೋಡು ಇದು ಮೊಳಕಾಲ್ಮೂರು. ಸೀರೆಗೆ ಬಹು ಪ್ರಸಿದ್ಧಿ ಅಲ್ಲವೆ?"

"ಹೌದು ಸ್ಕೂಲಿನಲ್ಲಿದ್ದಾಗ ಈ ಊರು ಅದಕ್ಕೇ ಪ್ರಸಿದ್ಧಿ ಎಂದು ಮೇಷ್ಟ್ರು ಹೇಳಿದ್ದರು"

"ಮೇಸ್ತ್ರ ಮಾತಿರಲಿ, ನೀನೇ ನೋಡ್ತಿಲ್ಲವೆ ಬೀದಿಬೀದಿಗೆ ಪ್ರತಿ ಮನೆ ಯಲ್ಲೂ ಕೈಮಗ್ಗಗಳು ಇಲ್ಲವೆ ?"

"ಇದ್ದರೆ ನನಗೆ ಬಂದ ಭಾಗ್ಯವೇನೂಂದ್ರೆ !"

"ಅಲ್ಲೇ ನೀನು ಅರ್ಥಮಾಡಿಕೊಳ್ಳೋದಿಲ್ಲ. ಸಿದ್ದಪ್ಪನವರು ಮೊನ್ನೆ ಯಾವುದೋ ಕೆಲಸಕ್ಕೆ ಕಚೇರಿಗೆ ಬಂದಿದ್ದರು. ಶಿರಸ್ತೆದಾರ್‍ರು ಅಮಲ್ದಾರ್‍ರೂ ಒಂದೊಂದು ಸೀರೆಗೆ ಅವನಿಗೆ ಹೇಳಿ ಮಾಡಿಸಿದರು"

"ನಾನು ಕಾಣೆನೇ ? ಮೊನ್ನೆ ಅಮಲ್ದಾರ್‍ರ ಮನೇಲಿ ಮಗೂ ಹುಟ್ಟಿದ ಹಬ್ಬಕ್ಕೆ ಆರತಿಗೆ ಹೋದಾಗ ಅವರ ಹೆಂಡ್ತಿ ಉಟ್ಟಿದ್ದು ಅದೇ ಸೀರೆ ಇರ ಬೇಕು. ಅಲ್ಲಿಗೇ ಬಂದ ಶಿರಸ್ತೆದಾರ್‍ರ ಹೆಂಡ್ತಿಯೂ ರೊಟ್ಟಿ ಅಂಚಿನ ಸೀರೆ ಉಟ್ಟಿದ್ದರು"

"ಪರವಾಗಿಲ್ಲ ಕಣೆ, ಪತ್ತೆ ಹಚ್ಚಿದ್ದೀಯ. ಆ ಸಿದ್ದಪ್ಪನಿಗೆ ನನ್ನ ಗುಮಾಸ್ತಗಿರಿಯಿಂದಲೇ ಕೆಲವು ದರಕಾಸ್ತಿನ ವಿವರ ಬೇಕಾಗಿತ್ತು. 'ಅಯ್ಯೋ ನಿಮಗೆ ಇಲ್ಲಾಂದ್ರೆ ಆಗುತ್ತದೆಯೇ. ಅಂಥಾಗೆ ಶಿರಸ್ತೆದಾರ್‍ರಿಗೆ ನೇಯ್ದು ಕೊಟ್ಟಿರಲ್ಲಾ ಆ ಸೀರೆ ಎಷ್ಟಾಯ್ತು ?" ಎಂದು ಕೇಳಿದೆ. ನಲವತ್ತೈದು ಬಿತ್ತು ಅಂದರು.

"ನನಗೆ ಅಷ್ಟು ಭಾರಿಯಾದ್ದು ಬೇಡ ಇಪ್ಪತ್ತೈದು ಮೂವತ್ತರಲ್ಲಿ ನನಗೂ ಒಂದು ಸೀರೆ ಬೇಕಿತ್ತು" ಎಂದು, ಇನ್ನೂ ದರಕಾಸ್ತು ಹುಡುಕುತ್ತಲೇ ಹೇಳಿದೆ. ಸಿದ್ದಪ್ಪ "ಅದಕ್ಕೇಕೆ ಇಷ್ಟು ಬಳಸು ಸ್ವಾಮಿ ನಲವತ್ತೈದಕ್ಕೆ ಒಂದು

ಸೊಗಸಾದ ಜರತಾರಿ ಸೀರೆ ನೆಯ್ದು ಕೊಡ್ತೇನೆ. ನೀವೇನು ಓಡಿ ಹೋಗ್ತೀರಾ? ನಾಲ್ಕು ತಿಂಗಳಲ್ಲಿ ದುಡ್ಡು ಕೊಡಿ ಭಯವಿಲ್ಲಾಂತ" ಅಂದ.

"ಹಾಗೇ ಆಗಲಿ ಅಂದು ಬಿಟ್ಟಿರಲ್ಲವೇ ? "

''ಅಷ್ಟರಲ್ಲೇ ಅವಸರವಪ್ಪ....ಇವಳಿಗೆ. ಹುಡುಗರೆಲ್ಲಿ ಹೊರಗಡೆ ಆಡ್ತಾ ಇದ್ದಾರೆಯೆ ? "

"ಕೇಳಿಸೋಲ್ವೆ ಪಕ್ಕದ ಮನೆಯಿಂದ ಬರೋ ಪಟಾಕಿ ಹೊಡೆದ ಸದ್ದು ಇನ್ನು ಸಂಜೆ ತನಕ ಅವರಿಗೆ ಮನೆ ನೆನಪಿಗೇ ಬರೋಲ್ಲ''

"ಸರಿ ಹಾಗಾದರೆ ಬಾಗಿಲು ಮುಂದಕ್ಕೆ ಮಾಡು"

"ನಿಮಗೇನು ಬೇರೆ ಯೋಚನೆಯೇ ಇಲ್ಲಾಂತ ಕಾಣತ್ತೆ, ಅಲ್ಲಾಂದ್ರೆ ಅನ್ನಪೂರ್ಣಾಂದ್ರಿ. ಹೊಗಳೋ ವಿಷಯ ಬೇರೆ ಸೂಚಿಸಿದಿರಿ. ರೊಟ್ಟಿ ಅಂಚಿನ ರೇಷ್ಮೆ ಸೀರೇಂದ್ರಿ, ಬಾಗಿಲು ಮುಂದಕ್ಕೆ ಮಾಡೂಂತ ಅನ್ತಾ ಇದ್ದೀರಲ್ಲಾ, ಇಂಥಾ ಉಬ್ಬಸಾಣಿಕೆಗೆಲ್ಲಾ ಈ ರಾಜಮ್ಮ ಬಗ್ಗೋಳಲ್ಲಾಂತ ಇಷ್ಟು ವರ್ಷವಾದರೂ ನಿಮಗೆ ಅರ್ಥವಾಗದಿದ್ದುದು ಆಶ್ಚರ್ಯ"

"ಅರ್ಥವಾಗಿದೆ ಕಣೆ, ಗಾಳಿ ವಿಪರೀತ ಬೀಸ್ತಾ ಇದೆ. ಅವಕ್ಕೆ ಕೊಂಚ ಬಾಗಿಲು ಮುಂದಕ್ಕೆ ಮಾಡೂಂದಿದ್ದು"

"ಹಾಗೋ ಸರಿ ಸರಿ...."

''ಎಲ್ಲಿ ಇನ್ನೊಂದಿಷ್ಟು ಅಡಿಕೆ ಕೊಡು. ನೀನೇನು ಪ್ರಯೋಜನವಿಲ್ಲ ಕಣೆ, ವಿಪರೀತ ಸುಣ್ಣ ಹಾಕಿಬಿಡ್ತೀಯ ಎಲೆ ತುಂಬಾ–"

''ತೆಗಳಿಕೆಗಳು ಪ್ರಾರಂಭವಾದುವೇನೊ''

"ಇಲ್ಲ, ಸಾಕು ಸಾಕು ಎಷ್ಟು ಅಡಿಕೆ ಸುರೀತೀಯ"

''ಮುಂದಕ್ಕೆ ಆ ಸಿದ್ದಪ್ಪನವರ ವಿಷಯ ಹೇಳಲೇ ಇಲ್ಲವಲ್ಲಾ''

''ಹೇಳ್ತೀನಿ ಕೊಂಚ ತಡಕೋಬಾರದೇ, ಆಮೇಲೆ ಆ ಸಿದ್ದಪ್ಪನಿಗೆ 'ಐದು ಗಿಯ್ದು ಸುಳ್ಳು ಸಿದ್ದಪ್ಪನೋರೆ ನನಗೇನು ಶಿರಸ್ತಾರ್ರಿಗೆ ಬರೋ ಸಂಬಳ ಬರುತ್ಯೆ? ತೀರ ಭಾರಿ ಜರತಾರಿ ಬಾಬತ್ತು ಬೇಡ ಮೂರು ಬೆಟ್ಟಗಲ ಅಂಚಿಡಿ, ಸೆರಗಿಗೆ ಎರಡುಗೆರೆ ಒಂದು ಸಾಲು ಮಾವಿನಕಾಯಿ ಬಳ್ಳಿ ಇಟ್ಟು ಮಯೂರ ಕಲರ್ ಒಡ್ಲಿರಲಿ. ಮೂವತ್ತೈದು ರೂಪಾಯಿ ಏಳು ಕಂತು' ಎಂದು ಹೇಳಿ ಇನ್ನೂ ಹುಡುಕುತ್ತಲೇ ಇದ್ದೆ ಆತನಿಗೆ ಬೇಕಾದ ದರಕಾಸ್ತನ್ನ...."

"ಹೂಂ ಅಂದರೆ ಅವರು ?"

"ಹಾಗನ್ನೋವರೆಗೂ ಆ ದರಕಾಸ್ತೇ ಸಿಕ್ಕೋಲ್ಲವೆಂದು ಅವನಿಗೂ ಗೊತ್ತು. ಲೋಕಾಭಿರಾಮವಾಗಿ, 'ನೀವು ಹಾಗೆ ಖಾಯಿಷ್ ಪಟ್ಟಮೇಲೆ ನಾನು ಒಪ್ಪಿಕೊಳ್ಳದೆ ಇದ್ದರೆ ಆಗುತ್ಯೆ, ತಮ್ಮಿಷ್ಟ ಇದ್ದಂತೆ ಆಗಲಿ' ಎಂದು ಹೇಳುತ್ತಿದ್ದಂತೇ 'ದರಕಾಸ್ತು ಸಿಕ್ತು ಸಿದ್ದಪ್ಪನವರೇ' ಎಂದು ಪುಸ್ತಕ ಹೊರಕ್ಕೆ ತೆಗೆದೆ"

"ಹ್ಹ ಹ ಹ ಹ್ಹ....ಚೆನ್ನಾಗಿದೆ. ಆದರೆ ನೀವು ನಿಮ್ಮ ಕಚೇರಿ ವಿದ್ಯೆಯನ್ನೇ ಇಲ್ಲಿಯೂ ಪ್ರಯೋಗಿಸುತ್ತಿರುವುದು ಅಭ್ಯಾಸ ಬಲವೇನೊ ?"

"ಇಲ್ಲಿ ಏನು ನಾನು ಅಂಥ ಪ್ರಯೋಗ ನಡೆಸಿದ್ದು ?"

"ಪಾಪ ಏನೂ ಗೊತ್ತಿಲ್ಲ ನೋಡಿ–ಬಾಗಿಲಿಕ್ಕಿ ಬಳಿಗೆ ಬಂದು ಒರಗಿ ಕೂಡುವತನಕ ಸೀರೆ ಬರುವುದೆಂದು ಹೇಳಲೇ ಇಲ್ಲವಲ್ಲ ನೀವು"

"ಛೆ ಛೆ ಹಾಗೇನೂ ಇಲ್ಲ. ನನ್ನನ್ನು ತೀರ ಥೇಟ್ ತಾಲ್ಲೋಕು ಗುಮಾಸ್ತೆನ್ನ ಮಾಡಬೇಡ ಕಣೆ, ನಿನ್ನ ವಿಷಯಕ್ಕೂ ಲಂಚವಿಲ್ಲದೆ ಕೆಲಸ ಮಾಡಿ ಕೊಡದಷ್ಟು ಧಾರಾಳತನವಿಲ್ಲವೇನು ನನಗೆ...."

"ಇದೆಯೋ ಇಲ್ಲವೋ ಈಗ ನೀವೇ ಯೋಚಿಸಿ ನೋಡಿ"

—ಎಂದು ಮತ್ತೊಮ್ಮೆ ಮಾತಾಡಲು ಅವಕಾಶ ಕೊಡಲಿಲ್ಲ ರಾಜೀವಿ. ಅವಳು ಮೆದ್ದ ತಾಂಬೂಲದ ರಸದ ಮುದ್ರೆ ಅವನ ಕೆನ್ನೆಯನ್ನೂ ಚಿತ್ರಿಸಿತ್ತು. ಇಬ್ಬರಿಗೂ ಎಚ್ಚರವಾದದ್ದು ಹೊರಗಡೆ ಜೋರಾಗಿ ಶಾಮಣ್ಣ ಅಳುವ ಸದ್ದು ಕೇಳಿದಾಗಲೆ.

ಜನಾರ್ಧನಯ್ಯನ ಮನೆ ಮುಂದೆ ಪಟಾಕಿ ಹಾರಿಸುತ್ತಿದ್ದಾಗ ಇಬ್ಬರಿಗೂ ಉಳಿದ ಒಂದೇ ಒಂದು ಪಟಾಕಿ ಸರದ ಮಾಲೀಕತ್ವದ ಬಗ್ಗೆ ಭಿನ್ನಾಭಿಪ್ರಾಯ ಬಂದಿತ್ತು. ಸ್ವಯಂ ಜನಾರ್ಧನಯ್ಯನೇ ನಿಂತು ಈ ಜಗಳ ಹಚ್ಚಿದ್ದರು. ಸರಸ್ವತಿ ರಾಮಸುಂದರರಿಬ್ಬರಿಗೂ ತಂದುಕೊಟ್ಟ ಪಟಾಕಿಯಲ್ಲಿ ಅವರೇ ಸುಟ್ಟಿದ್ದರು. ಉಳಿದಿದ್ದಕ್ಕೆ ಇಬ್ಬರಿಗೂ ಒಬ್ಬರಮೇಲೊಬ್ಬರನ್ನು ಎತ್ತಿಕಟ್ಟಿ ಅವರ ಜಗಳ ನೋಡಿ ನಲಿಯುತ್ತಿದ್ದರು.

ಇವರ ಅಳು ಕೇಳಿ ರಾಜಮ್ಮ ಎದ್ದು ಬಾಗಿಲು ತೆಗೆದು ಹೊರಕ್ಕೆ ಬಂದಳು. ಜನಾರ್ಧನಯ್ಯನವರು ನಗುತ್ತಾ ನಿಂತಿದ್ದರು, ಇದು ತಮಾಷೆಗೆ ಅವರೇ ಹಚ್ಚಿದ ಜಗಳವೆಂದು ತಿಳಿಯಲು ಹೊತ್ತಾಗಲಿಲ್ಲ.

"ಯಾಕೆ ಸರಸು ಶಾಮುನ್ನ ಅಳಿಸೋದು ?"

"ಇಲ್ನೋಡಮ್ಮ ಜನಾರ್ಧನ ಮಾವ ಕೊಟ್ಟಿದ್ದು ನನಗೆ, ಇವನು ಕಿತ್ಕೊಳ್ಳೋಕೆ ಬರ್ತ್ತಾನೆ-ತನಗಾದರೂ ಹಚ್ಚೋಕೆ ಹೆದರಿಕೆ...."

"ಇಲ್ಲಾ ಕಣಮ್ಮ ಜನ್ನುಮಾವ ನಂಗೆ ಮೊದಲು ಕೊಟ್ಟಿದ್ದು"

"ಸಥ್ಯ ನೀನು ರಾಗತೆಗೆದು ಅಳಬೇಡ ಮಹಾರಾಯ-ಇವರಿಗೆ ಹೇಳಿ ನಿನಗೆ ತುಂಬಾ ಕೊಡಿಸ್ತೀನಿ"

"ಅಮ್ಮ ತುಂಬಾ ಪಟಾಕಿ ಕೊಡಸ್ತಾಳೇ...." ಎಂದು ಒಡನೆಯೇ ಕಿಲಿ ಕಿಲಿ ನಕ್ಕು ರಾಜಮ್ಮನ ಬಳಿ ಬಂದ. "ನಂಗೂ" ಎಂದು ರಾಗ ಎಳೆದು ಸರಸ್ವತಿಯೂ ಓಡಿಬಂದಳು.

ತಾಯಿ ಸಮಾಧಾನ-ಮಕ್ಕಳ ನಗುವಿನ ಆಟವನ್ನು ತುಂಬುಗಣ್ಣಿನಿಂದ ಹೊರಬಾಗಿಲಿಗೆ ಒರಗಿ ನೋಡುತ್ತಿದ್ದಳು ಸುಶೀಲ. ಮಕ್ಕಳಿಲ್ಲದ ಬರಿ ಬರಿದಾದ ಭಣ ಭಣಗುಟ್ಟುವ ತನ್ನ ಮನೆ ನೋಡಿ ಆ ದೀಪಾವಳಿಯ ದಿನವೂ ದುಃಖಿಸಿದಳು.

ಈ ಹುಡುಗರ ಆಟಕ್ಕೆ ನಕ್ಕು ಮನೆಯೊಳಕ್ಕೆ ಹೋಗಲು ನಿಂತ ಜನಾರ್ಧನಯ್ಯ-ರತಿಯಂಥ ಹೆಂಡತಿ, ಭಾರವಾದ ಕಣ್ಣುಗಳಿಂದ ಒಂಟಿ ಜೀವವದ ಭಾರಕ್ಕೆ ಬಳಲಿದಂತೆ ನೊಂದು ನಿಂತಿದ್ದು ನೋಡಿ ಅವನಿಗೂ ವ್ಯಥೆಯಾಯಿತು.

ಅದೇ ರಾತ್ರಿ ಸುಬ್ಬರಾಯನ ಮನೆ ಮುಂದೆ ಹುಡುಗರ ಜೊತೆ ಮತಾಪು, ಹೂವಿನ ಕಡ್ಡಿ ಹಚ್ಚಿದಳು ಸುಶೀಲೆ. ಸುಬ್ಬರಾಯನಿಗೆ ಯಾವುದೋ ಕಿನ್ನರ ಲೋಕದಲ್ಲಿದ್ದಂತೆ ಅನ್ನಿಸಿತು. ಹಸಿರು-ಕೆಂಪು ಮತಾಪಿನ ಬೆಳಕಿನಲ್ಲಿ ಸುಶೀಲೆ ರಂಜಿಸಿದಳು.

## ೨೦

ಸುಶೀಲೆಯ ಕುಡಿಗಣ್ಣು ನೋಟ–ಮೋಹಕ ಹಾವಭಾವಕ್ಕೆ ಸುಬ್ಬ ರಾಯ ತತ್ತರಿಸಿ ಹೋಗಿದ್ದ. ರಾಜೀವಿಯನ್ನು ಒಂದು ದಿನದಮಟ್ಟಿಗೂ ಬಿಟ್ಟಿರುತ್ತಿರಲಿಲ್ಲ. ಆದಷ್ಟು ಸುಶೀಲೆಯ ದರ್ಶನಕ್ಕೆ ಅವಕಾಶ ಕೊಡುತ್ತಿರಲಿಲ್ಲ.

ಈ ಮಧ್ಯೆ ರಾಜೀವಿಗೆ ಎರಡುಸಲ ಮೈ ಇಳಿದು ಪ್ರಕೃತಿ ಕೊಂಚ ಸೂಕ್ಷ್ಮ ವಾಗಿತ್ತು. ಮತ್ತೀಗ ನಾಲ್ಕು ತಿಂಗಳ ಬಸುರಿ. ಹಿರೇಹಳ್ಳಿಯಿಂದ ನಾಗ ರಾಜಜೋಯಿಸರು ಈ ಸಾರಿ ಖಂಡಿತ ಮಗಳನ್ನು ಕಳಿಸೇಕೊಡಬೇಕೆಂತಲೂ, ಕಿರಿಯ ಮಗ ಅಚ್ಯುತನನ್ನು ಕಳಿಸಿಕೊಡುವುದಾಗಿಯೂ ಬರೆದಿದ್ದರು. ತನ್ನ ಹೆಂಡತಿಯ ಆರೋಗ್ಯ ಸುಧಾರಿಸಬೇಕಾದರೆ ತೌರುಮನೆಗೆ ಅವಳು ಹೋಗಿ ಒಂದಷ್ಟು ದಿನ ಇದ್ದು ಬರುವುದೇ ಮೇಲೆಂದು ಅನ್ನಿಸಿತ್ತು.

ಈಗೀಗ ತುಂಬಾ ನಿತ್ರಾಣಳಾಗಿದ್ದಳು ರಾಜೀವಿ. ಅವಳಿಗೂ ತವರು ಮನೆಗೆ ಹೋಗಿಬರಬೇಕೆಂಬ ಬಯಕೆ ಪ್ರಬಲವಾಗಿತ್ತು. ಅಣ್ಣನಾದ ಜಗನ್ನಾ ಥನ ಹೆಂಡತಿ ಹೆತ್ತಿದ್ದು, ಮಗು ತುಂಬಾ ಚೆನ್ನಾಗಿದೆ ಎಂದು ಬರೆದಿದ್ದು ಅವ ಳಿಗೆ ಅತ್ತಿಗೆಯನ್ನೂ ಮಗುವನ್ನೂ ನೋಡಬೇಕೆಂದು ಆಸೆ. ಸರಸ್ವತಿ, ಶಾಮಸುಂದರರೂ ಅಜ್ಜಿ ಅಜ್ಜನನ್ನು ನೋಡಿ ಬಹುದಿನವಾಗಿತ್ತು. ಈಗ ಅಲ್ಲದೆ ಬೇರಾವಾಗಲೂ ಹೋಗಲು ಸದವಕಾಶ ದೊರೆಯದೆಂದು ರಾಜೀವಿಗೆ ಗೊತ್ತು. ಆ ದಿನ ಸಂಜೆ ಸುಬ್ಬರಾಯ ಮನೆಗೆ ಬರುತ್ತಲೂ ಸುಬ್ಬರಾಯ ನನ್ನು ಒಪ್ಪಿಸಿ ತಂದೆಗೆ ಕಾಗದಾ ಹಾಕಿದಳು. ಅಚ್ಯುತ ಬಂದು ಕರೆದೊಯ್ಯು ವುದಾಗಿ ಉತ್ತರವನ್ನೂ ಬರೆದಿದ್ದ.

ಶಾಮಸುಂದರ, ಸರಸ್ವತಿಯರ ಸಡಗರವೇ ಸಡಗರ, ಜನಾರ್ಧನಯ್ಯನ ಮನೆಗೆ ಹೋಗಿ ಸುದ್ದಿ ಸಾರಿಬಂದರು. ಈ ಸುದ್ದಿ ಕೇಳಿದ ಸುಶೀಲೆಗೆ ತಾನೂ ತೌರೂರಿಗೆ ಹೋಗಬೇಕೆಂದೆನಿಸಿತು. ಮರುಕ್ಷಣವೇ ಅಲ್ಲೇನು ಕೆಲಸ ಅಲ್ಲೂ ಬೇಸರ–ಇಲ್ಲೂ ಬೇಸರ ಎಂದುಕೊಳ್ಳುವಳು. ಶಾಮಸುಂದರ, ಸರಸ್ವತಿಯ ರಿದ್ದದ್ದು ಜನಾರ್ಧನಯ್ಯ ಸುಶೀಲೆಯರಿಗೆ ತಮ್ಮ ಮಕ್ಕಳೇ ಎಂಬ ಅಭಿಮಾನ, ಪ್ರೀತಿ ಇತ್ತು.

ಹಿತ್ತಲಕಡೆ ಭಾವಿಯ ಬಳಿ ಉಪಗಾರಣಗೆ ಹಾಕಿಕೊಂಡು ತಿಕ್ಕು ತ್ತಿದ್ದಾಗ ಸುಶೀಲೆಯೇ ನೀರು ಸೇದಿಕೊಟ್ಟಳು. ಹಾಗೇ ರಾಜೀವಿಯ ತವರೂರು ಪ್ರಯಾಣದ ಮಾತು ಹೊರಳಿತು—

"ಈ ಸಾರಿ ಹೋದರೆ ಮತ್ತೆ ಬರೋದು ಎಷ್ಟು ದಿನವಾಗುತ್ತೆ ರಾಜಮ್ಮ?"

"ಬಾಣಂತನ ಮಾಡಿಕೊಂಡೇ ಬರಬೇಕೆಂದಿದ್ದೇನೆ. ಇವರೆಲ್ಲಿ ಬಿಡ್ತಾರೆ ........ತವರುಮನೆಗೆ ಕಳಿಸಬೇಕೆಂದರೇ ಇವರಿಗೆ ಮನಸ್ಸಿರೋಲ್ಲ........ನೀವು ಬರುತ್ತೀರಾ ಸುಶೀಲಮ್ಮಾ...."

—ಈ ಮಾತಾಡಿದಾಗ ಸುಶೀಲೆಗೆ ವಿಚಿತ್ರ ಸಂಕಟವಾಯಿತು. ತನ್ನ ಯಜಮಾನರು ಹೀಗೇ ಇರಬಾರದಾಗಿತ್ತೆ, ತನಗೇಕೆ ಸುಬ್ಬರಾಯನಂಥ ಗಂಡ ಸಿಕ್ಕಬಾರದಿತ್ತು ಎಂದೆನಿಸಿತು. ಮರುಕ್ಷಣವೆ ಮನಸ್ಸಿನ ಅಂಧತೆಗೆ ನಾಚಿ ನುಡಿದಳು—

"ನನಗೆ ಬೇಜಾರು ರಾಜಮ್ಮ-ಇಲ್ಲಿಯೂ ಬೇಜಾರು, ಅಲ್ಲಿಯೂ ಬೇಜಾರು. ನೀವು ಇದ್ದದ್ದು ನನಗೆ ಹೊತ್ತು ಹೋಗುವುದೇ ಗೊತ್ತಾಗುತ್ತಿರ ಲಿಲ್ಲ. ಹುಡುಗರು ಹಾಕುತ್ತಿದ್ದ ಗಲಾಟೆ, ಅವರ ಆಟದಲ್ಲಿ ವ್ಯೆಮರೆಯಬಹು ದಿತ್ತು, ಇನ್ನು ಅದೂ ತಪ್ಪಿಹೋಗುತ್ತೆ'

—ಎಂದು ಸುಶೀಲೆ ಹೇಳಿದಾಗ ಮಾತಿನಲ್ಲಿ ನೋವಿತ್ತು. ಎಲ್ಲಿಹೋದರೂ ತನ್ನ ಬೇಸರ ಕಳೆಯುತ್ತಿರಲಿಲ್ಲ. ಎಂದಾಗ ತಾನು ಒಂಟಿ ಜೀವ, ಮಕ್ಕ ಳಿಲ್ಲದೇ ಈ ಎಲ್ಲ ಬೇಸರದ ದುಃಖಕ್ಕೆ ಕಾರಣವೆಂದು ಅವಳ ಒಳಮನಸ್ಸು ಚೀರುತ್ತಿತ್ತು. ಈ ವಿಚಾರವರಿಯಬಲ್ಲವಳಾಗಿದ್ದಳು ರಾಜಮ್ಮ.

"ನೀವು ನಾಗಪ್ರತಿಷ್ಟೆ ಮಾಡಿದರೆ ಖಂಡಿತ ಒಳ್ಳೆಯದಾಗುತ್ತೆ. ದಿನ ವಹಿ ಅಶ್ವತ್ಥ ಪ್ರದಕ್ಷಿಣೆ ಮಾಡಿ. ಇದೆಲ್ಲ ಗೊಡ್ಡು ನಂಬಿಕೆ ಎಂದು ಮೂದಲಿಸ ಬೇಡಿ"

"........ಅಶ್ವತ್ಥ ಪ್ರದಕ್ಷಿಣೆ ಏನೋ ನಾಳಿನಿಂದ ಪ್ರಾರಂಭಿಸೋಣ ವೆಂದಿದ್ದೇನೆ. ಚಿಕ್ಕ ಮಾವನವರೂ ನಾಗಪ್ರತಿಷ್ಟೆಯ ಬಗ್ಗೆ ಅನೇಕ ಕಾಗದ ಹಾಕಿದರು. ಇವರು ಅವರ ಕಚೇರಿ ಬಿಟ್ಟು ಇದರ ಕಡೆ ಗಮನಕೊಟ್ಟರೆ ತಾನೆ? ಅವರಾಯ್ತು ಅವರ ಕಚೇರಿಯಾಯ್ತು"

—ಈ ಮಾತು ಹೇಳುವಾಗ ದುಃಖ ಮೂಡಿತ್ತು ಕಣ್ಣಲ್ಲಿ. ಸುಶೀಲೆಯನ್ನು ಸಂತೈಸಿ ರಾಜಮ್ಮ ಹೇಳಿದಳು

"ನಾನೂ ಜನಾರ್ಧನಯ್ಯನವರಿಗೆ ಹೇಳುತ್ತೇನೆ........ರಜಾ ಹಾಕಿಯಾದರೂ ವಿದುರಾಶ್ವತ್ಥಕ್ಕೆ ಹೋಗಿಬನ್ನಿ ಖಂಡಿತ ಒಳ್ಳೆದಾಗುತ್ತೆ"

"ಏನು ಒಳ್ಳೇದಾಗುತ್ತೋಮ್ಮ....ನಾ ಬೇರೇ ಕಾಣೆ"

ತೊಳೆದ ಉಪ್ಪುಗಾರಣೆ ಪಾತ್ರೆಗಳನ್ನು ಜೋಡಿಸಿಕೊಂಡು ಎದ್ದಳು ರಾಜಮ್ಮ. ಸುಶೀಲ ಹಾಗೇ ನೀರು ಸೇದಿ ಹಂಡೆಗೆ ತುಂಬ ತೊಡಗಿದಳು.

ಅಚ್ಯುತಜೋಯಿಸ ತಂಗಿಯನ್ನು ಕರೆದೊಯ್ಯಲು ಮೊಳಕಾಲ್ಮೂರಿಗೆ ಬಂದಿದ್ದ. ರಾಜೀವಿಯ ಸಂಭ್ರಮ ಹೇಳತೀರದು. ಬಹುದಿನದ ನಂತರ ತವರುಮನೆಯ ಬಳಗವೇ ಬಂದಿರಲಿಲ್ಲ. ಒಂದಲ್ಲ ಒಂದು ಕಾರಣದಿಂದ ಬರಲಿಕ್ಕೆ ಜಗನ್ನಾಥನಿಗಾಗಲಿ ಅಚ್ಯುತನಿಗಾಗಲಿ ಆಗಿರಲಿಲ್ಲ. ಶಾಮಸುಂದರನ ಮೂರನೆ ವರ್ಷದ ಹುಟ್ಟಿದ ಹಬ್ಬಕ್ಕೆ ನಾಗರಾಜಜೋಯಿಸರು, ರಂದಮ್ಮ, ಜಗನ್ನಾಥ, ಅಚ್ಯುತ ಎಲ್ಲರೂ ಬಂದದ್ದೇ ಕಡೆಯ ಬಾರಿ.

ಸರ್ಕಾರಿ ಕೆಲಸದ ರೋಣುಗಲ್ಲಿಗೆ ಹೆಗಲುಕೊಟ್ಟ ಸುಬ್ಬರಾಯ ದುಡಿಯುವ ಎತ್ತಿನಂತೆ ಸುತ್ತುತ್ತಿದ್ದನಲ್ಲದೆ, ಲಕ್ಷ್ಮಣನ ದರ್ಬಾರಿನಲ್ಲಿ ಹಾಳಾಗುತ್ತಿದ್ದ ಹೊಲಮನೆಯ ವಿವರಗಳತ್ತಲೇ ಲಕ್ಷ್ಯ ಕೊಡದವನು ಇನ್ನು ಅತ್ತೆಮನೆಯವರತ್ತ ಅವನು ಗಮನ ಕೊಡುವನೆ ?

ಅನೇಕ ಬಾರಿ ರಾಜೀವಿ "ಅದೇನು ಕೆಲಸವೋ ಕಾಣೆ–ಸಂಸಾರಕ್ಕಿಂತ ಕಚೇರಿಯೇ ಹೆಚ್ಚು ನಿಮಗೆ'' ಎಂದು ಮೂದಲಿಸಿದ್ದುಂಟು.

ಈಗ ಅಚ್ಯುತ ಬಂದಾಗ–ರಾಜೀವಿಯ ಬಲವಂತಕ್ಕೆ ಮೊಳಕಾಲ್ಮೂರಿನ ಗುಡ್ಡವನ್ನು ತೋರಿಸಿಕೊಂಡು ಬಂದಿದ್ದ. ಮಕ್ಕಳು ಅಚ್ಯುತ, ಜನಾರ್ಧನಯ್ಯ, ಸುಶೀಲೆ ಇಷ್ಟು ಜನ ಗುಡ್ಡಕ್ಕೆ ಹೋಗಿದ್ದರು. ಗರ್ಭಿಣಿಯಾದ ರಾಜೀವಿಗೆ ಗುಡ್ಡ ಹತ್ತಲು ಆಗುತ್ತಿರಲಿಲ್ಲವಾಗಿ ಅವಳು ಮನೆಯಲ್ಲೇ ಇದ್ದಳು. ನೀಲಿಯ ಸೀರೆಯುಟ್ಟು ಅಗಲವಾದ ಬೊಂಬಾಯಿ ತುರುಬಿನಲ್ಲಿ ಮಲ್ಲಿಗೆ ದಂಡೆ ಮುಡಿದು ಹಸಿರುರವಿಕೆ ತೊಟ್ಟು ಬೆಟ್ಟದ ಬಂಡೆಯಮೇಲೆ ನಿಂತಾಗ ಮುಳುಗುತ್ತಿದ್ದ ಸೂರ್ಯನ ಹೊನ್ನು ಕಿರಣ ಈ ರತಿಯ ಮೇಲೆ ಚೆಲ್ಲಿ ಬಂಗಾರದ ಪುತ್ಥಳಿಯಂತೆ ಕಂಗೊಳಿಸಿದಳು ಸುಶೀಲ. ಕಣ್ಣು ದಣಿಯುವಂತೆ

ನೋಡಿದ ಸುಬ್ಬರಾಯ, ಕುಡಿಗಣ್ಣಲ್ಲಿ ಅವನನ್ನು ತುಂಬಿಕೊಂಡಳು ಸುಶೀಲೆ.

ಕಟ್ಟಿಕೊಂಡು ಹೋದ ಹುಳಿಯನ್ನ, ಸೊಂಡಿಗೆ, ಮೊಸರು ಅನ್ನವನ್ನು ಜೋಗಪ್ಪನ ಗುಡ್ಡದ ಕೂಗುಬಂಡೆಯ ಬಳಿ ಎಲ್ಲರನ್ನೂ ಕೂಡಿಸಿ ಸುಶೀಲೆ ಬಡಿಸಿದಳು.

ಸರಸ್ವತಿ ಸಿಳ್ಳುಹಾಕಿದಂತೆ ಕೂಗಿದಳು—ಕೂಗುಬಂಡೆ ಪ್ರತಿಧ್ವನಿಸಿತು. ಗುಡ್ಡದ ಹಿಂಬದಿಯಿಂದ ಯಾರು ತಾವು ಕೂಗಿದಂತೆ ಕೂಗುವರು ?—ಪರಮಾಶ್ಚರ್ಯವಾಯಿತು ಅಚ್ಯುತನಿಗೆ.

ಹಿಂದೆ ಅನೇಕಬಾರಿ ಈ ಕೂಗು ಬಂಡೆಗೆ ಬಂದಿದ್ದರೂ ಸುಶೀಲೆಗೆ ತಾನೂ ಈ ಹುಡುಗರಂತೆ ಕೂಗಬೇಕು ಎಂದೆನಿಸಿತು....

"ಜೋಗಪ್ಪೋ‍ೀೀ........'' ಎಂದಾಗ ಒಂದು ಅರ್ಧ ಸೆಕೆಂಡು ತಡೆದು

"ಜೋಗಪ್ಪೋ‍ೀೀ....'' ಎಂದು ಪ್ರತಿ ಧ್ವನಿಸಿತು.

"ಏನು ಬೇಕು ? ''

"........ನು ಬೇಕು ? "

"ಹಣ್ಣು ಬೇಕ ? ''

"........ಣ್ಣು ಬೇಕ ? ''

—ಎಂದು ತನ್ನನ್ನು ಅಣಗಿಸಿದಂತೆ ಅದೇ ಸ್ವರ, ಅದೇ ಛಾಯೆಯಲ್ಲಿ ಪ್ರತಿಧ್ವನಿಸುತ್ತಿದ್ದುದು ಬಹು ಮೋಜೆನಿಸುತ್ತಿತ್ತು. ಸುಶೀಲೆಗೆ ಹಣ್ಣು ಬೇಕೆ ಎಂದಾಗ ಸುಬ್ಬರಾಯನಿಗೆ "ಹೂಂ" ಎನ್ನುವಂತೆ ಆಯ್ತು. ಸಂಜೆಯಾಗುತ್ತ ಬೇಗ ಗುಡ್ಡ ಇಳಿಯುವ ಎಂದು ಅಚ್ಯುತನ ಹೆಗಲ ಮೇಲೆ ಶಾಮ ಸುಂದರ ಕುಳಿತ. ಎಲ್ಲರೂ ಗುಡ್ಡ ಇಳಿದು ಮನೆ ಸೇರಿದಾಗ ರಾಜೀನಿ ಲಾಟೀನು ಒರೆಸಿ ದೀಪ ಹಚ್ಚುತ್ತಿದ್ದಳು.

"ಅಮ್ಮಾ ಜೋಗಪ್ಪನ್ನ ನಾನೂ ಮಾತಾಡಿಸಿದೆ" ಎಂದು ಹೌಹಾರಿ ಅಪ್ಪಿಕೊಂಡು ಹೇಳಿದ ಶಾಮಣ್ಣ. ಬೆಟ್ಟವನ್ನು ಹತ್ತುವವರೆಗಿನಿಂದ ಇಳಿದು ಮನೆ ಸೇರುವತನಕ ನಡೆದ ಪ್ರತಿ ಸಂಗತಿಯನ್ನು ವಿವರಿಸಿ ಹೇಳಿದಳು ಸರಸ್ವತಿ. ಹುಳಿಯನ್ನವನ್ನು ಹೊಗಳಿದ ಅಚ್ಯುತ.

ಬೆಪ್ಪನಂತೆ ನಿಂತಿದ್ದುದು ಸುಬ್ಬರಾಯ ಮಾತ್ರ. ಹೂ ಮುಡಿದು ಬಂಡೆಯ ಮೇಲೆ ನಿಂತ ಸುಶೀಲೆಯ ಸೌಂದರ್ಯವನ್ನು ನೆನೆದು ಮೆಲುಕು

ಹಾಕುತ್ತಿದ್ದ. ಈಚೀಚೆಗೆ ತನ್ನ ಮನಸ್ಸು ಹರಿದೋಡುತ್ತಿದ್ದ ರೀತಿಗೆ ಅವನಿಗೇ ಅನೇಕಸಲ ಛೀಮಾರಿ ಹಾಕಿಕೊಳ್ಳುವಂತಾಗುತ್ತಿತ್ತು.

ಆ ರಾತ್ರಿ ಸುಶೀಲೆಯ ಮನಸ್ಸು ಜೋಕಾಲಿಯಂತೆ ಜೋಲಿ ಹೊಡೆಯುತ್ತಿತ್ತು. ಜನಾರ್ಧನಯ್ಯ ಬಂದು ಬದಿಗೆ ಸರಿದು ತನ್ನ ರತಿಯಂಥ ಮಡದಿಯ ಕೆನ್ನೆಗೆ ಕೆನ್ನೆ ಹಚ್ಚಿದಾಗ, ಒಂದುಕ್ಷಣ ಆ ಕೆನ್ನೆ ಸುಬ್ಬರಾಯನದಾಗಬಾರದಿತ್ತೆ ಎಂದು ಅನ್ನಿಸುವುದು. ಮರುಕ್ಷಣವೇ ತನ್ನ ಮನಸ್ಸಿನ ಮೂಢತನಕ್ಕೆ ಮರುಗಿ ರಾಜೀವಿಯ ಮಕ್ಕಳು ನೆನಪಿಗೆ ಬರುವುದು. ಮನಸ್ಸಿಲ್ಲದ ಮನಸ್ಸಿನಲ್ಲಿ ಜನಾರ್ಧನನ ಅಪ್ಪುಗೆಗೆ 'ಓ' ಕೊಡುವಳು.

ರಾಜೀವಿ ಊರಿಗೆ ಹೊರಟು ನಿಂತಿದ್ದಳು. ಅವಳ ಚಿಂತೆ ತಾನು ತವರೂರಿಗೆ ತೆರಳಿದ ಮೇಲೆ ತನ್ನ ಯಜಮಾನರ ಊಟದ ತಿಂಡಿಯ ವ್ಯವಸ್ಥೆಗೇನು ಮಾಡುವುದು ಎಂಬುದಾಗಿತ್ತು.

ಸಾಮಾನು ಕಟ್ಟುವಾಗ ಸುಶೀಲೆಯೂ ಅಲ್ಲಿದ್ದಳು, ಸುಬ್ಬರಾಯನೂ ಅಲ್ಲಿದ್ದ. ರಾಜೀವಿಯೇ ಮಾತು ತೆಗೆದಳು.

"....ನಾನೇನೋ ಹೊರಟುನಿಂತೆ. ನಿಮಗೆ ಊಟದ ವ್ಯವಸ್ಥೆಯಕಡೆ ಗಮನವೇ ಹೋಗಲಿಲ್ಲ...."

"..........." ಸುಬ್ಬರಾಯ ಮಾತಾಡಲಿಲ್ಲ.

"ಇದೇನು ಹೀಗನ್ನುತ್ತೀರಿ ರಾಜಮ್ಮ, ನಾವೇನು ಇದ್ದು ಸತ್ತವರೇನು ? ........"

"ಒಂದು ದಿನವಲ್ಲ ಎರಡು ದಿನವಲ್ಲ, ತಿಂಗಳಾನುಗಟ್ಟಲೆ ಹುಡುಗಾಟವೇ ........"

"....ಮತ್ತೆ ಗಂಡಸರೇ ಅಡಿಗೆ ಕೆಲಸ ಕಚೇರಿ ಕೆಲಸ ಮಾಡುವುದು ನಡೆಯುವ ಮಾತೇ....?"

"ಅದೇ ನನಗೆ ಯೋಚನೆ...."

"ಆ ಯೋಚನೆಯನ್ನೇ ನೀವು ಮಾಡಕೂಡದು ರಾಜಮ್ಮ—ನೀವು ನನಗೆ ಅಕ್ಕನಂತಿರುವಿರಿ. ಅಕ್ಕನ ಗಂಡನ ಯೋಗಕ್ಷೇಮ ತಂಗಿ ನೋಡಿಕೊಳ್ಳಲಾರಳೇನು ?"

"..............." ಸುಬ್ಬರಾಯನ ಎದೆ ಬಡಿದುಕೊಳ್ಳುತ್ತಿತ್ತು.

"ಹಾಗಂದರೆ-ಒಂದು ಕೆಲಸ ಮಾಡುವ, ನಮ್ಮ ಮನೆಯಲ್ಲಿನ ಅಕ್ಕಿ ಬೇಳೆ ಹುಣಸೇಹಣ್ಣು ಎಲ್ಲಾ ನಿಮ್ಮ ಮನೆಗೆ ಸಾಗಿಸಬೇಕು. ಅದಕ್ಕೆ ಒಪ್ಪುವುದಾದರೆ ನಿಮ್ಮ ಮಾತಿಗೆ ನನ್ನ ಒಪ್ಪಿಗೆ...."

"..............." ಅವನ ಊಟದ ವ್ಯವಸ್ಥೆಯ ಜವಾಬ್ದಾರಿಯನ್ನು ಹೊತ್ತ ರಾಜೀವಿ ತನ್ನ ಏರ್ಪಾಟಿನಲ್ಲಿ ಸುಬ್ಬರಾಯನ ಸಲಹೆಯನ್ನೇ ಪಡೆಯದೆ ತನ್ನ ತೀರ್ಮಾನಕ್ಕೆ ಒಪ್ಪಲೇಬೇಕು, ಒಪ್ಪಿಯೇ ಒಪ್ಪುತ್ತಾರೆ ಎನ್ನುವ ಸಂಪೂರ್ಣ ಭರವಸೆಯಿಂದ ವ್ಯವಹರಿಸುತ್ತಿದ್ದಳು.

"ಇದು ಸರಿಯಾದ ಮಾರ್ಗವಲ್ಲವೇನ್ರಿ?"

"ನೀವಿಬ್ಬರೇ ಮಾತಾಡಿಕೊಂಡು ಒಮ್ಮಿಂದೊಮ್ಮೆಲೆ ಇದು ಸರಿಯೋ ಎಂದು ಕೇಳಿದರೆ ನಾನೇನು ಹೇಳಲಿ...."

"ಸರಿಹೋಯ್ತು, ಇಷ್ಟುಹೊತ್ತು ಸುಶೀಲಮ್ಮನಿಗೆ ನಾನು ಹೇಳಿದ್ದು ನೀವು ಕೇಳಲಿಲ್ಲವೆ?"

"ಇಲ್ಲ........"

"ನಾನು ಊರಿಗೆ ಹೋದಮೇಲೆ ಸುಶೀಲೆಯ ಮನೆಯಲ್ಲೇ ನಿಮ್ಮ ಭೋಜನ. ಹೊತ್ತಿಗೆ ಸರಿಯಾಗಿ ಬಂದು ಜನಾರ್ಧನಯ್ಯನೊಡನೆ ಜಗಳವಾಡದೆ ಇರಬೇಕು....ಆಂ" ಎಂದು ಮಗುವಿಗೆ ಹೇಳಿದಂತೆ ಹೇಳಿದಳು. ಪ್ರೇಮದಿಂದ ಹೇಳಿದ ಆ ಮಾತು ಸುಬ್ಬರಾಯನಿಗೆ ರಾಜೀವಿಯನ್ನು ಬಿಟ್ಟಿರುವುದು ಹೇಗೆ ಎಂದು ಅನ್ನಿಸಿತು.

ಸುಶೀಲೆ "ರಾಜಮ್ಮ, ನಿಮ್ಮ ಯಜಮಾನರ ಜವಾಬ್ದಾರಿ ನನ್ನ ಮನೆಯವರು ವಹಿಸಿರುವಂತೆ ಹೇಳಿ ನೀವು ವಾಪಸ್ಸು ಬರುವತನಕ ನೋಡಿಕೊಳ್ಳುವಂತೆ ಹೇಳುವೆ" ಎಂದಳು.

"ನಾನೇನು ಕೂಸೆ ಕುನ್ನಿಯೆ, ನಿಮ್ಮಿಬ್ಬರಿಗೂ ನನ್ನ ಚಿಂತೆಯೇ ದೊಡ್ಡದಾದಂತಿದೆ" ಎಂದ ಸುಬ್ಬರಾಯ.

"ರಾಜಮ್ಮನಿಗೆ ಅದೇ ಚಿಂತೆ. ತಾವು ಊರಲಿಲ್ಲದಾಗ ಎಲ್ಲಿ ಸೊರಗಿ ಹೋದಾರೋ ತಮ್ಮ ಯಜಮಾನರೂ ಅಂತ ಯೋಚನೆ"

"ನೀವು ಸುಮ್ಮನಿರಿ ಸುಶೀಲಮ್ಮ-" ಎಂದು ಮುನಿದಳು ರಾಜೀವಿ. ಈ ಹೊತ್ತಿಗೆ ಜನಾರ್ಧನನೂ ಬಂದ. ನಡೆದ ವಿವಾದದ ವಿವರ ಕೇಳಿ ತೀರ್ಪು ಕೊಡುವವರಂತೆ ಹೇಳಿದ

"ನಮ್ಮ ಮನೆಯಲ್ಲಿ ಸುಬ್ಬರಾಯರನ್ನು ಗಿಣಿ ಸಾಕಿದ ಹಾಗೆ ಸಾಕುತ್ತೇನೆ"

"ಅಂದರೇನು ಪಂಜರದಲ್ಲಿಟ್ಟು ಡೊಣ್ಣೆ ಮೆಣಸಿನಕಾಯಿ ಹಾಕಲಿಕ್ಕಿಲ್ಲ ತಾನೆ ?" ಎಂದ ಸುಬ್ಬರಾಯ.

"ಅದು ನಮಗೆ ಹತ್ತಿದ ಚಿಂತೆ. ನಿಮ್ಮಂಥ ಗಿಣಿ ನಮ್ಮ ಕೈಗೆ ಕೊಟ್ಟು ಹೋದ ರಾಜಮ್ಮನಿಗೆ, ಕೊಡುತ್ತಿರುವುದು ಬೆಕ್ಕಿಗೋ ಅಲ್ಲವೋ ಅನ್ನುವುದು ಗೊತ್ತಿದೆ" ಎಂದಾಗ ಎಲ್ಲರೂ ನಕ್ಕರು. ಸುಶೀಲೆಗೆ ಅಂತೂ ಗಿಣಿ ತನ್ನ ಮನೆಗೇ ಬರುವುದಲ್ಲಾ ಎಂದು ಹರ್ಷ.

ಅಚ್ಯುತನ ಜೊತೆಗೆ ಎಲ್ಲರೂ ಹೊರಟರು. ಮನಸಿಲ್ಲದೆ ಹೊರಟಿದ್ದಳು ರಾಜೀವಿ. ಅದೇಕೋ ಈ ಬಾರಿ ಹೊರಟಾಗ ಮನಸ್ಸು ಅಳುಕಿ ಬೇಡಬೇಡ ಎಂದು ಹೇಳಿದಂತಾಗುತ್ತಿತ್ತು. ಕೊಂಚ ಆರೋಗ್ಯ ಸುಧಾರಿಸಿದ ಕೂಡಲೆ ಬಂದುಬಿಡುವುದಾಗಿ ನಿಶ್ಚಯಿಸಿದ್ದಳು.

ಸರಸ್ವತಿ, ಶಾಮಸುಂದರರು ಅಜ್ಜನ ಊರಿಗೆ ಹೊರಟು ನಿಂತಿದ್ದರು. ಅವರಿಬ್ಬರ ಉತ್ಸಾಹ, ಕುಣಿತ ಹೇಳತೀರದು.

ಮೋಟಾರಿನಲ್ಲಿ ಕುಳಿತಾಗ ರಾಜೀವಿಗೆ ಕಣ್ಣಲ್ಲಿ ನೀರು ಮೂಡಿತು. ಇಳಿದು ವಾಪಸ್ಸು ಹೊರಟುಬಿಡಲೇ ಎಂದೆನಿಸಿತು. ಇದೇಕೆ ಹೀಗೆ! ಅವಳಿಗದು ಅರ್ಥವಾಗಲಿಲ್ಲ. ತನ್ನ ಹೃದಯೇಶ್ವರನನ್ನು ಕದ್ದುಬಿಡಬಹುದೆಂಬ ಮೂಕ ವ್ಯಥೆ ಅವಳಿಗೆ ಅರ್ಥವಾಗುತ್ತಿರಲಿಲ್ಲ.

ಕೆಂಧೂಳು ಚೆಲ್ಲುತ್ತಾ ತಿಪ್ಪೆಸ್ವಾಮಿ ಮೋಟಾರು ಚಿತ್ರದುರ್ಗದತ್ತ ರಾಜೀವಿ, ಸರಸ್ವತಿ, ಶಾಮಸುಂದರ, ಅಚ್ಯುತ ಜೋಯಿಸರನ್ನು ಕರೆದುಕೊಂಡೊಯ್ಯಿತು. ಚಿತ್ರದುರ್ಗದಿಂದ ಆ ಸಂಜೆಯೇ ರೈಲು ಹತ್ತಿ ಶಿವಮೊಗ್ಗೆಗೆ ಹೊರಟರು.

ಚಿಕ್ಕಜಾಜೂರು ರೈಲ್ವೆ ಸ್ಟೇಷನ್ನಿನಲ್ಲಿ ರೈಲು ಬದಲಿಸುವಾಗ ವಿಪರೀತ ಗದ್ದಲವಿದ್ದುದರಿಂದ ರಾಜೀವಿ ಮಕ್ಕಳೊಡನೆ ಹೆಂಗಸರ ಗಾಡಿಯಲ್ಲಿ ಕುಳಿತಳು. ಅಚ್ಯುತ ಬೇರೆಕಡೆ ಕುಳಿತ.

ಆ ಹೆಂಗಸರ ಗಾಡಿಯಲ್ಲಿ ಮೊಳಕಾಲ್ಮೂರಿನಿಂದ ಜೊತೆಗೇ ಬಂದ ಲೀಲಾವತಿ ಕುಳಿತಿದ್ದಳು. ಲೀಲಾವತಿ ಸರಸ್ವತಿಯ ಶಾಲೆಯ ಮೇಡಮ್ಮು. ರಾಜೀವಿಗೆ ನಿಕಟ ಪರಿಚಯ ಇಲ್ಲದಿದ್ದರೂ ಸರಸ್ವತಿಯನ್ನು ಮಾತನಾಡಿಸಿದ ಮೇಲೆ, ಒಂದೇ ಬಸ್ಸಿನಲ್ಲಿ ರೈಲಿನಲ್ಲಿ ಪ್ರಯಾಣ ಮಾಡಿದ ಮೇಲೆ ತುಂಬಾ ಪರಿಚಿತರಷ್ಟೇ ಸ್ನೇಹ ಬೆಳೆದು ಬಂದಿತ್ತು.

ಲೀಲಾವತಿ ತಿಪಟೂರಿಗೆ ಹೊರಟಿದ್ದಳು. ಆ ಕತ್ತಲಲ್ಲಿ ರೈಲು ವೇಗವಾಗಿ ಸಾಗಿತ್ತು. ಗಾಡಿಯಲ್ಲಿರುವವರು ತೂಕಡಿಸುತ್ತಾ ಇದ್ದರು. ರಾಜೀವಿ–ಲೀಲಾವತಿ ಮಾತ್ರ ಮೊಳಕಾಲ್ಮೂರಿನ ಮಾತು ಮತ್ತೆ ಲೀಲಾವತಿಯ ಮನೆಯ ಮಾತಿನಲ್ಲಿ ಲೀನವಾಗಿದ್ದರು. ಲೀಲಾವತಿಗೆ ರಾಜೀವಿ ತನ್ನ ಅನಾರೋಗ್ಯದ ವಿಚಾರ, ತನ್ನ ಮನೆಯವರ ವಿಚಾರವನ್ನೆಲ್ಲಾ ಹೇಳಿದಳು. ಲೀಲಾವತಿಗೂ ಸುಬ್ಬರಾಯನ ವಿಷಯ ಗಾಳಿಯಲ್ಲಿ ತೂರಿ ಬಂದಿತ್ತು. ಬೆಕ್ಕು ಕಣ್ಣುಮುಚ್ಚಿ ಹಾಲು ಕುಡಿದಂತೆ ಸುಬ್ಬರಾಯ ಸುಶೀಲೆಯರ ಕುಡಿಗಣ್ಣೋಟ, ಅವರಿವರ ಮನೆಯಲ್ಲಿನ ಸಲಿಗೆಯ ನಡತೆ ಇವರನ್ನು ಬಲ್ಲ ಅನೇಕರಲ್ಲಿ ಸುಬ್ಬರಾಯ ಸುಶೀಲೆಯರ ಅಕ್ರಮ ಸಂಬಂಧವಿದೆ ಎಂದು ಕೆಟ್ಟ ಸುದ್ದಿ ಹರಡಿತ್ತು. ತನ್ನ ಮನೆಗೆಲಸದಲ್ಲಿ ಇನ್ನೊಬ್ಬರಗೊಡವೆಗೆ ಹೋಗದ ರಾಜೀವಿಗೆ ಈ ಸುದ್ದಿ ಕಿವಿಗೆ ಮುಟ್ಟಿರಲಿಲ್ಲ.

ರಾಜೀವಿಯ ಸರಳತೆ–ಸುಶೀಲೆಯ ಚಂಚಲತೆ, ರಾಜೀವಿಯ ಸಾಧಾರಣ ನಿರಾಡಂಬರ ಉಡುಗೆ–ಸುಶೀಲೆಯ ಅತಿ ಅಲಂಕಾರ ಪ್ರಿಯತೆ, ರಾಜೀವಿಯ ಗಂಭೀರ ನಡತೆ–ಸುಶೀಲೆಯ ಮಾದಕ ಮೋಹಕ ಆಕರ್ಷಕ ನಡತೆ ಯಾರಲ್ಲೂ ಈ ಸಂದೇಹ ಮೂಡಿಸುವುದು ಸಹಜ. ಜನಕ್ಕೇನು ಇಂತಹ ಸುದ್ದಿಗೇ ಕಾದಿರುವರು. ಬಹುಮಂದಿಯ ಕಿವಿಯಿಂದ ಕಿವಿಗೆ ಸುಶೀಲೆ ಸುಬ್ಬರಾಯರ ಸಂಬಂಧದ ಸುದ್ದಿ ಹರಡಿದ್ದು ನಿಜ.

ಲೀಲಾವತಿಗೆ ರಾಜೀವಿಯನ್ನು ನೋಡಿ ಮರುಕವಾಯಿತು. ಎಂತಹ ಮುಗ್ಧ ಮಹಿಳಾಮಣಿ ಈಕೆ. ತನ್ನ ಯಜಮಾನರ ವಿಷಯವನ್ನೇ ತಿಳಿಯದವಳು ಎಂದುಕೊಂಡಳು.

ಮಾತಿಗೆ ಮಾತು ಬಂದು ಲೀಲಾವತಿ ಹೇಳಿದಳು–

"ನೀವು ಊರುಬಿಟ್ಟು ಬರಬಾರದಾಗಿತ್ತು...."

"ತವರು ಮನೆಗೆ ಹೋಗಿ ಬಹಳ ದಿನವಾಗಿತ್ತು"

"ನಿಮಗೆ ಹೀಗೆ ಮೈಲಿ ಚೆನ್ನಿಲ್ಲದೆ ಎಷ್ಟುದಿನವಾಯ್ತು ?"

"ನಮ್ಮ ಶಾಮಸುಂದರ ಹುಟ್ಟಿದ ಮೇಲೆ ಹೀಗೆ ಆಗಿದೆ. ಎರಡು ಸಲ ನಾಕು ತಿಂಗಳಲ್ಲಿ ಮೈ ಇಳಿದೆ...."

"ನೀವು ನಿಮ್ಮ ಯಜಮಾನರನ್ನು ಬಿಟ್ಟಿರಬಾರದು ಈಗ"

"ಯಾಕೆ ಹಾಗೆ ಹೇಳುತ್ತೀರಿ ?"

"ಗಂಡಸರ ಸ್ವಭಾವ ನಿಮಗೆ ತಿಳಿಯದು–ಬಹಳ ಎಚ್ಚರಿಕೆಯಿಂದ ನೋಡಿಕೊಳ್ಳಬೇಕು ಅವರನ್ನ. ಈಗ ನನ್ನ ವಿಚಾರಕ್ಕೇ ತೊಗೊಳ್ಳಿ, ಶನಿವಾರ ಬಂದರೆ ನಮ್ಮವರ ಬಳಿ ಹೊರಡುವೆ. ಅವರಿರುವುದು ತಿಪಟೂರಲ್ಲಿ, ಅವರೂ ಮೇಸ್ಟ್ರು. ಹೆಂಡತಿ ಇಲ್ಲದಾಗ ಅವರ ಮನಸ್ಸು ಹರಿದೋಡುವುದು. ಅವರನ್ನು ಹತೋಟಿಯಲ್ಲಿಡುವುದು ನಮ್ಮ ಮಂಗಳಸೂತ್ರದ ಭಾರ...."

"ನೀವು ಹೇಳುವುದು ನನಗೆ ಅರ್ಥವಾಗ್ತಾ ಇಲ್ಲ ಲೀಲಾವತಮ್ಮನವರೆ ........"

"ಬಿಡಿಸಿ ಹೇಳಬೇಕೆ–ಅದು ನನ್ನಿಂದ ಆಗದ ಮಾತು, ಆದರೂ ಕೇಳಿ. ನಮ್ಮ ವಸ್ತು ಇನ್ನೊಬ್ಬರ ಪಾಲಾಗಬಾರದಲ್ಲವೇ ? ನಾವಿದ್ದದ್ದು ಆಗ ಬೆಂಗಳೂರಲ್ಲಿ. ನಮ್ಮ ಮನೆ ಪಕ್ಕದಲ್ಲಿ ಒಬ್ಬ ನರ್ಸ್ ಇದ್ದಳು. ಆಸಾಮಿ ಸ್ವಲ್ಪ ಹಾಗ್ಹಾಗೇ. ನಮ್ಮವರ ಮೇಲೆ ಅವಳು ಕಣ್ಣು ಹಾಕಿದಳು. ನಾನು ನಿಮ್ಮ ಹಾಗೇ ಹೊಟ್ಟೆಶೂಲೆಯಿಂದ ನರಳಿ ತವರುಮನೆಗೆ ಹೋಗಿದ್ದೆ. ಇಲ್ಲಿ ಇವರಿಬ್ಬರ ಪ್ರೇಮದಾಟಕ್ಕೆ ಸುಸೂತ್ರವಾಯಿತು. ನನ್ನ ಸ್ನೇಹಿತಳೊಬ್ಬಳು ಈ ಸುದ್ದಿ ನನಗೆ ಬರೆದು ತಿಳಿಸಿದಳು. ನನಗಾದ ದುಃಖ ಹೇಳತೀರದು. ಮರು ರೈಲಿಗೇ ಬೆಂಗಳೂರಿಗೆ ಬಂದು ಧಾವಿಸಿದೆ ಮನೆಯಕಡೆ. ನಾನು ಅನಿರೀಕ್ಷಿತ ಮನೆಗೆ ಹೋದಾಗ ಆ ತಾಟಕಿ ಆಗತಾನೆ ನಮ್ಮ ಮನೆಯಿಂದ ಹೊರಡು

ತ್ತಿದ್ದಳು. ದೇವರು ನನಗೆ ಯಾವ ಶಕ್ತಿ ಕೊಟ್ಟನೋ ಆ ನೋವಿನಲ್ಲೂ ಅವಳನ್ನು ದರದರನೆ ಒಳಕ್ಕೆ ಎಳೆತಂದು ಮೂಲೆಯಲ್ಲಿನ ಪೊರಕೆಯಿಂದ ರಪ ರಪನೆ ಒಂದೇ ಸಮ ರಾಚಿದೆ. ತುಟಿಪಿಟಿಕ್ಕೆನ್ನದೆ ತಲೆ ತಗ್ಗಿಸಿ ಹೋದವಳು ರಜಕ್ಕೆ ಹಾಕಿ ಊರೇ ಬಿಟ್ಟಳು. ನಮ್ಮವರು ನನ್ನ ಮುಖ ನೋಡಲಿಕ್ಕೇ ನಾಚಿದರು. ಅಪರಾಧಿಯಂತೆ ತಲೆ ತಗ್ಗಿಸಿ ನಡೆದರು. ನಾನು ಅವರನ್ನು ಒಂದು ಮಾತೂ ಅನ್ನಲಿಲ್ಲ. ನನ್ನ ಸ್ಥಿತಿ, ನನ್ನ ಅನಾರೋಗ್ಯದಿಂದಾಗಿ ವೈಯ್ಯ ಬಯಕೆಯಿಂದ ಬಳಲಿದ ಅವರು ಹಾಗೆ ಹೋದದ್ದು ಸಹಜ. ನಾನು ಅಲ್ಲೇ ಇದ್ದಿದ್ದರೆ ಹೀಗಾಗುತ್ತಿತ್ತೆ!....ಈಗ ನೋಡಿ ಯೋಗ್ಯವಾಗಿದ್ದಾರೆ. ಅನ್ಯೋನ್ಯವಾಗಿದ್ದೇವೆ...."

ಈ ಕಥೆ ಕೇಳಿದ ರಾಜೀವಿಗೆ ದುಃಖ ಉಬ್ಬಳಿಸಿ ಬಂತು. ಕತ್ತಿನ ಸೆರೆ ಬಿಗಿದು ಬಂತು. ಕಣ್ಣು ಹನಿಗೂಡಿತು. ಗದ್ಗದ ಸ್ವರದಲ್ಲಿ ಹೇಳಿದಳು.

"ನನ್ನವರು ಅಂಥವರಲ್ಲ...." ಎಂದು ಹೇಳಿದಾಗ ದುಃಖದ ಮೂರ್ತಿ ಯಂತೆ ಮಾತಾಡಿದ್ದಳು. ಆ ಕಗ್ಗತ್ತಲಲ್ಲಿ "ಸಿಳ್" ಎಂದು ಕೂಗು ಹಾಕಿತು ರೈಲು. ನಟ್ಟ ದೃಷ್ಟಿಯಿಂದ ಕಿಟಕಿಯಲ್ಲಿ ಕಾಣದ ವಸ್ತುವನ್ನು ಕಗ್ಗತ್ತಲಲ್ಲಿ ದಿಟ್ಟಿಸಿದಳು.

"ನಿಮ್ಮವರು ಹಾಗೆಂದು ನಾನು ಹೇಳಲಿಲ್ಲ. ಊರಿನವರು ಬಾಯಿ ನೀವು ಇರುವಾಗಲೇ ಬಿಗಿ ಹಿಡಿಯಲಿಲ್ಲ ಇನ್ನು ಕೇಳಬೇಕೆ?"

"ಯಾವುದಕ್ಕೆ...."

"ನೀವು ಮುಗು ರಾಜಮ್ಮ....ನಿಮ್ಮ ಮನೆ ಪಕ್ಕದಲ್ಲಿರುವ ಸುಶೀಲಮ್ಮನ ವಿಚಾರ ಜನರಾಡಿಕೊಳ್ಳುವುದು ನಿಮಗೆ ತಿಳಿಯದೆ?''

ಸಿಡಿಲೆರಗಿದಂತಾಯಿತು ರಾಜೀವಿಗೆ. ಸುಶೀಲೆ ತನ್ನ ಯಜಮಾನರನ್ನು ತನ್ನ ಮನೆಯಲ್ಲೇ ಊಟಕ್ಕೆ ವ್ಯವಸ್ಥೆ ಮಾಡಿದ್ದು, ಒಂದಲ್ಲ ಒಂದು ನೆಪ ದಿಂದ ಅಲಂಕರಿಸಿಕೊಂಡು ಸುಬ್ಬರಾಯ ಇದ್ದಾಗಲೇ ಸುಳಿಯುತ್ತಿದ್ದುದು, ಒಂದೊಂದಕ್ಕೂ ಅರ್ಥ ಕಲ್ಪಿಸಿದಳು ರಾಜೀವಿ. ಒಂದೊಂದುಮಾತು ಒಂದೊಂದು ಸನ್ನಿವೇಶಕ್ಕೂ ಅರ್ಥ ಕಲ್ಪಿಸಿದಳು ರಾಜೀವಿ. 'ಗಿಣಿಯಂತೆ ಸಾಕುತ್ತೇನೆಂದು ಕಡೆಗೆ ಹೇಳಿದ ಮಾತು ತನ್ನರಗಿಣಿಯನ್ನಪಹರಿಸಲೋಸುಗ ಹೇಳಿದ್ದೆ? ಲೀಲಾವತಿಯ ಸಮಾಧಾನದ ಮಾತು, ಅವಳಿಗೆ ಹಿಡಿಸಲಿಲ್ಲ. ವಿಪರೀತ

ಸಂಕಟವಾಯಿತು. ಮುಂದಿನ ರೈಲ್ವೆ ಸ್ಟೇಷನ್ನಿನಲ್ಲಿ ಇಳಿದು ಮತ್ತೆ ಮೊಳಕಾಲ್ಮೂರಿಗೆ ಹಿಂದಿರುಗಲೆ! ತಲೆ ಸಿಡಿದು ಹೋಗುವಂತಾಯ್ತು. ಸುಮ್ಮನೆ ಈ ವಿಚಾರ ಈ ಹೆಂಗಸಿನ ತಲೆಗೆ ತುಂಬಿ ವ್ಯಥೆಪಡಿಸಿದೆನೆಂದು ಲೀಲಾವತಿಗೂ ದುಃಖವಾಯಿತು.

ಲೀಲಾವತಿಯ ಸ್ವಭಾವವೇ ಹಾಗೆ. ಆ ನರ್ಸ್ಳ ಬಲೆಗೆ ತನ್ನ ಗಂಡ ಬಲಿಬಿದ್ದು ತಾನು ಅವಳನ್ನು ಹೊಡೆದಟ್ಟಿ ಗಂಡನನ್ನು ದಾರಿಗೆ ತಂದ ದಿನದಿಂದ ಇಂದಿನತನಕ ತನಗೆ ಸಿಕ್ಕಿ ಪ್ರತಿ ಹೆಂಗಸಿನ ಬಳಿಯೂ ತನ್ನ ವಿಜಯದ ಕಥೆಯನ್ನು ಹೇಳಿಕೊಂಡು ಬಂದಿದ್ದಳು. ಅದೊಂದು ತರಹ ಅಭ್ಯಾಸವೇ ಆಗಿ ಬೆಳೆದು ಬಂದಿತ್ತು ಅವಳಿಗೆ. ಈಗ ತನ್ನ ಪ್ರತಾಪ ರಾಜೀವಿಗೆ ತಿಳಿಸಿದ್ದು ಅವಳನ್ನು ವಿಪರೀತ ದುಃಖಕ್ಕೀಡುಮಾಡಿತು.

ಲೀಲಾವತಿ ಮಲಗಿಬಿಟ್ಟಳು. ಖಡಖಡನೆ ಸದ್ದುಮಾಡಿ ಭೋರ್ಗರೆಯುತ್ತಾ ಬೀರೂರು ಸೇರಿತು ರೈಲು. ಅಚ್ಯುತ ಬಂದು ಸಾಮಾನು, ಹುಡುಗರನ್ನ ಇಳಿಸಿಕೊಂಡು ಶಿವಮೊಗ್ಗ ರೈಲಿಗೆ ಬದಲಿಸಿದ. ಲೀಲಾವತಿಗೆ ನಮಸ್ಕಾರ ಹೇಳಿ ಮತ್ತೆ ಮೊಳಕಾಲ್ಮೂರಿಗೆ ಬಂದ ಮೇಲೆ ನೋಡುವುದಾಗಿ ಹೇಳಿ ರಾಜೀವಿಯೂ ಶಿವಮೊಗ್ಗ ರೈಲಿನ ಕಡೆ ಹೋದಳು. ಸಿಳ್ಳೆಹಾಕಿ ಲೀಲಾವತಿ ಕುಳಿತ ರೈಲು ಹೊರಟಿತು.

ಶಿವಮೊಗ್ಗೆಯ ರೈಲಿನಲ್ಲಿ ಎಲ್ಲರಿಗೂ ಒಟ್ಟಿಗೆ ಕೂತುಕೊಳ್ಳಲು ಸ್ಥಳ ದೊರಕಿತು. ಸರಸ್ವತಿ ಶಾಮಸುಂದರು ಕಿಟಕಿಯ ಬಳಿ ಕೂಡುವುದಕ್ಕೆ ಹಟ ಮಾಡಿದರು. ಆದರೆ ಆ ರಾತ್ರಿಯಲ್ಲಿ ರೈಲು ಹೊರಟಕೂಡಲೇ ಇಬ್ಬರಿಗೂ ನಿದ್ರೆ ಹತ್ತಿತು. ಅಚ್ಯುತನೂ ಜಾಗಮಾಡಿಕೊಂಡು ಮಲಗಿದ. ರಾಜೀವಿಗೆ ಮಾತ್ರ ನಿದ್ರೆ ಹತ್ತಲಿಲ್ಲ. ಆ ಲೀಲಾವತಿಯ, "ಗಂಡಸರನ್ನು ಹುಶಾರಾಗಿ ಇಟ್ಟುಕೊಂಡಿರಬೇಕು" ಎನ್ನುವ ಮಾತು ಶೂಲದಂತೆ ಇರಿಯುತ್ತಿತ್ತು. ಹಾಳಾದ್ದು ಆ ಲೀಲಾವತಮ್ಮನೇಕೆ ತನಗೆ ಸಿಕ್ಕು ಇವನ್ನೆಲ್ಲಾ ಹೇಳಬೇಕಾಗಿತ್ತೆಂದೆನಿಸಿತು ಅವಳಿಗೆ. ಯೋಚನೆ ಮಾಡಿದಂತೆಲ್ಲಾ ಸಂಶಯವೇ ಹೆಚ್ಚಿತು. ತಾನು ಬೇಗ ಮತ್ತೆ ಮೊಳಕಾಲ್ಮೂರಿಗೆ ಹೊರಡಬೇಕೆಂದು ನಿರ್ಧರಿಸಿದಳು.

ಶಿವಮೊಗ್ಗೆಯಲ್ಲಿ ಶ್ರೀಧರಮೂರ್ತಿ–ತ್ರಿಪುರಸುಂದರಿ ಅಂದಿನಂತೆ ಇಂದೂ ಉಪಚರಿಸಿದರು. ಈ ಸಂಸಾರದ ಸರಳತೆ ಆನಂದ ನೋಡಿ ಹಿಗ್ಗುವಳು

ರಾಜೀವಿ. ತಾನು ಯಾರಿಗೆ ಕಡಿಮೆ, ತನ್ನ ಸಂಸಾರವೂ ಹೀಗೆ ಇದೆಯಲ್ಲವೆ? ಎಂದು ಸಮಾಧಾನಪಡುವಳು. ಮರುಕ್ಷಣವೇ ಕಾರ್ಕೋಟಕನಂತೆ ಬುಸು ಗುಟ್ಟಿಕಾಡಿದಂತೆ ಸುಶೀಲೆ ಹೆಡೆ ಆಡಿಸುವಳು. ತನ್ನ ನಳಮಹರಾಜನೆಲ್ಲಿ ಈ ವಿಷಕ್ಕೆ ಬಲಿಯಾಗುವನೋ ಎಂದು ತತ್ತರಿಸಿದಳು. ತಾನು ಬೇಗ ಹೋಗ ಬೇಕು ಮೊಳಕಾಲ್ಮೂರಿಗೆ ಎಂದು ಮತ್ತೆ ಅಂದುಕೊಂಡಳು.

ಹಿರೇಹಳ್ಳಿಗೆ ಎರಡುದಿನದ ನಂತರ ಹೊರಟರು. ಹಿರೇಹಳ್ಳಿಯನ್ನು ತಲುಪಿದಾಗ ರಾಜೀವಿಯ ತಾಯಿ ರಿಂದವ್ಮ್ಮ ಸಕತ್ ಖಾಯಿಲೆಯಿಂದ ಹಾಸಿಗೆ ಹಿಡಿದಿದ್ದರು. ತುಂಬಾ ನಿತ್ರಾಣರಾಗಿ ನರಳುತ್ತಿದ್ದರು.

ತಾನು ಬಂದದ್ದು ತಾಯಿಯ ಶುಶ್ರೂಷೆಗೆ ಅನುಕೂಲವಾಯಿತೆಂದು ಕೊಂಡಳು. ರಿಂದಮ್ಮನವರು—ಮಗಳು ಅಪುರೂಪಕ್ಕೆ ಬಂದಾಗ ಎರಡು ದಿನ ಒಳ್ಳೆ ತಿಂಡಿ ತೀರ್ಥ ಮಾಡಿ ಹಾಕಲಾಗದೆ ತಾವೇ ಅವಳಿಂದ ಉಪಚರಿಸಿ ಕೊಳ್ಳಬೇಕಾಗಿ ಬಂತಲ್ಲಾ ಎಂದು ಮರುಗಿದರು.

೨೧

ಹುಣ್ಣಿಮೆಯ ಪೂರ್ಣಚಂದ್ರನ ಬೆಳದಿಂಗಳು ಹಿಟ್ಟು ಚೆಲ್ಲಿದಂತೆ ಹರಡಿತ್ತು. ಮನೆಯ ಮುಂದಿನ ಹುಣುಸೆ ಮರದ ಮೇಲಿಂದ ಕೋಗಿಲೆ ಹಾಡಿತು-ಒಳಗೆ ಸೆಖೆ ಎಂದು ಮನೆಯ ಜಗುಲಿಯ ಮೇಲೆ ಮಲಗಿದ್ದ ಸುಬ್ಬರಾಯನಿಗೆ ನಿದ್ರೆ ಹತ್ತಿರಲಿಲ್ಲ.

ಆ ಸಂಜೆ ಮಯೂರ ವರ್ಣದ ಪೀತಾಂಬರ ಉಟ್ಟು ತಲೆ ತುಂಬಾ ಮಲ್ಲಿಗೆ ಹೂವು ಮುಡಿದು ರೇಷ್ಮೆಯ ಕುಪ್ಪಸ ತೊಟ್ಟು, ಬಾಗಿಲಲ್ಲಿ ನಿಂತ ಸುಶೀಲೆ ಅರಳಿದ ಮಂದಾರ ಕುಸುಮದಂತೆ ಕಂಗೊಳಿಸಿದಳು. ಶೃತಿ ಮಾಡಿದ ತಂಬೂರಿಯಂತೆ ನಿಂತಿದ್ದಳು. ಕೈ ಸೋಕಿದರೆ ಮಧುರನಾದ ತರಂಗ ತುಂಬಿ ಬಂದೀತು ಎನ್ನುವಂತಿದ್ದಳು. ಆ ತುಂಬು ಎದೆ, ದಂತದ ಬಣ್ಣ, ಕಿರಿದಾದ ಕಟಿ, ಹಿರಿದಾದ ನಿತಂಬ. ಅಹಲ್ಯೆ ಇದೇ ರೂಪಿನಿಂದ ಇಂದ್ರನನ್ನು ಮರುಳುಗೊಳಿಸಿರಬೇಕು !

ಆ ಬೆಳದಿಂಗಳ ರಾತ್ರಿಯಲ್ಲಿ ಮೊಳಕಾಲ್ಮೂರಿನಲ್ಲಿ ಮುಸಾಫರ್ ಖಾನೆಯ ಪಕ್ಕದ ಮೈದಾನದಲ್ಲಿ ಬೈಲು ನಾಟಕ ನಡೆದಿತ್ತು. ಸಣ್ಣಗೆ ತಣ್ಣಗೆ ಬೀಸುವ ಗಾಳಿಯಲ್ಲಿ ನಾಟಕದ ಮೃದಂಗದ ಮಧುರನಾದ-ಹಿಮ್ಮೇಳದವರ ಸೊಗಸಾದ ಗೀತೆಯ ಜೊತೆ ಮೇಳೈಸಿದ ತಾಳದ ಧ್ವನಿ, ದೇವಲೋಕದ ಸಂಗೀತವನ್ನೂ ಮೀರಿಸಿದಂತಿತ್ತು.

ಗೌತಮರು ಪ್ರಾತಃಕಾಲದ ಸಂಧ್ಯಾವಂದನೆ ಅರ್ಘ್ಯ ಕೊಡಲು ತೆರಳಿದಾಗ ಇಂದ್ರ ಗೌತಮ ವೇಷಧಾರಿಯಾಗಿ ಋಷಿ ಪತ್ನಿ ಅಹಲ್ಯೆಯ ಸೌಂದರ್ಯಕ್ಕೆ ಮಾರುಹೋಗಿ ಬಂದು ಪ್ರೀತಿಸಿದ ಸಂದರ್ಭದ

"ಮೋಹನಾಂಗಿಯೆ ನಿನ್ನ ಮೋಹಿಸಿ ಬಂದೆ''

ಎಂದು ಸೊಗಸಾದ ಆನಂದಭೈರವಿಯ ಚಾವಡಿಯನ್ನು ಈ ಸನ್ನಿವೇಶಕ್ಕೆ ಅಳವಡಿಸಿದ್ದರು. ಈ ಚರಣ ಹಿಮ್ಮೇಳ ಗಾಯಕರ ಕಂಠದಿಂದ ಮೃದಂಗ ತಾಳಗಳ ಝಣತ್ಕಾರದೊಡನೆ ಬೆರೆತು ಗಾಳಿಯಲ್ಲಿ ತೂರಿಬಂದು ಸುಬ್ಬರಾಯನ ಕಿವಿಯನ್ನಿರಿಯಿತು, ತತ್ತರಿಸಿ ಹೋದ ಈ ವಾತಾವರಣಕ್ಕೆ.

ರಾಂಪುರಕ್ಕೆ ಹೋಗಿದ್ದ ಜನಾರ್ಧನಯ್ಯ. ಅಮುಲ್ದಾರರ ಪರಿವಾರದ ಜೊತೆಗೆ ಹೋಗಿದ್ದ. ಸುಶೀಲೆಯೊಬ್ಬಳೇ ಮನೆಯಲ್ಲಿ.

ಇಲ್ಲಿ ಈ ಮನೆಯಲ್ಲಿ ಸುಬ್ಬರಾಯನೊಬ್ಬನೆ-ಸಜೆ ಎಂದು ಮುಂದಿನ ಜಗುಲಿಯ ಮೇಲೇ ಹಾಸಿಗೆ ಉರುಳಿಸಿದ್ದ. ಸೊಗಸಾದ ಬೆಳದಿಂಗಳು, ಹರ ಡಿದ ಹುಣುಸೆ ಮರ ಮೇಲೊಂದು ಕೋಗಿಲೆಯೂ ಕೂಗಬೇಕೆ ಈ ಹೊತ್ತಿಗೆ ಸರಿಯಾಗಿ!

ಸುಶೀಲೆಯ ಮನಸ್ಸು ಪೂರ್ಣಚಂದ್ರನ ದೆಸೆಯಿಂದ ಉಬ್ಬಿದ ಸಾಗರದ ಪಾಡಾಗಿತ್ತು. ಮಾದಕವಾದ ಸಮ್ಮೋಹಕ ಬಯಕೆ ಗಾಳಿಯಲ್ಲಿ ತೂರಿಬಂದು ಇವಳನ್ನು ಆವರಿಸಿದಂತಿತ್ತು. ಆಕಾಶದಲ್ಲಿನ ಚಂದ್ರಾಮ ಇವಳನ್ನು ಕೆರಳಿ ಸಿದ್ದ. ಸುಬ್ಬರಾಯನ ಬಳಿ ಸಾರಿ ಆ ರಾತ್ರಿಯನ್ನು ಸ್ವರ್ಗಸುಖದಲ್ಲಿ ಕಳೆ ಯಲು ಅದೇ ಸಮಯ. ಒಂದೇ ಕ್ಷಣದಲ್ಲಿ ಸೀಮೆಯ ಕಳ್ಳಿಯ ಬೇಲಿ ದಾಟಿ ಅವಳ ಒಳಮನಸ್ಸಿನ ಮನೋಹರ ಮೂರ್ತಿಯ ತೋಳತೆಕ್ಕೆಯಲ್ಲಿ ಹುದುಗ ಬಹುದಿತ್ತು.

ಆದರೂ-ಯಾವುದೋ ಅವ್ಯಕ್ತ ಶಕ್ತಿ, ಆತ್ಮಾಭಿಮಾನ ಅವಳನ್ನು ತಡೆ ಹಿಡಿದಿತ್ತು. ಕೆರಳಿದ ಮೈಯ್ಯ ತೃಷೆಗಿಂತ-ಧರ್ಮನಿಯತ್ತುಗಳೇ ಅವಳಿಗೆ ಆ ಕ್ಷಣದ ಮುಳ್ಳು ಬೇಲಿಯಾಗಿತ್ತು. ಭಾರವಾದ ನಿಟ್ಟುಸಿರು-ಮನೋ ಸ್ಥೈರ್ಯದಿಂದ, ಪ್ರಯಾಸದಿಂದ, ಕೆರಳಿದ ಕಾಮಕ್ಕೆ ಬಲಿಯಾಗದೆ ಒಂದೊಂದು ನಿಮಿಷವನ್ನು ವರುಷದಂತೆ ದೂಡುತ್ತಿದ್ದಳು.

ಇತ್ತ ಸುಬ್ಬರಾಯನ ಚಿತ್ತ ಚಂಚಲವಾಗಿ ಮನ್ಮಥನ ಸಮ್ಮೋಹನಾಸ್ತ್ರ ದಿಂದ ಘಾಸಿಹೊಂದಿತ್ತು. ಮತ್ತೆ ಮತ್ತೆ ಸುಶೀಲೆಯ ಸುರಸುಂದರ ರೂಪು ಒಳಕಣ್ಣನ್ನು ಕುಕ್ಕುತ್ತಿತ್ತು. ಹರಿಣಾಕ್ಷಿ-ಚಂದ್ರಮುಖಿ-ನಿತಂಬಿನಿಯನ್ನು ತಬ್ಬುವ ಹುಚ್ಚು ಬಯಕೆ ಅವನನ್ನು ಬಾಧಿಸಿತು. ನಿಮಿಷ ನಿಮಿಷವನ್ನು ಅತೀವ ತಳಮಳದಿಂದ ದೂಡುತ್ತಿದ್ದ.

ಇಂದ್ರನಂತೆ ನಡೆದು ಬಂದಿದ್ದ ಸುಬ್ಬರಾಯ. ಹುಣುಸೆಮರದ ನೆರಳಿನ ಕತ್ತಲಲ್ಲಿ ಹೆಜ್ಜೆಯಮೇಲೊಂದು ಹೆಜ್ಜೆಯನಿಕ್ಕಿ ಜನಾರ್ಧನಯ್ಯನ ಮನೆಯ ಬಳಿ ಬಂದ. ಅತ್ತ ಇತ್ತ ಕತ್ತು ಹೊರಳಿಸಿದ-ಬಾಗಿಲು ತಟ್ಟಿ ಸುಶೀಲೆಯನ್ನು ಕರೆಯಲೆಂದು ತೊಡಗುವ ವೇಳೆಗೆ ಸರಿಯಾಗಿ ಗಾಡಿಯೊಂದರ ಸದ್ದಾಯಿತು.

ಹೆದರಿ ಹಿಮ್ಮೆಟ್ಟಿ ಹಿಂದಿರುಗಿ ಹುಣಸೇಮರದ ಬುಡಬದಿಯಲ್ಲಿ ಹುದುಗಿದ ಸುಬ್ಬರಾಯ. ಘಲ್ ಘಲ್ ಸದ್ದಿನೊಡನೆ ಬಂದ ಗಾಡಿ ಜನಾರ್ಧನನ ಮನೆಯ ಮುಂದೇ ನಿಂತಿತು.

ತರತರನೆ ತರಗೆಲೆಯಂತೆ ನಡುಗಿದ ಸುಬ್ಬರಾಯ. ಎಂತಹ ಪ್ರಮಾದ ವಾಗುತ್ತಿತ್ತು ಎಂದು ಬೆವರಿ ಹಳ್ಳವಾದ. ಹಾಗೇ ಗೌತಮರ ಶಾಪಕ್ಕೆ ಸಿಲು ಕದೆ ಹುಣಸೇಮರದ ಕತ್ತಲಲ್ಲಿ ಕರಗಿ ಜಗುಲಿಗೆ ಸೇರಿ ಹೊದ್ದು ಮಲಗಿದಾಗ ಡವಡವನೆ ಹೊಡೆದುಕೊಳ್ಳುತ್ತಿದ್ದ ಅವನ ಎದೆ ಬಡಿತ ಸುಶೀಲೆಗೂ ಕೇಳಿಸಿರ ಬೇಕು.

ಉಹುಂ ಇಲ್ಲ-ಅದೇ ವೇಳೆಯಲ್ಲಿ ಅವಳ ಎದೆಯೂ ಅದೇ ವೇಗದಲ್ಲಿ ಬಡಿಯುತ್ತಿತ್ತು. ಬಾಗಿಲು ತಟ್ಟಿದ್ದು ಕೇಳಿಸಿದಾಗ ಸುಬ್ಬರಾಯನೇ ತಟ್ಟುತ್ತಿರ ಬಹುದೆಂದರಿತಿದ್ದಳು. ತೆರೆದ ಬಾಗಿಲಿನಿಂದ ಒಳಕ್ಕೆ ಬಂದ ವ್ಯಕ್ತಿಯನ್ನು ತಬ್ಬಿದಳು ಸುಶೀಲೆ.

ರಾಂಪುರದಿಂದ ಬಂದ ಜನಾರ್ಧನ ಸುಶೀಲೆಯ ಈ ಚರ್ಚೆಗೆ ಡಂಗು ಬಡಿದು ಹೋದ. ಜೋಡು ಹಾಸಿಗೆಯ ಮೇಲೆ ಬಿಳಿಯ ಮುಗ್ಗಲು ಹಾಸಿಗೆ ಹಾಸಿತ್ತು–ಕಸೂತಿ ಹಾಕಿದ ಮೆತ್ತನೆಯ ದಿಂಬು–ತಾಂಬೂಲದ ತಟ್ಟೆ, ಕೋಣೆ ತುಂಬಾ ಪಸರಿಸಿದ ಊದುಬತ್ತಿಯ ಪರಿಮಳ, ಹೂ ಮುಡಿದು, ರೇಷ್ಮೆಯ ಸೀರೆಯುಟ್ಟು ತಬ್ಬಿ ನಿಂತ ಸುಶೀಲೆ ದೇವಲೋಕದಲ್ಲಿದ್ದಂತೆಯೇ ಭಾಸ ವಾಯಿತು ಜನಾರ್ಧನನಿಗೆ.

"ಇದೇನು ಸುಶೀಲ...."

—ಎಂದು ಮುಂಬಾಗಿಲು ಭದ್ರಪಡಿಸಿ ಕೇಳಿದ. ಅವಳ ಕಣ್ಣು ತೇವವಾಗಿತ್ತು. ಎಂತಹ ನಿಮಿಷದಲ್ಲಿ ಬಂದು, ತನ್ನನ್ನು ಅಧಃ ಪಾತಾಳಕ್ಕೆ ಒಯ್ಯಬಹುದಿದ್ದ ಅನೀತಿಯ ಕಾರ್ಯದಿಂದ ವಿಮೋಚನೆ ದೊರಕಿಸಿದ್ದ! ಆ ರಾತ್ರಿ ಜನಾರ್ಧನನು ಹಿಂದಿರುಗದಿದ್ದರೆ ಏನಾಗುತ್ತಿತ್ತೊ? ಗದ್ಗದ ಕಂಠದಲ್ಲಿ ಉತ್ತರಿಸಿದಳು.

"ಇನ್ನು ನೀವು ಹೀಗೆ ನನ್ನೊಬ್ಬಳನ್ನು ಬಿಟ್ಟು ಹೋಗಬೇಡಿ...."

"....ಎಂತಹ ಹುಚ್ಚಿಯೆ ನೀನು....ಒಂದು ದಿನಕ್ಕೆ ಹೀಗಾದರೆ ನಿತ್ಯ ಸರ್ಕೀಟಿನ ಕೆಲಸವಾಗಿದ್ದರೆ ದೇವರೇ ಗತಿ"

"..............." ಸುಶೀಲೆ ಮಾತೇ ಆಡಲಿಲ್ಲ.

"ಇದೇನು ಅಮ್ಮ ಅವರು--ಇವತ್ತು ಬಲೇ ಮೋಜಿನಿಂದ ಅಲಂಕಾರ ಮಾಡಿಕೊಂಡು ಕಾದಿದ್ದೀರಿ....ಆಂ ನೋಡ್ದ್ಯಾ–ಇಂತಹ ಸುಂದರವಾದ ಮುಖಕ್ಕೆ ಕಣ್ಣೀರು ಒಳ್ಳೇದಲ್ಲ–ಗುಲಾಬಿಹಾಗಿರೋಳು ಸಂಪಿಗೆ ಹಾಗೆ ನಗ ಬೇಕು...."

—ಎಂದೆಲ್ಲಾ ಮಾತಾಡಿದರೂ ಸುಶೀಲೆ ಸುಮ್ಮನೇ ಇದ್ದಳು. ಕಡೆಗೆ ಹೇಳಿದಳು "–ಇನ್ನು ಇಲ್ಲಿಂದ ವರ್ಗಮಾಡಿಸಿಕೊಳ್ಳಿ....ಈ ಊರು ಬಿಡ ಬೇಕು ನಾವು" ಅವಳ ಮಾತುಗಳೊಂದೂ ಅವನಿಗೆ ಅರ್ಥವಾಗಲಿಲ್ಲ. ಅರ್ಥ ವಾಗುವಂಥದೂ ಅಲ್ಲ.

ನೀರು ಕುಡಿದು ದೀಪ ಚಿಕ್ಕದುಮಾಡಿ ಗಮಗಮಿಸುವ ಗಾಳಿಯನ್ನು ಸೇವಿಸುತ್ತಾ ಶುಭ್ರವಾದ ಹಾಸಿಗೆಯ ಮೇಲೆ ಸುಶೀಲೆಯನ್ನಪ್ಪಿ ಮಲಗಿದ. ಅವನ ಎದೆಯಲ್ಲಿ ಹುದುಗಿ ಬಿಕ್ಕಿ ಬಿಕ್ಕಿ ಅತ್ತು ಭಾರವಾದ ಹೃದಯ ಹಗುರ ಮಾಡಿಕೊಂಡಳು.

— ಜನಾರ್ಧನನಿಗೆ ಒಂದೂ ಅರ್ಥವಾಗಲಿಲ್ಲ. ಅಂದು ಸುಶೀಲೆ ಕ್ಲಿಷ್ಟ ಅಗ್ನಿ ಪರೀಕ್ಷೆಗೊಳಗಾಗಿ ಯಶಸ್ವಿಯಾಗಿದ್ದಳೆಂಬುದು ಅವನಿಗೆ ಅರ್ಥವಾಗದ ವಿಚಾರ. ತಿನ್ನದ ತಾಂಬೂಲ, ಕೆಡದ ಹಾಸಿಗೆ, ಬಾಡದ ಹಸುರಿನಂತೆ ಹೊಳೆಯುತ್ತಿದ್ದ ಹೆಣ್ಣು, ತಿದ್ದಿ ಬಾಚಿದ ಹೆರಳು ಕೆಡದೆ ಇದ್ದದ್ದು ನೋಡಿದ ಜನಾರ್ಧನನಿಗೆ ನಿಜ, ಸುಶೀಲೆ ತನಗಾಗಿ ಕಾದಿದ್ದಳು ಈ ಬೆಳದಿಂಗಳ ಹುಣ್ಣುಮೆಯ ರಾತ್ರಿಯಲ್ಲಿ ಎಂದು ನಂಬಿದ. ಮತ್ತೆ ಇಬ್ಬರಿಗೂ ಎಚ್ಚರ ವಾದಾಗ ಬೈಲು ನಾಟಕದವರು ಮಂಗಳ ಹಾಡಿದ್ದು ಕೇಳಿಬರುತ್ತಿತ್ತು. ಸುಬ್ಬರಾಯ ಅವತ್ತು ಜನಾರ್ಧನನ ಮನೆಗೆ ಕಾಫಿಗೆ ಹೋಗಲಿಲ್ಲ. ಅವಳು ಲೋಟದಲ್ಲಿ ತುಂಬಿ ಜನಾರ್ಧನನಿಗೆ ಕೊಟ್ಟು "ನೀವೆ ಕೊಟ್ಟು ಬನ್ನಿ, ಅದೇ ಚೆನ್ನ" ಎಂದಳು. ಜನಾರ್ಧನ ಹಾಗೇ ಮಾಡಿದ.

ಈ ಸಂಗತಿ ನಡೆದ ಮೇಲೆ ಸುಶೀಲೆಗೆ ಒಂದು ಬಗೆಯ ಭಾರ ಇಳಿದಂತಾ ಗಿತ್ತು. ಇದಕ್ಕೆ ಕಾರಣ ಬರಿಯ ಅವಳ ಮನೋಧರ್ಮ ದರ್ಶನದ ಸಾಕ್ಷಾ ತ್ಕಾರವಲ್ಲ. ಜನಾರ್ಧನನ ತಂದೆಯ ಹೆಂಗೆಳತಿ ನಂಜಿಯ ವಾದಸರಣಿ ಕಾರಣ

ವಾಗಿತ್ತು. ಜನಾರ್ಧನನ ತಂದೆ ಖಂಡೆರಾಯರು ಮತ್ತು ನಂಜಿ ಇಬ್ಬರೂ ಕೆಲವು ತಿಂಗಳ ಕೆಳಗೆ ಮೊಳಕಾಲ್ಮೂರಿಗೆ ಬಂದಿದ್ದರು. ಮಗನ ಮನೆಗೆ ಅದೇ ಮೊದಲು ಅವರಿಬ್ಬರೂ ಬಂದದ್ದು.

ಮೊದಲು ನಂಜಿಯನ್ನು ಕಂಡು ಜಿಗುಪ್ಸೆಗೊಂಡಳು ಸುಶೀಲೆ. ಅವಳ ಮಾತಿನ ವರಸೆ, ಅವಳ ತತ್ವ ಸುಶೀಲೆಯನ್ನು ಬೆರಗುಗೊಳಿಸಿತು. ಅಂಥ ಪ್ರೇಮದ ಹುಚ್ಚು ಬರಿಯ ಕಾಮದ ಕೂಗು ಒಮ್ಮೆ ಕೆಟ್ಟರೆ ಕೆಟ್ಟಂತೆಯೇ, ಸರಿಯಾಗಿರುವುದು ಕಷ್ಟದ ಕೆಲಸ, ಕೆಡುವುದಕ್ಕೇನು ಮುಟ್ಟಿಸಬೇಕಾಗಿದೆ, ನಾಯಿಗಳಿಗೂ ನಮಗೂ ಏನು ವ್ಯತ್ಯಾಸ ಎಂಬ ವಿಚಾರ ಸರಣಿ ಹೊರಟದ್ದು ಅಂದು ಆಸ್ಪತ್ರೆಯ ಕಟ್ಟೆಯ ಮೇಲೆ.

ಸುಶೀಲೆಗೆ ಮೂರು ದಿನದಿಂದ ಮೈಯ್ಯಲ್ಲಿ ಸ್ವಸ್ಥವಿರಲಿಲ್ಲ. ನಂಜಿ ಅವಳನ್ನು ಬಲವಂತದಿಂದ ಆಸ್ಪತ್ರೆಗೆ ಕರೆದೊಯ್ದಿದ್ದಳು.

ರಾಂಪುರದಿಂದ ಖೂನಿಯಾದ ಹೆಣ್ಣು ಹೆಣ ಒಂದನ್ನು ಆಸ್ಪತ್ರೆಗೆ ತನಿಖೆಯ ವಿವರಕ್ಕೆ ಅನುಕೂಲವಾಗಲು ಕಾನೂನಿನಂತೆ ತಂದಿದ್ದರು. ಡಾಕ್ಟರು ಆ ಹೆಣ ಕೊಯ್ದು ವರದಿ ತಯಾರಿಸುವುದರಲ್ಲಿ ನಿರತರಾಗಿದ್ದುದರಿಂದ ಬಂದ ಮಾಮೂಲಿಯ ರೋಗಿಗಳು ಡಾಕ್ಟರಿಗಾಗಿ ಕಾದಿರಬೇಕಾಗಿತ್ತು. ಹಾಗೆ ಕಾದಿದ್ದವರಲ್ಲಿ ಸುಶೀಲೆ–ನಂಜಮ್ಮ ಇವರೂ ಇಬ್ಬರು.

ಗಾಡಿಯಲ್ಲಿ ಹೆಣ ಹೇರಿಕೊಂಡು ಬಂದಿದ್ದರು. ಕುತ್ತಿಗೆಯನ್ನು ಕುಡುಗೋಲಿನಿಂದ ತುಂಡರಿಸಿದ್ದ ಆ ಕೊಲೆಗಡುಕ. ಹೆಪ್ಪುಗಟ್ಟಿದ ರಕ್ತದ ಮಡುವಿನಲ್ಲಿ ಹೊದ್ದಿಕೆ ಹೊದಿಸಿದ್ದ ಆ ಹೆಣ ನಾರುತ್ತಿತ್ತು. ಕಾನೂನಿನಂತೆ ಪೋಲೀಸಿನವರು ಎಲ್ಲಾ ವಿಧಿಗಳನ್ನೂ ಸ್ಥಳದಲ್ಲಿ ಮುಗಿಸಿ ಮೊಳಕಾಲ್ಮೂರು ಆಸ್ಪತ್ರೆಗೆ ಹೇರಿ ತಂದಾಗ ಒಂದು ದಿನವೇ ಸಂದಿತ್ತು.

ಸತ್ತ ಆ ಹೆಣ್ಣಿನ ತಾಯಿ ಕೂಡಾ ಬಂದಿದ್ದಳು. ಅವಳ ಮುಖದಲ್ಲಿ ಮಗಳು ಸತ್ತ ದುಃಖವೇ ಇರಲಿಲ್ಲ–ನಂಜಿಯೇ ಆ ತಾಯಿಯನ್ನು ಸಂತೈಸುವ "ಅಯ್ಯೋ ಪಾಪ"ದ ಎರಡು ಮಾತಾಡಿಸಿದಳು.

"....ಬಹು ದುಕ್ಕ ಆಯ್ತದೆ-ಅಲ್ವಾ ತಾಯಿ–ಏನು ಮಾಡೋದು ಎಲ್ಲಾ ಶಿವನ ಆಟ" ಎಂದು ತಕ್ಕೈಸಿದಳು. ನಂಜಮ್ಮನ ಮಾತು ಅವಳನ್ನು ಕದಲಿಸಲಿಲ್ಲ. ಕಣ್ಣಲ್ಲಿ ಸತ್ತ ಮಗಳ ಬಗ್ಗೆ ದುಃಖದ ಕಣ್ಣೀರು ಚಿಮ್ಮುವ ಬದಲು

ಕೋಪದ ಕಿಡಿ ಸಿಡಿಯಿತು. ಜಿಗುಪ್ಸೆ ತಾತ್ಸಾರ ಮಿಶ್ರ ಧ್ವನಿಯಲ್ಲಿ ಆ ತಾಯಿ ಹೇಳಿದಳು.

"ಹೂಂ ಶಿವನಾಟ, ಇಂಥ ಮಗಳು ಸತ್ತಿದ್ದು ಅವನ ಆಟ ಅಲ್ಲ. ಅವನ ಶಿಕ್ಷೆ ಅವಳಿಗೆ"

"....ಅದೇನಮ್ಮ ಹಂಗತೀಯ...."

"ಮತ್ತಿನ್ನೇನು ಬಿಡಮ್ಮ....ಇಂಥ ಮಗಳಿರೋದಕಿನ್ನ ನಾನು ಬಂಜೆ ಯಾಗಿದ್ದರೆ ಮೇಲಾಗ್ತಿತ್ತು...."

—ಮಗಳು ಸತ್ತ ವ್ಯಥೆಯೇ ಇರಲಿಲ್ಲ ಆ ಮಹಾತಾಯಿಗೆ.

"....ಅದೇನು ಮಗಳೂನ್ನೋ ಮೋಹ ಬ್ಯಾಡವ ಹಡೆದ ಹೊಟ್ಟೆಗೆ"

"....ನಾಯಿ ನರಿ ಸತ್ತರೆ ವ್ಯಥೆ ಪಡಬೇಕಾ....ನಿಯತ್ತಿಲ್ಲದ ನಾಯಿ ಇವಳು. ಅದಕ್ಕೆ ಸರಿಯಾದ ಸಿಕ್ಷೆ ಮಾಡ್ದ ಇವಳ ಗಂಡ"

"ಗಂಡನೆ!"

"ಹಾದು ಅವನ್ನೂ ಹಿಡ್ಡಾಕೌರೆ ಪೋಲೀಸ್ನೋರು...."

"ನಿಮ್ಮ ಅಳಿಯನೇ ಮಗಳ ಸಾವಿಗೆ ಕಾರಣವೆ?" ಎಂದಳು ಕಾತು ರತೆಯಿಂದ ಸುಶೀಲ.

"ಮಗಳು! ಎಂಥಾ ಮಗಳು? ಆನೆ ಹೊಟ್ಟೇಲಿ ನಾಯಿ ಹುಟ್ಟಿದಂಗೆ ಹುಟ್ಟಿ ದಳು........ರಾಂಪುರದಾಗೆ ಒಳ್ಳೇ ಗಂಡನ್ನ ನೋಡಿ ಮದುವೆ ಮಾಡಿದ್ದೆ. ಹುಡಿಗಿ ಇದ್ದಾಗಿನಿಂದ ಇವಳಿಗೆ ಅಲ್ಲೇ ಇದ್ದ ಇನ್ನೊಬ್ಬನ ಮೇಲೆ ಪಿರೀತಿ ಇತ್ತು. ಅದು ಹೇಳಿ ಈ ಮದ್ವೆ ಬ್ಯಾಡಾಂತ ಬೊಗಳಿದ್ದರೆ ಈ ಮುಂಡೆ ಸಾಯ್ತಲೇ ಇರ್ಲಿಲ್ಲ....ನಾನು ಮಾಡಿದ ಗಂಡ್ನೂ ಒಪ್ಪಿರುವಷ್ಟು ದಿನ ವಗತಾನ ಮಾಡಿದಳು. ಮೆಲ್ಲಗೆ ತನ್ನ ಹಳೇ ಸ್ನೇಹಿತನ ಕೂಡ ಹೋಗೋಕೆ ಹಚ್ಚಿ ದಳು. ಇದು, ಮಾಡಿಕೊಂಡ ಗಂಡನಿಗೆ ಕೋಪ ತರೋಕಿಲ್ವ–ನಾನು ಬಹು ಬುದ್ದಿ ಹೇಳ್ದೆ–ಬ್ಯಾಡಕಣೆ ಇದು, ಧರ್ಮದ ಕೆಲಸ ಅಲ್ಲ. ದೇವರು ಮೆಚ್ಚೋ ಕೆಲಸ ಮಾಡೂಂತ ಬಡುಕೊಂಡೆ 'ಇಲ್ಲಮ್ಮ' ಎಂದು ಆಣೆ ಮಾಡಿದಳು. ಮತ್ತೆ ರಾತ್ರಿ ಕಳ್ಳಿಹಂಗೆ ಮಿಂಡನ್ನ ಕೂಡ್ತಾ ಇದ್ದಳು....ಒಂದು ಸಲ ಇದು ಬೈಲಿಗೆ ಬಿತ್ತು. ಸಿಟ್ಟಿಗೆದ್ದ ಗಂಡ ರೋಸಿಗೆದ್ದು ಕುಡುಗೋಲಿನಿಂದ ಇವಳ ಕತ್ತು ಕೊಯ್ದು ಅವನೇ ಪೋಲೀಸಪ್ಪನೋರಿಗೆ ಹೇಳಿಬಿಟ್ಟ...." ಎಂದು

ಕಡುರೋಷದಿಂದ ತನ್ನ ಅಳಿಯ ಮಗಳನ್ನು ಕತ್ತರಿಸಿ ತುಂಡರಿಸಿದ್ದು ಸರಿಯಾದ ಕೆಲಸವೆನ್ನುವ ನಿರ್ಧಾರದ ಧ್ವನಿಯಲ್ಲಿ ಹೇಳಿದ್ದಳು ಆ ತಾಯಿ.

ಈ ಮಾತಿಗೆ ಸುಶೀಲೆ ತತ್ತರಿಸಿಹೋಗಿದ್ದಳು, ತನ್ನ ಕತ್ತನ್ನೇ ತುಂಡರಿಸಿದ ಅನುಭವವಾಗಿತ್ತು. ಕೊಂಚ ಹೊತ್ತಿನ ನಂತರ ಡಾಕ್ಟರು ಬಂದಮೇಲೆ ಔಷಧಿಯೊಡನೆ ಮನೆಯಕಡೆ ಹೊರಟಾಗ ದಾರಿಯಲ್ಲಿ ನಂಜಮ್ಮ

"ದ್ರೊಹ–ಅದಕಿನ್ನ ದ್ರೊಹ ಐತಾ–ಮನುಷ್ಯಾಂತ ಅನ್ನಿಸ್ಕೊಂಡೋಳು ಮಾಡೋ ಕೆಲಸಾನಾ ಅದು? ನಂಬಿ ಗಂಡಾಂತ ಕಟ್ಕೊಂಡ ಮೇಲೆ ನಿಯತ್ತಿನಿಂದ ಇರಬೇಕು, ಪಿರೀತಿನ್ನೋದು ಇರ್ಲಿ, ಇನ್ನೊಬ್ಬರನ್ನ ನೋಡ್ಲೇಬ್ಯಾಡಾಂತ ಯಾರಾರ ಹೇಳ್ತಾರಾ–ನೋಡೋವಾಗ ಅಣ್ಣನ್ನ ನೋಡೋ ಹಂಗೆ ನೋಡಬೇಕು. ಶೀಲ ಹೋದ ಮೇಲೆ ಏನೈತೆ? ನೋಡು ಸುಶೀಲಮ್ಮಾ ನಾನೂ ಸೂಳೆರೋಳು, ನಿಮ್ಮ ಮಾವನ್ನ ನಂಬಿ ಗರತಿಗಿನ್ನ ವೈನಾಗಿ ವಗತಾನ ನಡೆಸಿದೆ. ಬಾಳೆವು ಮಾಡಿದರೆ ನಾಕು ಜನ ನೋಡಿ ಸೈ ಅನ್ನಬೇಕು, ನಾಯಿ ಇದ್ದಂಗಿರೋಕಿನ್ನ ಸತ್ತು ಸ್ವರ್ಗ ಸೇರೋದು ಸುಖ...." ಎಂದು ಹೇಳಿದ್ದಳು.

ನಂಜಮ್ಮನ ಪ್ರತಿ ಮಾತೂ ತನಗೆ ಅನ್ವಯಿಸುವಂತಿತ್ತು. ಜನಾರ್ಧನನಿಗೆ ದ್ರೋಹ ಬಗೆಯದಿದ್ದರೂ ಮನಸ್ಸಿನಲ್ಲಿ ಸುಬ್ಬರಾಯ ಬೇಕೆಂದು ಬಯಸಿದ್ದು, ಅದು ಅವನ ಮೇಲಿನ ಮೋಹ ಹೆಚ್ಚಿ ಇವನನ್ನು ತಾತ್ಸಾರದಿಂದ ನೋಡಲು ಅವಕಾಶ ಬೆಳೆಸಿಕೊಟ್ಟಿತ್ತು. ತನ್ನ ವರ್ತನೆಗೆ ಅಂದೇ ನೊಂದುಕೊಂಡಿದ್ದಳು. ಅಂದಿನಿಂದಲೇ ಜನಾರ್ಧನನ ಬಗ್ಗೆ ಹೊಸ ರೀತಿಯಲ್ಲಿ ನಡೆದುಕೊಳ್ಳಲು ಯತ್ನಿಸಿದ್ದಳು.

ಸುಶೀಲೆಗೆ ಮಕ್ಕಳಿಲ್ಲದ ಚಿಂತೆ ಎಂಬುದನ್ನು ಸೂಕ್ಷ್ಮವಾಗಿ ಗ್ರಹಿಸಿದ್ದಳು ನಂಜಮ್ಮ. ಆ ಚಿಂತೆಯಿಂದ ನೊಂದು ಬೇಸರದಿಂದಾಗಿ ಮನಸ್ಸು ಹರಿಬಿಡುವುದು ಸಹಜವೆಂಬುದನ್ನೂ ತಿಳಿದಿದ್ದಳು ನಂಜಿ. ಅಂದು ಊಟವಾದ ಮೇಲೆ ಖಂಡೇರಾಯರು ಹೊರಗಡೆ ಮಲಗಿದ್ದರು. ಸುಶೀಲೆ ಕಸ ಮುಸುರೆ ಮಾಡಿಕೊಂಡು ಚಾಪೆ ಮೇಲೆ ಅಡ್ಡಾಗಿದ್ದ ನಂಜಮ್ಮನ ಬಳಿ ಕುಳಿತಿದ್ದಾಗ ಆ ಮಾತು ಈ ಮಾತಿನಿಂದ ಮಕ್ಕಳ ಕಡೆ ಮಾತು ಹೊರಳಿತು—

"ಮಕ್ಕಳಿದ್ದರೆ ಮನೆ ಚಂದ" ಎಂದಳು ಸುಶೀಲ.

"ಶಿವ ಕೊಡದಿದ್ದರೆ ಕೊರಗಿದರಾಗ್ತದ"

"ಉಹೂಂ...."

"ಮಕ್ಕಳಿದ್ದರೆ ನಾನಾ ಚಿಂತೆ–ಇಲ್ಲದಿದ್ರೆ ಇಲ್ಲಾನ್ನೋದೊಂದೆ ಚಿಂತೆ"

"....ಆದರೂ ಪುಟ್ಟ ಮಕ್ಕಳು ನೋಡೋಕೆ ಬಲು ಚಂದ"

"ಅಲ್ವೆ, ಮಕ್ಳೆಲ್ಲಾ ಚೆನ್ನವೇ–ನಮ್ಮದೇ ಆದರೆ ತುಂಬಾ ವೈನು...."

"ವಿದುರಾಶ್ವತ್ಥಕ್ಕೆ ಹೋಗಬೇಕೂಂತ ಅಂದುಕೊಂಡದ್ದೊಂದೇ ಆಗಿದೆ ಹೋಗಲಿಕ್ಕೆ ಮುಹೂರ್ತ ಬಂದಿಲ್ಲ"

"....ನಿನಗೊಂದು ಬ್ರಾಂತು ಸುಸೀಲಮ್ಮ–ಆಗೋದಿದ್ರೆ ಎಲ್ಲಿದ್ರೂ ಆಯ್ತದೆ. ಇಲ್ದಿದ್ರೆ ಕಾಶಿಗೋದ್ರು ಅಷ್ಟೆ, ರಾಮೇಶ್ವರಕ್ಕೋದ್ರು ಅಷ್ಟೆ. ಸುಸೀಲಮ್ಮ ನನ್ನ ಮಾತು ಕೇಳು. ಮಕ್ಕಳ ಮೇಲೆ ಪಿರೀತಿ ಇಡಾಕೆ ನಿನ್ನ ಮಗೀನೆ ಆಗಬೇಕಾ–ಸುಬ್ಬರಾಯನ ಮಕ್ಕಳನ್ನು ನಿನ್ನ ಮಕ್ಕಳೂಂತ ಪೀರೀತಿ ಮಾಡು....ಮಕ್ಕಳಿರೋರಿಗೆ ಅವರ ಮಕ್ಕಳೇ ಮಕ್ಕಳು, ಇಲ್ದಿರೋರಿಗೆ ಊರ ಮಕ್ಕಳೆಲ್ಲಾ ಅವರೋವೆ ಅನ್ನೊ ಪ್ರೀತಿ ಇರಬೇಕು...."

—ಎಂದು ನಂಜಿ ಹೇಳಿದಾಗ ಹೊಸ ಜಗತ್ತೆ ಅವಳಿಗೆ ಕಂಡಿತ್ತು. ತಾನು, ತನಗೊಂದು ಮಗು ಆಗಬೇಕು ಅದಕ್ಕೆ ರೇಷ್ಮೆ ಅಂಗಿ ಬಂಗಾರದ ಉಡುದಾರ ಹಾಕಬೇಕು ಅನ್ನುವ ಸಂಕುಚಿತ ಮನೋಭಾವ ಕೆರಳಿ, ಊರ ಮಕ್ಕಳನ್ನು ತನ್ನ ಮಕ್ಕಳಂತೆ ಪ್ರೀತಿಸುವ ತತ್ವ ಬಹು ಸೊಗಸಾಗಿ ಹಿಡಿಯಿತು ಸುಶೀಲೆಗೆ.

ಅದರಲ್ಲೂ ಸುಬ್ಬರಾಯನ ಮಕ್ಕಳನ್ನು ತನ್ನ ಮಕ್ಕಳೆಂದು ತಿಳಿಯುವ ಅಂಶ ಅವಳಿಗೆ ಬಹು ಹಿತವಾಗಿ ಕಂಡಿತ್ತು. ಅಂದಿನಿಂದ ಅದೇ ತತ್ವದ ಆರಾಧಕಳಾಗಿದ್ದಳು ಸುಶೀಲ.

ಸುಶೀಲೆಗೆ ಸಮಾಧಾನವಾಗಿತ್ತು. ತಲೆಯನ್ನು ಕೊರೆಯುತ್ತಿದ್ದ ಗುಂಗಾಡಿ ಕೊರೆತ ನಿಲ್ಲಿಸಿತ್ತು. ದೇವರ ಮುಂದೆ ದೀಪ ಹಚ್ಚಿದಳು. ಎರಡು ಬೆಳ್ಳಿ ನೀಲಾಂಜನದಲ್ಲಿ ಜ್ಯೋತಿ ಬೆಳಗಿತು. ಸುಬ್ಬರಾಯ, ರಾಜೀವಿಯರು ತನ್ನ ವಿವಾಹ ಜೀವನ ಬೆಳಗಲೆಂದು ಹಾರೈಸಿ ಕೊಟ್ಟ ನೀಲಾಂಜನ ಅವು. ಕೈ ಮುಗಿದು ಹೂವೆರಡು ದೇವರ ಮೇಲೆ ಹಾಕಿದಾಗ ಮನಸ್ಸು ಮತ್ತಷ್ಟು ಹಗುರವಾಯಿತು. ಅದೇಕೋ ಕಣ್ಣಿಂದ ಹನಿಗಳೆರಡು ಕೆಂಪಾದ ಕೆನ್ನೆಗಳ ಮೇಲೆ ಜಾರಿದವು.

ಸಂಜೆ ಜನಾರ್ಧನಯ್ಯ ಬಂದಾಗ ಎಂದೂ ಇಲ್ಲದ್ದು ಯಾವು ಯಾವುದೋ ಮಾತು ತೆಗೆದು ಬಿಡುವಿಲ್ಲದೆ ಮಾತು ಆಡಿದಳು. ಸುಶೀಲೆಯ ಲ್ಲಾದ ಈ ಬದಲಾವಣೆಯಿಂದ ಜನಾರ್ಧನ ಅಚ್ಚರಿಗೊಂಡ. ಬಹು ಹಿಂದೆ ಹೊಸದುರ್ಗದಲ್ಲಿ ಹೀಗೇ ಒಂದುಸಾರಿ ಮಾತಾಡಿದ್ದಳು. ಮತ್ತೆ ಮೊಳ ಕಾಲ್ಮೂರಿಗೆ ಬಂದ ಹೊಸದರಲ್ಲೂ ಸರಸದಿಂದಿದ್ದಳು. ಸುಬ್ಬರಾಯ ಪಕ್ಕದ ಮನೆಗೆ ಬಂದ ಮೇಲೆ ಮತ್ತೆ ಮಂಕಾಗಿದ್ದಳು. ಯಾವುದೋ ಚಿಂತೆ ಯಿಂದ ಕೊರಗಿದ್ದಳು. ಅದು ಮಕ್ಕಳಿಲ್ಲದ ಚಿಂತೆಯೆಂದು ಊಹಿಸಿ ಅವ ಳಂತೆ ತಾನೂ ಜಿಗುಪ್ಸೆಯ ಜೋಲು ಮುಖ ಹಾಕಿ ಕಾಲ ಹಾಕಿದ್ದ. ಮೊನ್ನೆ ರಾಂಪುರದಿಂದ ಬಂದಾಗಿನಿಂದ ಮತ್ತೆ ಕಳೆಕಳೆಯಿಂದ ಕೂಡಿದ್ದಳು. ಅವಳು ಸಿಡುಕಿನಿಂದ ದುಮು ದುಮು ಇದ್ದಾಗ ಅಮ್ಮಾ ಅವರು ಕೋಪದಿಂದಿರುವು ದನ್ನು ಗ್ರಹಿಸಿ ಅವನೂ ಮಾತೇ ಆಡದೆ ಕೊಟ್ಟದ್ದು ತಿಂದು, ಬಡಿಸಿದ್ದು ಉಂಡು, ಕಚೇರಿಗೆ ಹೊರಟುಬಿಡುವ. ಲಗುಬಿಗು ನೋಡಿ ಅಮ್ಮಾ ಅವರು ಪ್ರಸನ್ನವದನರಾಗಿ ಮಂದಹಾಸ ಬೀರಿದರೆ ತಾನೂ ಹಲ್ಲು ಕಿರದು ಲಲ್ಲೆ ಹೊಡೆಯಲು ಧೈರ್ಯ ಮಾಡುವ.

ಪ್ರಕೃತ ಸುಶೀಲೆಯ ಮನೋಧರ್ಮದ ಅರ್ಥವರಿಯದ ಜನಾರ್ಧನ ಅವಳ ನಗುಮುಖ ನೋಡಲೇ ಬಯಸಿ ಅವಳ ತಾಳಕ್ಕೇ ಹೆಜ್ಜೆ ಹಾಕುವ ಭರದಲ್ಲಿ ತನ್ನತನವನ್ನು ಮರೆತು ಸಂಪೂರ್ಣ ಅವಳ ಸೂತ್ರದ ಗೊಂಬೆಯಾಗಿ ಕುಳಿತಿದ್ದ. ವರ್ಷಾನು ವರ್ಷದ ಈ ಅನುಭವ ಸುಶೀಲೆಗೆ ಜನಾರ್ಧನ ಒಂದೇ ಬಾರಿಗೆ ಹತ್ತೂ ಮಂದಿಯಂತೆ ಪುರುಷ ಪುಂಗವನಾಗಿ ಮೆರೆಯಲಾರನೆಂದು ಗೊತ್ತು.

ಸುಬ್ಬರಾಯ ಈಗ ತನ್ನ ಮನೆಯಲ್ಲೇ ಅಡಿಗೆಮಾಡಿಕೊಳ್ಳುತ್ತಿದ್ದ. ಹೋಟಲಿನಿಂದ ಹುಳಿಯನ್ನೂ ಸಾರನ್ನೂ ತರುವ ಕಚೇರಿಗೆ ಹೊರಡುವ ವೇಳೆಗೆ ಬರುವವೇಳೆ ಮುಂಬಾಗಿಲಲ್ಲಿ ನಿಂತು ಮಂದಹಾಸ ಬೀರುತ್ತಿದ್ದ ಸುಶೀಲೆ ಮನೆಯ ಒಳಗಿಂದ ಹೊರಕ್ಕೆ ಸುಳಿಯುತ್ತಿರಲೇ ಇಲ್ಲ. ಜನಾರ್ಧ ನನ ಮುಖಾಂತರ ಸುಶೀಲೆಗೆ ಮೈಲಿ ಸ್ವಸ್ಥವಿಲ್ಲವೆಂದು ತಿಳಿದು ಅವರಿಗೇಕೆ ತೊಂದರೆ ಎಂದು ತಾನೇ ಅಡಿಗೆ ಮಾಡಿಕೊಳ್ಳುತ್ತಿದ್ದ.

ಒಮ್ಮೆ ಅವಳ ಸ್ಥಿತಿಯನ್ನು ನೋಡಬೇಕೆಂದು ಮನಸ್ಸಾಯಿತು. ಹೊರಡಬೇಕೆಂದಿದ್ದ ಆಕ್ಷಣವೇ ಹಿತ್ತಲ ಭಾವಿಯಲ್ಲಿ ದೊಡ್ಡ ಕೊಡ ನೀರು ಸೇದಿಕೊಂಡು ಹೋದದ್ದು, ಅವಳ ಮುಖದಲ್ಲಿ ಆರೋಗ್ಯದ ಕಳೆ ನೋಡಿ ತನ್ನನ್ನು ಮನೆಗೆ ಬಾರದಿರುವಂತೆ ಮಾಡುವುದಕ್ಕೇ ಖಾಯಿಲೆಯ ಸೋಗೆಂದು ಊಹಿಸಲು ಸುಬ್ಬರಾಯನಿಗೆ ತಡವಾಗಲಿಲ್ಲ.

ಸುಬ್ಬರಾಯನಿಗೆ ಸುಶೀಲೆ ಜನಾರ್ಧನರ ವರ್ತನೆ ಅರ್ಥವಾಗಲಿಲ್ಲ. ಒಂದೇ ಬಾರಿಗೆ ವರ್ಷಾನುವರ್ಷದ ಸ್ನೇಹ ಕಡಿದುಹೋಗಬೇಕೆ? ಅಂತಹ ಅಪರಾಧವಾದರೂ ಏನು ತಾನು ಮಾಡಿದ್ದು, ತನ್ನಿಂದ ಏನು ದ್ರೋಹವಾಗಿದೆ ಈ ದಂಪತಿಗಳಿಗೆ?

ರಾಜೀವಿ ಇಲ್ಲದ ಈ ಒಕೊ ಎನ್ನುವ ಮನಸ್ಸಿಗೆ ಸುಶೀಲೆಯ ದರ್ಶನ ಕೊಂಚ ನೆಮ್ಮದಿ ಕೊಡುತ್ತಿತ್ತು. ಅನೇಕಬಾರಿ ಅವಳನ್ನೇ ನೋಡಿ ನಿಟ್ಟುಸಿರು ಸುಯ್ದಿದ್ದ, ಸುಶೀಲೆಯೂ ನಿಟ್ಟುಸಿರು ಸುಯ್ದಿದ್ದಳು. ಕಣ್ಣಲ್ಲಿ ನೋಡಿ ದಣಿದು ಕಾಮಿಸಿದ್ದ ಸುಬ್ಬರಾಯ ಬಯಸಿ ಒಂದು ರಾತ್ರಿ ಇಂದ್ರ ಅಹಲ್ಯೆಯನ್ನು ಬಯಸಿ ಹೋದಹಾಗೆ ಹೋಗಿದ್ದ. ಇದಕ್ಕಿಂತ ದ್ರೋಹ ಬೇಕೆ ಇದಕ್ಕಿಂತ ಅನ್ಯಾಯ ಬಗೆಯಲು ಸಾಧ್ಯವೆ? ಸುಶೀಲೆ ಚಿಕ್ಕವಳಿದ್ದಾಗಿನಿಂದ ಗೊತ್ತು ನಿಜ. ಒಂದುಬಾರಿ ಸ್ವೀಕರಿಸುವಂತೆ ಬೇಡಿಕೊಂಡಿದ್ದಳು. ಅದೊಂದು ಹರೆಯದ ಹುಚ್ಚುತನದ ಅವಳ ವರ್ತನೆ ಎಂದೆಂದಿಗೂ ಮನದ ಬಾಗಿಲು ತೆರೆದು ಸ್ವಾಗತಿಸುವ ಆಮಂತ್ರಣವೆ? ಇಂದು ಅವಳು ಜನಾರ್ಧನನ ಮನೆಯೊಡತಿ, ಅವನ ಬಾಳು ಹಸನಾಗಲೆಂದು ತಾನೂ ರಾಜೀವಿಯೂ ಸದಾ ಹಾರೈಸಿದ್ದು ನೆನಪಿತ್ತು. ತೋರಿಕೆಯ ಸಭ್ಯವರ್ತನೆಗೂ–ಸಹಜ ಅಂತರಂಗದ ರಾಕ್ಷಸ ಪ್ರವೃತ್ತಿಗೂ ಎಷ್ಟೊಂದು ಅಂತರ!

ರಾಜೀವಿಯ ಜೊತೆಯಿದ್ದಾಗ ಸುಶೀಲೆಯನ್ನು ನೋಡಲು ಹಿಂಜರಿದು, ಸಮಯ ಸಿಕ್ಕಾಗ ಅವಳ ದೇಹದ ಉಬ್ಬು ಇಳಿತಗಳ ಮೋಹಕತೆಗೆ ಮಾರುಹೋಗಿ ಅವೆಲ್ಲವನ್ನೂ ತಬ್ಬಿ ಅನುಭವಿಸುವ ಮನಸ್ಸು. ತೋರಿಕೆಗೊಂದು ಭಾವ, ಅಂತರಂಗದಲ್ಲಿನ್ನೊಂದು ಬಯಕೆ.

ತನ್ನ ವರ್ತನೆಗೆ ತನಗೇ ನಾಚಿಕೆ ಬಂತು ಸುಬ್ಬರಾಯನಿಗೆ. ಇದೆಲ್ಲಾ ಜನಾರ್ಧನನಿಗೆ ತಿಳಿದು ತನ್ನನ್ನು ದೂರಮಾಡಿರಬಹುದೆ! ಎಂಬ ಸಂದೇಹ

ಅವನನ್ನು ಪೂರಾ ಕಾಡಿತು. ಇದು ನಿಜವಾಗಿದ್ದರೆ ತಲೆ ಎತ್ತಿ ಹೇಗೆ ಜನಾರ್ದನನನ್ನು ನೋಡುವುದು? ಅಕ್ಷಮ್ಯ ಅಪರಾಧದ ಹೊರೆ ಅವನ ತಲೆಯನ್ನಾವರಿಸಿ ಕಾಡತೊಡಗಿತು.

ಅವನಿಂದ ಇನ್ನೇನೂ ಸಾಧ್ಯವಾಗಲಿಲ್ಲ. ರಾಜೀವಿಗೆ ಬೇಗ ಬರುವಂತೆ ಕಾಗದ ಬರೆಯಬೇಕೆಂದು ಮಾತ್ರ ಮನಸ್ಸು ಮಾಡಿದ. ಆದರೆ ಅದೇಕೋ ಬರೆಯಲೂ ಸಾಧ್ಯವಾಗಲಿಲ್ಲ.

## ೨೨

ಸಂಶಯ ಪಿಶಾಚಿ ಬೆನ್ನು ಬಿದ್ದರೆ ದೇಹವನ್ನು ನುಲುಗಿಸಿ ಕರಗಿಸಿಬಿಡುತ್ತದೆ. ಮೊದಲೆ ಸೂಕ್ಷ್ಮ ಪ್ರಕೃತಿಯ ರಾಜೀವಿ ದಿನದಿನಕ್ಕೆ ಕೃಶಳಾಗಿ ಹೋಗುತ್ತಿದ್ದಳು. ನಾಗರಾಜಜೋಯಿಸರು ಮಗಳಿಗೆ ಏನಾಗಿದೆಯೋ ಎಂದು ಚಿಂತಿಸಿದರು. ಹೆಂಡತಿಗೆ ಖಾಯಿಲೆ, ಮಗಳಿಗೆ ಖಾಯಿಲೆ; ಅವರಿಗೂ ಆರೋಗ್ಯ ಅಷ್ಟಕ್ಕಷ್ಟೆ ಇತ್ತು. ರಿಂದಮ್ಮನವರು ನರಳುತ್ತಾ ಹಾಸಿಗೆ ಹಿಡಿದಿದ್ದರು, ಪಕ್ಕದಲ್ಲಿ ರಾಜೀವಿ ಕುಳಿತಿದ್ದಳು. ಶಾಮಸುಂದರ ತನಗೆ ತಿಂಡಿ ಹೆಚ್ಚು ಕೊಡಲಿಲ್ಲವೆಂಬ ಕಾರಣ ತೆಗೆದು ಅತ್ತು ಅತ್ತು ರಂಪಮಾಡಿ ಅವಳ ತೊಡೆಯ ಮೇಲೆ ತಲೆಯಿಟ್ಟು ಮಲಗಿ ನಿದ್ರೆಹೋಗಿದ್ದ. ನಾಗರಾಜಜೋಯಿಸರು ಗೋಡೆಗೆ ಆತು ಕುಳಿತಿದ್ದರು. ಕೈಯ್ಯಲ್ಲಿನ ಬೀಸಣಿಗೆಯಿಂದ ಗಾಳಿ ಹಾಕಿಕೊಳ್ಳುತ್ತಿದ್ದರು. ಒಳಗೆ ಅಡಿಗೆಯ ಮನೆಯಲ್ಲಿ ಜಗನ್ನಾಥನ ಹೆಂಡತಿ ತರ್ಕಾರಿ ಹೆಚ್ಚುತ್ತಾ ಕುಳಿತಿದ್ದಳು.

ನಾಗರಾಜಜೋಯಿಸರು ತಿಪ್ಪಯ್ಯನಿಗೆ ಬರಹೇಳಿದ್ದರು. ಅಚ್ಚುತನಿಗೆ ತಾನಿರುವುದರೊಳಗೇ ಮದುವೇಂತ ನಡೆದುಹೋದರೆ ಸಾಕೆಂದು ರಿಂದಮ್ಮ ಒತ್ತಾಯ ಮಾಡುತ್ತಲೇ ಇದ್ದರು. ಹತ್ತಾರುಕಡೆ ಸುತ್ತುವ ತಿಪ್ಪಯ್ಯನಿಗೆ ಹೆಣ್ಣುಗಳನ್ನು ಹೊಂದಿಸಿ ಕನ್ಯಾದಾನದ ಪುಣ್ಯದಲ್ಲಿ ಒಂದು ಭಾಗ ತನ್ನದಾಗಿ ಮಾಡಿಕೊಳ್ಳುವುದೇ ಕೆಲಸ.

ರಾಜೀವಿ ನಟ್ಟದೃಷ್ಟಿಯಿಂದ ಬಾಗಿಲ ಹೊಸಲನ್ನು ದಿಟ್ಟಿಸುತ್ತಿದ್ದಳು. ಅವಳ ಮನಸ್ಸೆಲ್ಲಾ ಮೊಳಕಾಲ್ಮೂರಿನಲ್ಲಿತ್ತು. ಈಚೆಗೆ ಸುಬ್ಬರಾಯನಿಂದ ಕಾಗದವೇ ಬಂದಿರಲಿಲ್ಲ. ಈ ಕಾರಣವಷ್ಟು ಅವಳನ್ನು ಚಿಂತೆಗೆ ಹಚ್ಚಿತ್ತು. ತೊಡೆಯ ಮೇಲೆ ಮಲಗಿದ್ದ ಶಾಮಸುಂದರನ ತಲೆಯಲ್ಲಿನ ಗುಂಗುರು ಕೂದಲಲ್ಲಿ ಕೈ ಆಡಿಸುತ್ತಿದ್ದಳು.

"ಅದೇಕೆ ರಾಜೀವಿ ನಿನ್ನೆ ರಾತ್ರಿ ಊಟ ಮಾಡಲಿಲ್ಲ?"

"ಹಸಿವಿರಲಿಲ್ಲ ಅಪ್ಪ"

"ನಾನು ಎಷ್ಟು ಹೇಳಿದರೂ ಕೇಳೋಲ್ಲಮ್ಮ ನೀನು. ಈಗಲೇ ನೀನು ಒಳ್ಳೇ ಆಹಾರ ಹಣ್ಣು, ಹಾಲು ತೊಗೊಂಡರೆ ಹುಟ್ಟುವ ಮಕ್ಕಳು ದಷ್ಟಪುಷ್ಟ ವಾಗಿ ಬೆಳೆಯುತ್ತವೆ"

"ಈಗ ಸರಸ್ವತೀನ್ನ ನೋಡು ಹೇಗಿದ್ದಾಳೆ. ಅವಳ ಬಸಿರಿನಲ್ಲಿ ಎಂತಹ ಸೊಗಸಾದ ಆರೈಕೆ ನಡೆಯಿತು!"

"ಆ ಕಾಲ ಹಾಗಿತ್ತು, ಈಗೆಲ್ಲಿ ಹಾಗೆ ನಡೆಯುತ್ತೆ?"

"ಈಗೇನು ನಿನಗೆ ಕಡಿಮೆಯಾಗಿರೋದು-ಯಾವಾಗಲೂ ಒಂದೇಸಮ ಸಪ್ಪಗೆ ಮುಖ ಹಾಕಿರುತ್ತೀಯ. ಮನಸ್ಸಲ್ಲಿ ಏನೋ ಇಟ್ಟುಕೊಂಡು ಕೊರಗ್ತ ಇರೋಹಾಗಿದೆ. ನಮ್ಮ ಮುಂದೂ ನಿನ್ನ ಚಿಂತೆ ಬಚ್ಚಿಡಬೇಕೆ?" ಎಂದು ನೊಂದ ಮಾತಲ್ಲಿ ನರಳುವ ಧ್ವನಿಯಲ್ಲಿ ಹೇಳಿದರು ರಿಂದಮ್ಮ.

—ರಾಜೀವಿಗೆ ನಿಜಕ್ಕೂ ಇದ್ದ ಚಿಂತೆ ಹೇಗೆ ಬಿಚ್ಚಿ ಹೇಳುವುದು! ಆ ಚಿಂತೆ ಮನಸ್ಸನ್ನು ಕೊರೆದು ದೇಹವನ್ನೂ ಸವೆಸುತ್ತಿತ್ತು ನಿಜ. ಅದಕ್ಕೆ ತಕ್ಕ ಮದ್ದು ತಾನು ಮೊಳಕಾಲ್ಮೂರಿಗೆ ಕೂಡಲೆ ಹೊರಡುವುದಲ್ಲದೆ ಔಷಧೋಪ ಚಾರಗಳಿಗೆ ಬಗ್ಗುವುದಲ್ಲ ಅದು.

"ಅವಳಿಗೆ ಯಜಮಾನರ ಚಿಂತೆ" ಎಂದವಳು ಜಗನ್ನಾಥನ ಹೆಂಡತಿ.

—ಈ ಮಾತಿಗೆ ರಾಜೀವಿ ಮೊಳಕಾಲ್ಮೂರಿಗೇ ತೆರಳಿದಂತೆ ಭಾಸ ವಾಯಿತು. ಜಗನ್ನಾಥನ ಹೆಂಡತಿ ರುಕ್ಮಿಣಿ ಎಷ್ಟು ಚೆನ್ನಾಗಿ ತನ್ನ ಅಂತ ರಂಗ ಅರಿತು ಮಾತಾಡಿದಳು ಎಂದು ಅಚ್ಚರಿಪಟ್ಟಳು. ಅಗ್ನಿಸಾಕ್ಷಿಯಾಗಿ ಕೈಹಿಡಿದ ಹೆಣ್ಣುಮಕ್ಕಳಿಗೆ ಸದಾ ತಮ್ಮ ಯಜಮಾನರ ಹಿತಚಿಂತನವೇ ಗಾಯಿತ್ರಿ ಜಪವೆಂದು ರಾಜೀವಿಗೆ ತಿಳಿಯದೇನೊ!

"ಅಲ್ಲವೇ ಪಾಪ...." ಎಂದವರು ನಾಗರಾಜಜೋಯಿಸರು.

"ಅಪ್ಪಾ ನಾನು ಊರಿಗೆ ಹೊರಡುವಾಕೆ" ಎಂದಳು ರಾಜೀವಿ.

"ಯಾಕೆ ರಾಜಿ, ಬಂದು ಇನ್ನೂ ಎರಡು ವಾರವಿಲ್ಲ, ಆಗಲೇ ಹೊರಡ ಬೇಕೆ! ಇನ್ನೂ ನಿನ್ನ ದೇಹಸ್ಥಿತಿ ಹುಶಾರಾಗಿಲ್ಲ. ನಿಮ್ಮಮ್ಮನೂ ಕೊಂಚ ಉತ್ತಮವಾಗಲಿ, ಹೋಗಿವಂತೆ"

"ಹಾಗೇ ಮಾಡುವುದೂಂತ ಇದ್ದೆ. ಅವರಿಗೆ ಅಲ್ಲಿ ವಿಪರೀತ ತೊಂದರೆಯಾಗುತ್ತೆ. ಎಷ್ಟು ದಿನಾಂತ ಜನಾರ್ಧನಯ್ಯನವರ ಮನೆಯಲ್ಲಿ ಊಟ ಮಾಡುವುದು ? ಅದು ಚೆನ್ನಾಗಿಯೂ ಇರುವುದಿಲ್ಲ"

"ಶಿವಮೊಗ್ಗೆಯಲ್ಲಿದ್ದಾಗಿನಿಂದಲೂ ಸುಬ್ಬರಾಯನಿಗೂ ಜನಾರ್ಧನನಿಗೂ ಗಳಸ್ಯ ಕಂಠಸ್ಯ. ಅವರ ಲಗ್ನವನ್ನು ನೀವೇ ನಿಂತು ಭರ್ಜರಿಯಾಗಿ ಹೊಡೆಸಿಬಿಟ್ಟಿರಿ ಅಂದಮೇಲೆ ಜನಾರ್ಧನಯ್ಯನ ಮನೆಯಲ್ಲಿ ಸುಬ್ಬರಾಯನಿಗೇನು ಸಂಕೋಚ....? "

—ಎಂದು ನಾಗರಾಜ ಜೋಯಿಸರೆಂದಾಗ ರಾಜೀವಿಗೆ ಅತೀವ ಯಾತನೆಯಾಯಿತು. ತನ್ನ ಪ್ರೀತಿಯ ಆಭರಣವನ್ನು ಅಪ್ಸರೆಯೊಬ್ಬಳು ಅಪಹರಿಸುವ ಸಮಯದಲ್ಲಿ ತನ್ನ ತಂದೆಯೇ ಆ ಆಭರಣವನ್ನು ಅಪ್ಸರೆ ಕಾಯುವಳಲ್ಲಾ ನಿನಗೇನು ಚಿಂತೆ ಎನ್ನುವ ವಾದ ಹೂಡಿದಂತಿತ್ತು. ತಲೆ ತಗ್ಗಿಸಿ ತೊಡೆಯ ಮೇಲೆ ಮಲಗಿದ್ದ ಶಾಮಸುಂದರನನ್ನೆತ್ತಿಕೊಂಡು ಒದ್ದೆಗಣ್ಣಿನಿಂದ ಅವನನ್ನು ಹಾಸಿಗೆ ಹಾಸಿ ಮಲಗಿಸುವ ನೆಪದಿಂದ ಎತ್ತಿಕೊಂಡು ಚಿಕ್ಕ ಮನೆಯತ್ತ ನಡೆದಳು. ಭಾರವಾದ ನಿಟ್ಟುಸುರು ಸುಯ್ದು ತೆರಳಿದಾಗ ಮಗಳ ಮನೋಭಾವದ ಅರಿವಾಗದ ಜೋಯಿಸರು ತಲೆ ಮೇಲೆತ್ತಿ ಸೂರು ನೋಡುತ್ತಾ ಕೈಲಿದ್ದ ಬೀಸಣಿಗೆಯಿಂದ ಗಾಳಿ ಹಾಕಿಕೊಂಡರು.

ನರಳುತ್ತಲೇ ರಿಂದಮ್ಮ ಹೇಳಿದರು—

"ಅವರವರ ಸಂಸಾರ ಅವರವರಿಗೆ. ನನ್ನ ಖಾಯಿಲೆ ಇನ್ನೆಲ್ಲಿ ವಾಸಿಯಾಗುತ್ತೆ ? ರಾಜೀವಿನ್ನ ಅವಳೂರಿಗೆ ಕಳಿಸಿಬಿಡಿ" ಎಂದು.

"ಹೆಣ್ಣು ಮಕ್ಕಳಿಗೆ ಸೇರಿದ ಗಂಡನ ಮನೆಯತ್ತ ಇರುವ ವಾತ್ಸಲ್ಯ ಹುಟ್ಟಿದ ತವರೂರಿನಲ್ಲಿರುತ್ತದೆಯೆ! ಹೋಗಲಿ, ಯಾರು ಬೇಡಾಂತ ಅಂದವರು? ಇನ್ನೂ ಕೊಂಚ ದಿನವಿದ್ದು ಸಂಪೂರ್ಣ ಗುಣಮಾಡಿಕೊಂಡು ಹೋಗಲೀಂತ ಇದ್ದೆ.

ನ್ಯಾಯವಾಗಿ ಈ ಮಾತು ರಿಂದಮ್ಮ ಹೇಳಬೇಕಿತ್ತು. ಹೆತ್ತ ಕರುಳು, ಕಂದಮ್ಮಗಳಿಗೆ ಕಂದಮ್ಮಗಳಾದರೂ ಮಕ್ಕಳು ಮೂರು ಹೊತ್ತೂ ತವರು ಮನೆಯಲ್ಲಿಯೇ ಇರಲಿ ಎಂದು ಬಯಸುವುದು ಸಹಜ. ರಿಂದಮ್ಮನವರು ಹದಿಮೂರು ವರ್ಷದ ಅರಿಯದ ಹುಡುಗಿಯಾಗಿ ಬಂದು

ನಾಗರಾಜಜೋಯಿಸರ ಮನೆ ಸೇರಿದಂದಿನಿಂದ ಈ ಮನೆಯೇ ತನ್ನದೆಂದು ತುಂಬಿಸಿದ್ದಳಲ್ಲದೆ ತವರೂರು ಚಿಂತೆ ಬಂದರೂ ಇದು ಮುಖ್ಯವಾಗಿತ್ತು. ತನ್ನ ಮಕ್ಕಳೂ ಅವರವರ ಗಂಡಂದಿರ ಮನೆಯಲ್ಲಿ ಸೌಖ್ಯದಿಂದ ಇರಬೇಕೆಂದು ಬಯಸುವಳು. ನಾಗರಾಜಜೋಯಿಸರೇ ಮಗಳ ಆರೋಗ್ಯದ ದೃಷ್ಟಿಯಿಂದ ಹಾಗಂದಿದ್ದರು.

ಶಾಮುಸುಂದರನನ್ನು ಚಾಪೆಯ ಮೇಲೆ ತಟ್ಟಿ ಮಲಗಿಸಿದಳು. ಅಂತರಂಗದಲ್ಲಿ ಭಾರಿ ಆಂದೋಳನವೇ ನಡೆದಿತ್ತು. ಶಾಮುಸುಂದರನ ಪಕ್ಕದಲ್ಲಿ ತಲೆಗೆ ಮೊಳಕೈ ಕೊಟ್ಟು ಹಾಗೇ ಮಲಗಿದಳು. ಅವಳ ಕಣ್ಣಿಂದ ಉರುಳಿದ ಬಿಸಿ ಕಣ್ಣೀರ ತೊಟ್ಟು ಶಾಮುಸುಂದರ ಕೆನ್ನೆಯ ಮೇಲೆ ಬಿದ್ದು ಅವನು ಬೆಚ್ಚಿಬಿದ್ದು ಎದ್ದ. ಕಣ್ಣೊರಸಿ ಮತ್ತೆ ತಟ್ಟಿ ಮಲಗಿಸಿದಳು. ನಾಳೆಯೇ ಮೊಳಕಾಲ್ಮೂರಿಗೆ ತೆರಳಬೇಕೆಂದು ಅವಳ ಒಳಮನಸ್ಸು ಹೇಳುತ್ತಿತ್ತು.

ಹಗಲುಗನಸೊಂದು ಕಂಡಳು ರಾಜೀವಿ. ಕೇದಿಗೆಯ ಬನದಲ್ಲಿ ತೆನೆಯೊಂದ ಕೀಳಲು ಸುಬ್ಬರಾಯ ಹವಣಿಸುತ್ತಿದ್ದ. ಮನಮೋಹಕ ಕೇದಿಗೆಯ ವಾಸನೆ ಸೊಗಸಾಗಿತ್ತು. ರಾಜೀವಿ, ಬೇಡ ಅಲ್ಲಿ ಕಾಳಿಂಗ ಕಾದಿರಬಹುದು ಎಂದು ಅಂಗಲಾಚುತ್ತಿದ್ದಳು. ಅದೇ ಕಾಳಿಂಗನನ್ನೇ ಕೇದಿಗೆಯ ತೆನೆಯೆಂದು ಹಿಡಿದು ಮೂಸಲು ಯತ್ನಿಸುತ್ತಿದ್ದ. ಹೆಡೆಯಾಡಿಸಿ ಕ್ರೂರ ಸೀಳು ನಾಲಿಗೆ ಹೊರಗೆಳೆದು ಹೊಳೆವ ಹವಳದಂತಹ ಕಣ್ಣಲ್ಲಿ ನಿನ್ನ ಯಜಮಾನರು ನನ್ನ ವಿಷಕ್ಕೆ ತುತ್ತು ಎಂದೆನ್ನುವ ದೃಷ್ಟಿಯಲ್ಲಿ ದಿಟ್ಟಿಸುತ್ತಿತ್ತು ಆ ಕಾಳಿಂಗ ಸರ್ಪ. ಗಾಬರಿಯಿಂದ ಬೆಚ್ಚಿ ಎದ್ದಾಗ ಶಾಮುಸುಂದರ ಅಳುತ್ತಿದ್ದ. ಎದೆಗವಚಿಕೊಂಡು ರಾಜೀವಿಯೂ ಬಿಕ್ಕಿ ಬಿಕ್ಕಿ ಅತ್ತು ಹೃದಯದ ಭಾರ ಕಡಿಮೆ ಮಾಡಿಕೊಂಡಳು. ಹಗಲುಗನಸು ನಿಜವಾಗುತ್ತದೆಂದು ಅವಳ ನಂಬಿಕೆ. ಈ ಕನಸು ಅವಳ ಮೊಳಕಾಲ್ಮೂರು ಪ್ರಯಾಣವನ್ನು ಪುಷ್ಟಗೊಳಿಸಿತು.

ಯಾರು ಎಷ್ಟು ಹೇಳಿದರೂ ಕೇಳಲಿಲ್ಲ. ಅಚ್ಯುತನಿಗೆ ಹೇಳಿ ತನ್ನ ಸಾಮಾನು ಕಟ್ಟಿಸಿದಳು. ಇದೇನು ಈ ಹಟಮಾರಿತನ ಇವಳದು ಎಂದೆನಿಸಿತು ನಾಗರಾಜಜೋಯಿಸರಿಗೆ. ಯಾರು ಹೇಳಿದರೂ ಕೇಳಲಿಲ್ಲ. ನಾನು ಹೋಗಬೇಕು–ನಾನು ಮೊಳಕಾಲ್ಮೂರಿಗೆ ಹೋಗಬೇಕು ಎಂದಿಷ್ಟೆ ಅವಳ ಮಾತು.

"ಕಾಗದವನ್ನಾದರೂ ಬರೆದು ಹಾಕಿ ಆ ಮೇಲೆ ಹೋಗಬಾರದೆ?" ಎಂದು ಹೇಳಿದಳು ಜಗನ್ನಾಥನ ಹೆಂಡತಿ.

ತಿಪ್ಪಯ್ಯನವರೂ ಬಂದರು. ರಾಜೀವಿ ಹೊರಟು ನಿಂತ ಗಾಡಿಯೂ ಹೊರಟಿತು. ನಾಗರಾಜ ಜೋಯಿಸರು ಮೊಳಕಾಲ್ಮೂರಿನಲ್ಲಿ ರಾಜೀವಿಯನ್ನು ಬಿಟ್ಟು ತಕ್ಷಣ ಹಿಂದಿರುಗುವಂತೆ ಅಚ್ಯುತನಿಗೆ ಹೇಳಿದರು. ಅವನು ಬರುವುದರಲ್ಲಿ ಮಿಕ್ಕ ಮಾತುಕಥೆಯಾಡುವುದೆಂದು ಅವರು ಅಂದುಕೊಂಡಿದ್ದರು. ರಾಜೀವಿ, ಅಚ್ಯುತನ ಮದುವೆಯ ವಿಚಾರ ಮಾತಾಡುವಾಗ ಇರಬೇಕೆಂದು ನಾಗರಾಜಜೋಯಿಸರ ಮನಸ್ಸಿನಲ್ಲಿತ್ತು. ಮಗಳು ಬೇಡ ಬೇಡವೆಂದರೂ ಹೊರಟಿದ್ದು ಅವರ ಮನಸ್ಸಿಗೂ ಕಿರಿಕಿರಿ ಅನಿಸಿತ್ತು.

ತಿಪ್ಪಯ್ಯನ ಹತ್ತಿರ ಆಡಬೇಕಾದ ಮದುವೆ ವಿಚಾರ ಮುಂದುವರಿಸುವುದೇ ಸೂಕ್ತವೆಂದೂ ಏನೋ ಶಕುನ ಸರಿಯಾಗಲಿಲ್ಲವೆಂದೂ ಅವರಿಗೆನ್ನಿಸಿತ್ತು. ತಿಪ್ಪಯ್ಯನಿಗೂ ರಾಜೀವಿ ಹಾಗೇಕೆ ಹೋದಳೆಂಬುದು ಅರ್ಥವಾಗಲಿಲ್ಲ. ನಾಗರಾಜಜೋಯಿಸರಿಗೆ ಮನೆಯಲ್ಲಿ ಜಗನ್ನಾಥನ ಹೆಂಡತಿ ಏನಾದರೂ ಅಂದಿರಬಹುದೆ ? ಅವಳಿಗಿಲ್ಲೇನು ಕೊರತೆಯಾಗಿತ್ತು-ಎಂದೆಲ್ಲಾ ಯೋಚನೆ ಮಾಡಿದರು.

ರಾಜೀವಿಯ ಒಳಮನಸ್ಸಿಗಲ್ಲದೆ ಮತ್ತಾರಿಗೂ ಅವಳ ಈ ಪ್ರಯಾಣದ ನಿರ್ಧಾರದ ಕಾರಣ ಗೊತ್ತಾಗಲಿಲ್ಲ. ಮೊದಲು ಮೊಳಕಾಲ್ಮೂರು ಸೇರಬೇಕೆನ್ನುವ ಆತುರವಲ್ಲದೆ ರಾಜೀವಿಗೂ ನಿಜವಾದ ಅವಳ ಅವಸರದ ಪ್ರಯಾಣದ ಕಾರಣ ಗೊತ್ತಿರಲಿಕ್ಕಿಲ್ಲ. ತನ್ನ ಸುಬ್ಬರಾಯನ ಬಳಿ ಮೊದಲು ಹೋಗಬೇಕು. ಸುಶೀಲೆಯ ಮನೆಯಿಂದ ದೂರವಾದ ಮನೆಯನ್ನೇ ಮಾಡಬೇಕು ಇಲ್ಲವೇ ಆ ಊರಿಂದ ವರ್ಗವನ್ನೇ ಮಾಡಿಸಿಕೊಳ್ಳುವಂತೆ ಗಂಡನಿಗೆ ಹೇಳಬೇಕೆಂದು ಅವಳು ನಿರ್ಧರಿಸಿದ್ದಳು.

## ೨೩

"ಅಪ್ಪಾ" ಎಂದು ಶಾಮಸುಂದರ ಕೂಗಿ ಓಡಿಬಂದು ಅಡಿಗೆಯ ಮನೆಯಲ್ಲಿ ಒಲೆಯ ಮುಂದೆ ಕುಳಿತ ಸುಬ್ಬರಾಯನ ಬೆನ್ನ ಮೇಲೆ ಬಿದ್ದ. ಚಕಿತನಾಗಿ ಹಿಂದಿರುಗಿ ನೋಡಿದಾಗ ಆಶ್ಚರ್ಯವೇ ಆಯಿತು. ಅನಿರೀಕ್ಷಿತವಾಗಿ ರಾಜೀವಿ ಬರುವಳೆಂದು ಕನಸಿನಲ್ಲೂ ಎಣಿಸಿರಲಿಲ್ಲ.

ರಾಜೀವಿ ಉಸ್ಸಪ್ಪ ಎಂದು ಗೋಡೆಗೆ ಆತು ಕೂತಳು. ತೀರ ಬಡವಾಗಿದ್ದಳು. ತೀರ ಬೆಳ್ಳಗಾಗಿದ್ದಳು. ಮುಖಕ್ಕೆಲ್ಲಾ ಕಾಂತಿಯುಕ್ತ ಕಣ್ಣೆರಡು ಮಿಂಚಿನ ಕುಡಿಯಂತೆ ಹೊಳೆಯುತ್ತಿದ್ದುದಲ್ಲದೆ ಕೆಂಪಾದ ತುಟಿ ಕೂಡ ಬಿಳುಪೇರಿತ್ತು. ಗಲ್ಲ ಪೊಚ್ಚು ಬಿದ್ದಿತ್ತು, ಅರಿಶಿನ ಹಚ್ಚಿದ್ದು ಬಿಳಿಯ ಕಾಗದದ ಮೇಲೆ ಹಳದಿಯ ಬರೆ ಎಳೆದಂತಿತ್ತು. ಆರೈಕೆಗೆಂದು ತವರಿಗೆ ತೆರಳಿದ ರಾಜೀವಿ ಇನ್ನೂ ಬಡವಾಗಿ ನಿಸ್ತೇಜಳಾಗಿ, ನಿತ್ರಾಣಳಾಗಿ ಬಂದದ್ದು ಸುಬ್ಬರಾಯನಿಗೆ ತನ್ನ ಮಾವನ ಮೇಲೆ ಕೋಪವೇ ಬಂತು. ಆ ಕೋಪವನ್ನು ಅಚ್ಚುತನ ಮೇಲೆ ತೀರಿಸಿದ.

"ಆರೈಕೆಮಾಡಿಕೊಳ್ಳಲಿಕ್ಕೆ ಹೋದದ್ದೊ, ನಿತ್ರಾಣ ಹೆಚ್ಚಿಸಿಕೊಳ್ಳಲಿಕ್ಕೆ ಹೋದದ್ದೊ? ಈ ಪ್ರಯಾಣಕ್ಕೆ ವೃಥಾ ಖರ್ಚು, ಏನು ಕೊಳ್ಳೆಹೋಗುತ್ತಿತ್ತು? ಇನ್ನೂ ಒಂದು ತಿಂಗಳೊಪ್ಪತ್ತು ಇದ್ದು ಬರಬಾರದಿತ್ತೆ. ಅಚ್ಚುತಾ, ಅಷ್ಟು ಕಷ್ಟವಾಗಿದ್ದರೆ ನನಗೊಂದು ಕಾಗದ ಹಾಕಿದ್ದರೆ ಸಾಲವೋ ಗೀಲವೋ ಮಾಡಿ ದುಡ್ಡು ಕಳಿಸ್ತಿದ್ದೆ, ಇಷ್ಟು ಅವಸರದಿಂದ ಯಾಕೆ ಕರ್‍ಕೊಂಡು ಬಂದೆ?"

ಈ ಮಾತೇ ಮೊನೆಯಂತೆ ಚುಚ್ಚಿತು ರಾಜೀವಿಯ ಕೋಮಲ ಹೃದಯಕ್ಕೆ. ಸುಬ್ಬರಾಯ ತನ್ನನ್ನು ಆದಷ್ಟು ದಿನ ಅಲ್ಲಿಯೇ ಇಡಲು ಮಾಡಿದ ಅವರ ಪ್ರಯತ್ನ ವಿಫಲವಾದದ್ದಕ್ಕೆ ಈ ಕೋಪದ ಮಾತೆಂದು ತರ್ಕಿಸಿದಳು.

ಅಚ್ಚುತನಿಗೆ ಏನು ಹೇಳಬೇಕೋ ತೋಚದಾಯಿತು. ತಂದೆ ಬಲವಂತಮಾಡಿ ಇರು ಎಂದು ಹೇಳಿದ್ದು ಸುಳ್ಳೆ? ರಾಜೀವಿಯೇ ಹಟ ಹಿಡಿದು ಬಂದಿರುವಾಗ ತಮ್ಮದೇನು ತಪ್ಪು? ಭಾವನ ಮಾತಿಗೆ ಅವನಿಗೆ ಏನು ಹೇಳಲೂ ಆಗಲಿಲ್ಲ. ರಾಜೀವಿಯೋ....

"ನಾನೇ ನಿಮಗೆ ಇಲ್ಲಿ ಊಟಕ್ಕೆ ತೊಂದರೆಯಾಗುತ್ತೆಂದು ಬಂದೆ" ಎಂದು ಹೇಳಿ ಅಡಿಗೆ ಮನೆ ಕಡೆ ಹೋದಳು.

"ಅಪ್ಪಾ ನಂಗೊಂದು ಬುಗುರೀ...." ಎಂದು ಅತ್ತ ಶಾಮಸುಂದರ. ಸರಸ್ವತಿ ಆಗಲೆ ಜನಾರ್ಧನಯ್ಯನ ಮನೆಗೆ ಓಡಿದ್ದಳು. ಸುಬ್ಬರಾಯನಿಗೆ ಶಾಮಸುಂದರನ ಮುದ್ದು ಮಾತಿನ ಕಡೆ ಗಮನವಿರದೆ ರಾಜೀವಿಯ ನುಲುಗಿದ ದೇಹದ ಕಡೆ ಗಮನವಿತ್ತು. ರಾಜೀವಿ ಮತ್ತೆ ಆರೋಗ್ಯವಂತಳಾಗಿ ಮನೆಯನ್ನು ಬೆಳಗುವಳೇ ಎಂಬುದೇ ಪ್ರಸ್ತುತ ಅವನ ಯೋಚನೆಯಾಗಿತ್ತು.

ಅಚ್ಚುತ ಶಾಮಸುಂದರನನ್ನೆತ್ತಿಕೊಂಡು ಸಮಾಧಾನಪಡಿಸುತ್ತಾ ಹುಣಸೆಮರದ ಬಳಿ ಬಂದ. ಸುಬ್ಬರಾಯ ಅಡಿಗೆ ಮನೆಗೆ ಹೋಗಿ ಹೆಂಡತಿಗೆ ಚಲ್ಲಾಪಿಲ್ಲಿಯಾದ ಸಾಮಾನು ಸರಿಪಡಿಸುವುದರಲ್ಲಿ ಸಹಾಯ ಮಾಡುತ್ತಾ

"ರಾಜೀ ಇಷ್ಟುಬೇಗ ನೀನು ಬರುತ್ತಿ ಎಂದು ತಿಳಿದಿರಲಿಲ್ಲ. ಕೊಂಚ ಸುಧಾರಿಸಿಕೊಂಡು ಬಂದಿದ್ದರೆ ಚೆನ್ನಾಗಿತ್ತು, ಏಕೆ ಇಷ್ಟು ಅವಸರದಲ್ಲಿ ಬಂದೆ? "

"ಯಾಕೆ ಎಂದರೆ ಏನು ಹೇಳಲಿ? ಇಲ್ಲಿ ನೀವು ಒಂಟಿಯಾಗಿ ಎಷ್ಟು ದಿನ ಇರುವುದು! "

"ಸಧ್ಯಕ್ಕೆ ಬರೋಲ್ಲ, ಮೈಕಳೆದ ಮೇಲೆ ಬರೋದು ಅಂತ ಹೇಳಿ ಹೋಗಿದ್ದಿ...."

"ಅಲ್ಲಿಗೆ ಹೋದಮೇಲೆ ಇಲ್ಲಿನದೇ ಯೋಚನೆ ಸದಾ ಕಾಡತೊಡಗಿತು, ಓಡಿಬಂದೆ"

"ಬರ್‍ತಾ ಬರ್‍ತಾ ನೀನು ಹುಡುಗಿಯಾಗ್ತಾ ಇದ್ದೀಯ ರಾಜೀ. ನಿನ್ನ ಆರೋಗ್ಯದ ಕಡೆ ಗಮನ ಕೊಡಬೇಡವೆ? ಇಲ್ಲಿ ನನಗೇನು ತೊಂದರೆಯಿತ್ತು...."

"ಇಲ್ಲಿ ಬಂದರೇ ನನ್ನ ದೇಹಸ್ಥಿತಿ ಉತ್ತಮವಾಗತ್ತೆಂದು ನನಗನ್ನಿಸಿತು. ಅಲ್ಲಿ ಅಮ್ಮನಿಗೂ ಖಾಯಿಲೆ, ನಾನೂ ಹಾಸಿಗೆ ಹಾಸಿ ಮಲಗಿದರೆ ಮಾಡುವವಳು ಪಾಪ ಜಗನ್ನಾಥನ ಹೆಂಡತಿ. ಅದೆಲ್ಲಾ ತೊಂದರೆ ಏತಕ್ಕೆಂದು ನನ್ನ ಮನೆಗೆ ನಾನು ಬಂದೆ" ಎಂದಾಗ ಕತ್ತಿನ ಸೆರೆ ಉಬ್ಬಿ ಬಂದಿತ್ತು.

"ನನಗೊಂದೂ ತೋಚೋಲ್ಲ, ನೀನೀಗ ಬರದಿದ್ದರೇ ಚೆನ್ನಾಗಿತ್ತು...." ಎಂದು ಸಹಜವಾಗಿ ಅಂದ. ಈ ಮಾತಿಗೆ ತಡೆಯದ ದುಃಖ ಒಡೆದ ಕೆರೆಯಂತೆ ಹರಿದು ಬಂತು. ಸಂಶಯದ ಸಾಗರ ಹೆಡೆಎತ್ತಿ ಕಾಡಿತು. ತಾನು

ಅಲ್ಲಿಗೆ ಬಂದದ್ದು ಇವರ ಸ್ವೇಚ್ಛಾ ಪ್ರವೃತ್ತಿಗೆ ಅಡ್ಡಿ ಮಾಡಿದಂತಾಗಿರಬೇಕು, ಇಲ್ಲದಿದ್ದರೆ ಬಂದರೆ ಸಾಕೆಂದು ಹಾತೊರೆದು ಕಾಯುತ್ತಿದ್ದವರು "ಬಾರದಿದ್ದರೇ ಚೆನ್ನಾಗಿತ್ತು" ಎಂದು ಹೇಳುತ್ತಿದ್ದರೆ?

"…………………" ರಾಜೀವಿ ಮಾತಾಡದೆ ತುಂಬು ಗಣ್ಣಲ್ಲಿ ದುಃಖ ತುಂಬಿ ನೋಡಿದಳು. ನೋಟದಲ್ಲಿ ತನ್ನ ಅನಾರೋಗ್ಯ, ತಾನು ಅವರ ಇಚ್ಛೆ ತೃಪ್ತಿಪಡಿಸಲಾರಳೆಂಬ ನೊಂದು ಬೆಂದ ವ್ಯಥೆ ಇತ್ತು. ಬಿಕ್ಕಿ ಅಳುವುದೊಂದೇ ಬಾಕಿ ಉಳಿದಿತ್ತು....ತಡೆತಡೆದು ಕಡೆಗೆಂದಳು....

"....ಹೌದು ನಾನು ಬರಬಾರದಾಗಿತ್ತು....ಕೆಟ್ಟ ಮನಸ್ಸು ತಡೆಯಲಾಗಲಿಲ್ಲ...." ಎಂದಳು. ಭಾರವಾದ ಕಲ್ಲು ಮರಿಗೆ ಗೂಡಿನಿಂದ ತೆಗೆದು ತೊಳೆದಿಡುವ ನೆಪದಿಂದ ಹಿಡಿದಿದ್ದಳು. ಕೈ ನಡುಗಿ ಜಾರಿ ಕೆಳಕ್ಕೆ ಬಿತ್ತು. ಕಲ್ಲುಮರಿಗೆ-ಒಡೆದು ಚೂರು ಚೂರಾಯಿತು. ತಲೆತಗ್ಗಿಸಿ ಹೊರಕ್ಕೆ ಬಂದಳು. ಚಾಪೆಮೇಲೆ ಮಲಗಿ ಬಿಕ್ಕಿ ಬಿಕ್ಕಿ ಅತ್ತಳು.

ಬಿದ್ದ ಸದ್ದಿಗೆ ಹೊರಗಿದ್ದ ಅಚ್ಯುತ ಬಂದ, ಇದೇ ಸಮಯಕ್ಕೆ ಸರಸ್ವತಿಯ ಜೊತೆಗೆ ಸುಶೀಲೆಯೂ ಬಂದಳು. ಒಡೆದ ಕಲ್ಲುಮರಿಗೆ, ಸ್ತಬ್ಧನಾಗಿ ನಿಂತ ಸುಬ್ಬರಾಯ-ಅಳುತ್ತಾ ಮಲಗಿದ ರಾಜೀವಿ-ಒಂದೂ ಅರ್ಥವಾಗಲಿಲ್ಲ ಸುಶೀಲೆಗೆ. ಬಹುದಿನದ ಮೇಲೆ ಮನೆಗೆ ಬಂದಿದ್ದ ಸುಶೀಲೆಯನ್ನು ದಿಟ್ಟಿಸಿ ನೋಡಿದ ಸುಬ್ಬರಾಯ. ಆ ದೃಷ್ಟಿಯಲ್ಲಿ ಹಸಿದ ತೋಳದ ನೋಟವಿತ್ತು. ಒಂದುಕ್ಷಣ ಸುಶೀಲೆ ತತ್ತರಿಸಿದಳು-ಹಸಿದ ಕಣ್ಣಿನ ನೋಟ ತನ್ನನ್ನು ಬೆತ್ತಲೆ ಮಾಡಿ ನೋಡುವಂತೆ ಕಂಡಿತು. ಅಳುತ್ತ ಮಲಗಿದ್ದ ರಾಜೀವಿ ಬಳಿ ಬಂದು ಕುಳಿತಳು ಸುಶೀಲ. ಸರಸ್ವತಿ ಒಡೆದ ಕಲ್ಲು ಮರಿಗೆ ತುಂಡು ಆರಿಸತೊಡಗಿದಳು. ಅಚ್ಯುತನೂ ಸ್ತಂಭೀಭೂತನಾಗಿ ನಿಂತುಬಿಟ್ಟ ಸುಶೀಲೆಯನ್ನು ನೋಡಿ.

ಸುಶೀಲೆ ರಾಜೀವಿಯ ಹಣೆ ಮುಟ್ಟಿ ನೋಡಿದಳು, ಜ್ವರ ಕಾಯುತ್ತಿತ್ತು. ಪ್ರಯಾಣದ ಆಯಾಸ ಜೊತೆಗೆ ತಕ್ಷಣ ಮನೆಗೆಲಸಕ್ಕೆ ತೊಡಗಿದ್ದು ಮೇಲಾಗಿ ಸೂಕ್ಷ್ಮ ದೇಹ ಪ್ರಕೃತಿ ಇವುಗಳೇ ಇವಳ ಜ್ವರಕ್ಕೆ ಕಾರಣವೆಂದು ಸುಶೀಲೆ ಊಹಿಸಿದಳು.

"ರಾಜಮ್ಮ....ಹೇಗಿದೆ ಈಗ....ಕೊಂಚ ವಿಶ್ರಮಿಸಿಕೊಳ್ಳಿ........ಬಂದ ತಕ್ಷಣ ಕೆಲಸಕ್ಕೆ ತೊಡಗುವುದೇ ಅದಕ್ಕೇನು ಅವಸರವಿತ್ತು? ನಾನೇ ನಿಧಾನ ವಾಗಿ ಜೋಡಿಸಿಕೊಡುತ್ತಿದ್ದೆ...."

"................" ರಾಜೀವಿ ಮಾತೇ ಆಡಲಿಲ್ಲ. ಸೆರಗಿನಿಂದ ಕಣ್ಣೀರು ಒರಸಿಕೊಂಡಳು. ಸುಶೀಲೆಯೇ ಎದ್ದು ಅವಳ ಹಾಸಿಗೆ ಕೊಡವಿ ರೂಮಿನಲ್ಲಿ ಹಾಸಿ ಬಲವಂತದಿಂದ ತಂದು ಮಲಗಿಸಿದಳು. ರಾಜೀವಿ ಬೇಡ ಬೇಡವೆಂದು ತಡೆದರೂ ಬಿಡದೆ ಮನೆಗೆ ಹೋಗಿ ಕಾಫಿ ಮಾಡಿತಂದಳು. ಅಭಿಮಾನದಿಂದ ಉಪಚರಿಸಿದಳು. ಸಂಜೆ ಊಟಕ್ಕೆ ತಾನೇ ಅನ್ನ–ಒಂದಷ್ಟು ಮೆಂತ್ಯದ ಹಿಟ್ಟು ಕಲಸಿ ತರುವುದಾಗಿ ಹೇಳಿದಳು.

ಸುಶೀಲೆಯನ್ನು ನೋಡಿದೊಡನೆ ಕಡುಕೋಪವೇ ಮೂಡಿತು ರಾಜೀ ವಿಗೆ. ಅವಳ ಅಡಿಗೆ–ಉಪಚಾರ ಮಾತು ಒಂದೂ ಬೇಕಿರಲಿಲ್ಲ. ಅವಳು ತನ್ನ ಮನೆಗೆ ಬಾರದಿದ್ದರೇ ಮೇಲು ಎಂದು ಅವಳ ಮನಸ್ಸು. ಅವಳ ನಿಷ್ಕಪಟ ನೋಟ ಮುಗ್ಧಮುಖ ನೋಡಿ 'ಎಂತಹ ಸೋಗು ಈ ಸೋಗನಾಡೀದು' ಎಂದು ಕೊಂಡಳು. ಲೀಲಾವತಿಯ ಮಾತು ನೆನಪಿಗೆ ಬಂತು. 'ಸುಶೀಲಮ್ಮಾ ತಾವು ಮನೆಗೆ ದಯಮಾಡಿಸಿ' ಎಂದೆನ್ನುವ ಆಸೆ. ಆದರೆ ವರ್ಷಾನು ವರ್ಷದ ಸಲಿಗೆ–ಅದು ನಿಜವೆ ನೋಡುವ, ಪರೀಕ್ಷಿಸುವ, ಎಂಬ ಕುತೂಹಲ ಅವಳನ್ನು ಹಾಗೆ ಹೇಳಲಿಕ್ಕೆ ಬಿಡಲಿಲ್ಲ. ರಾಜೀವಿ ಹಾಸಿಗೆ ಹಿಡಿದಳು.

ಪ್ರತಿನಿತ್ಯ ಸುಶೀಲೆ ಮನೆಯಿಂದ ಅಡಿಗೆಮಾಡಿ ತಂದಿಡುವಳು, ಸರ ಸ್ವತಿಗೆ ಹೆರಳು ಹಾಕುವಳು. ಶಾಮಸುಂದರನಿಗೆ ಎರೆಯುವಳು, ಇವೆಲ್ಲ ಕೆಲಸದಲ್ಲಿ ಅವಳಿಗೆ ಅವರ್ಣನೀಯ ತೃಪ್ತಿ, ಆನಂದವಿರುತ್ತಿತ್ತು.

ರಾಜೀವಿ ಮಾತ್ರ ಅವಳನ್ನು ಒಳಮನಸ್ಸಿನಲ್ಲಿ ವೈರಿಯೆಂದೇ ಭಾವಿ ಸಿದ್ದಳು. ಆದರೆ ತನ್ನ ಅನಾರೋಗ್ಯದ ಅವಸ್ಥೆಯಲ್ಲಿ ಆನುವಾಗಿ ಬಂದು ತನ್ನ ಮಕ್ಕಳನ್ನು ಅವಳ ಮಕ್ಕಳಂತೆ ನೋಡಿಕೊಳ್ಳುವಾಗ ಸೋದರಿಯಂತೆ ತೋರುವಳು. ಮರುಕ್ಷಣವೇ ತನ್ನ ಪತಿ ದೇವರ ಪ್ರೇಮಕ್ಕೆ ಪಾತ್ರಳಾಗಿ ತನಗೆ ಅನ್ಯಾಯ ಬಯಸಿದ ಪಾಪಿ ಎಂದೆಂದುಕೊಳ್ಳುವಳು. ಇನ್ನೊಂದು ಮನಸ್ಸು ಮರುಕ್ಷಣವೇ ಈ ಅಂಶವನ್ನು ಸಮರ್ಥಿಸುವ ಸಾಕ್ಷಿ ಎಲ್ಲಿದೆ, ಬರಿಯ ಆರೋ

ಪಣೆಮಾಡುವುದು ಸುಲುಭ ನಿಜವೆಂದು ರುಜುವಾತು ಮಾಡುವುದು ಕಷ್ಟ ಎನ್ನುವುದು. ಈ ದಿನಗಳಲ್ಲಿ ಒಂದುಬಾರಿಯೂ ಸುಶೀಲೆ ಸುಬ್ಬರಾಯನನ್ನು ಕಣ್ಣೆತ್ತಿ ಕೂಡ ನೋಡಿರಲಿಲ್ಲ. ಅವರು ಕಚೇರಿಗೆ ಹೋದ ಹೊತ್ತಿನಲ್ಲೇ ಸುಶೀಲೆ ರಾಜೀವಿಯ ಮನೆಯಲ್ಲಿರುತ್ತಿದ್ದಳು, ಸಂಜೆಯ ಹೊತ್ತಿಗೆ ವಾಪಸ್ಸು ಹೊರಟುಬಿಡುವಳು. ಲೀಲಾವತಿಯ ಮಾತಿಗೆ ತಾನು ಇಷ್ಟು ಅನುಮಾನಪಟ್ಟು ಅನ್ಯಾಯವಾಗಿ ಸಂಶಯಕ್ಕೀಡಾದಂತಾಯಿತಲ್ಲಾ ಎಂದುಕೊಳ್ಳುವಳು.

ಮರುಕ್ಷಣವೇ ಇವರು ಲಕ್ಷ್ಮಣರಾಯರ ತಮ್ಮಂದಿರಲ್ಲವೆ, ಹೆಂಡಿರ ಜೊತೆ ಅತ್ತಿಗೆಯೂ ಇರಲೆಂದು ಬಯಸಿದಾತನ ತಮ್ಮ, ಅದೇ ರಕ್ತ ಅದೇ ವಂಶ ಅಂದಮೇಲೆ ಇವರ ಮನಸ್ಸೂ ಹರಿದೋಡಿರಬಹುದಲ್ಲವೇ ಎನ್ನುವ ವಾದ ಸರಣಿಯಲ್ಲಿ ತೊಡಗುವಳು. ಇವೆಲ್ಲಾ ಮನಸ್ಸಿನ ತುಮುಲದಲ್ಲ- ಈ ಎಲ್ಲ ಜೋಕಾಲಿಯ ಮನೋಧರ್ಮದಲ್ಲಿ ಅವಳ ಆರೋಗ್ಯ ಮತ್ತಷ್ಟು ಕೆಡುತ್ತಿತ್ತಲ್ಲದೆ ಉತ್ತಮವಾಗುತ್ತಿರಲಿಲ್ಲ.

"ರಾಜೀವೀ....ಇಲ್ಲಿ ನೋಡು ಅನ್ಯಾಯ" ಎಂದು ಗದ್ಗದ ಕಂಠದಲ್ಲಿ ಕೂಗುತ್ತಾ ಕೈಯಲ್ಲಿ ಕಾಗದ ಒಂದನ್ನು ಹಿಡಿದು ಬಂದ ಸುಬ್ಬರಾಯ. ಮಲಗಿದಲ್ಲಿಂದಲೇ ಬಟ್ಟಲುಗಣ್ಣು ಬಿಟ್ಟು ನೋಡಿದಳು ರಾಜೀವಿ. "ಏನು" ಎಂದು ಗಾಬರಿಯಾಗೇ ಕೇಳಿದಳು.

"ಚಳ್ಳಕೆರೆಯಿಂದ ಸೂರಪ್ಪನವರು ಕಾಗದಾ ಬರೆದಿದ್ದಾರೆ, ಶಾರದಮ್ಮ ತೀರಿಕೊಂಡರಂತೆ "

"ಶಾರದಮ್ಮ ತೀರಿಕೊಂಡರೇ....ಅಯ್ಯೋ ದೇವರೇ ಇರುವೇ ಗೂಡಿಗೆ ಬೆಂಕಿ ಇಟ್ಟ ಹಾಗಾಯ್ತಲ್ಲ....ಹೆತ್ತಕೂಸು !"

"ಇದೆಯಂತೆ....ಗಂಡು—ಅಮ್ಮನನ್ನ ತಿಂದುಕೊಂಡಿತು, ಕೆಟ್ಟ ನಕ್ಷತ್ರವಿರಬೇಕು"

"ಆ ಹುಡುಗರ ಗತಿ ಏನು—ಸೂರಪ್ಪನವರಿಗೆ ಯಾರು ಸಮಾಧಾನ ಹೇಳಬೇಕು....ಅಯ್ಯೋ ರಾಮಾ ಈ ಸುದ್ದಿ ನನಗೆ ಹೇಳಲೇಬಾರದಾಗಿತ್ತು ಎಂದೆನಿಸುತ್ತೆ. ಎಲ್ಲಿಲ್ಲದ ಕಷ್ಟ ಪಾಪ ಆ ಬಡ ಗುಮಾಸ್ತೆಗೇ ಬಂದು ಬಡಿಯಬೇಕೆ? ಶಾರದಮ್ಮನೇನೋ ಪುಣ್ಯವಂತರು ಮುತ್ತೈದೆ ಸಾವು, ಆದರೆ ಇದ್ದವರ ಗತಿ ಏನು ? ಅಷ್ಟೂ ಇಷ್ಟ ಇಷ್ಟು ಪುಟ್ಟ ಪುಟ್ಟ ಮಕ್ಕಳಲ್ಲಾ....ಅವಕ್ಕೆ ದಿಕ್ಯಾರು"

ಎಂದು ಬಿಕ್ಕಿ ಬಿಕ್ಕಿ ಅತ್ತಳು. ತನ್ನ ಸ್ವಂತ ಅಕ್ಕ ಹೋದಷ್ಟು ದುಃಖವಾಯಿತು ರಾಜೀವಿಗೆ.

ಗರಬಡಿದವನಂತೆ ನಿಂತಿದ್ದ ಸುಬ್ಬರಾಯ. ಶಾರದಮ್ಮ ಸತ್ತಿದ್ದು ಯಾಕೆ? ಅವರೇಕೆ ಸಾಯಬೇಕಿತ್ತು? ಹುಂ—ಆಯಸ್ಸು ತೀರಿತ್ತು, ಜವರಾಯ ಕರೆದೊಯ್ದರೆ ಯಾರು ಬಿಡಿಸಲು ಸಾಧ್ಯ ಎನ್ನುವ ಲೋಕಾರೂಢಿಯ ಮಾತಿಗಿಂತ ಮೂಲಭೂತವಾದ ಕಾರಣ ಸುಬ್ಬರಾಯನನ್ನು ಕಾಡಿತು. ಬಡತನ, ಪುಷ್ಟವಾದ ಆಹಾರವಿಲ್ಲದ್ದು. ಬೆಳಗಿಂದ ಸಂಜೆತನಕ ದುಡಿಯುವುದು, ವರ್ಷಕ್ಕೊಂದರಂತೆ ಮಕ್ಕಳನ್ನು ಹೆರುವುದು; ಹೆತ್ತ ಮಕ್ಕಳಿಗೆ ನೆತ್ತಿಗೆ ಎಣ್ಣೆ, ಹೊಟ್ಟೆಗೆ ಅನ್ನ ಕಾಣಿಸುವ ವಾತ್ಸಲ್ಯದಲ್ಲಿ ತಾವು ಅರೆಹೊಟ್ಟೆ ಇರುತ್ತಿದ್ದುದು. ಬೇಡವೆಂದರೂ ಮಕ್ಕಳನ್ನು ದೇವರು ಕೊಡುತ್ತಾನೆಂದು ಹೆರುತ್ತಲೇ ಇರುವುದು, ಹೆರುವುದು ತಾನೆ ಅವರಿಗೆ ಬೇಕಾಗಿದ್ದ ಸಂಗತಿಯೆ? ಬೆಳಗಿನಿಂದ ಸಂಜೆಯ ತನಕ ಗಂಜಗಾಗಿ ದುಡಿಯುವ ಗಂಡ ಉಸ್ಸಪ್ಪ ಎಂದು ಮನೆಗೆ ಬಂದಾಗ ಹೆಂಡತಿಯ ಮುಖನೋಡಿ ಸಂತೃಪ್ತನಾಗಬೇಕು. ಗುಮಾಸ್ತೆಗಳಿಗೆ ಮನೋರಂಜನೆ ಎಲ್ಲಿಂದ ದೊರೆಯಬೇಕು? ಹಣವಂತರಿಗಾದರೆ ಏನೆಲ್ಲ ಬೇಕೆಂದರೂ ಸಿಕ್ಕುತ್ತದೆ, ಆಡಲು ಇಸ್ಪೀಟು, ಕುಣಿಯಲು ಬಾಲ್‌ರೂಮು, ಕುಡಿಯಲು ಕಳ್ಳು, ಬೇಕೆಂದರೆ ಮೈತೂರಿ ಚೆಲ್ಲುವ ತರುಣಿಯರು, ಬೇಕಾದ್ದು ತಂದೀತು ದುಡ್ಡು. ಗುಮಾಸ್ತೆ ಸೂರಪ್ಪ? ಅವನಿಗೆ ಇದ್ದ ಸೌಭಾಗ್ಯವೆಂದರೆ ತನ್ನ ಸೌಭಾಗ್ಯವತಿ. ಮನರಂಜನೆಯೆಂದರೆ ಅವಳೊಡನೆ ಸರಸ ಸಲ್ಲಾಪ. ಅದೂ ಎಲ್ಲ ಮಕ್ಕಳು ನಿದ್ರೆ ಹೋದಮೇಲೆ. ಅದರ ಫಲ ಮರುವರ್ಷ ಇನ್ನೊಂದು ಕೂಸಿನ ಅವತಾರ. ಬರೀ ಹೆತ್ತು ಹೆತ್ತು ಸತ್ತುಹೋದರು ಶಾರದಮ್ಮ. ಅದು ಅವರ ತಪ್ಪಲ್ಲ, ಗುಮಾಸ್ತೆಯನ್ನು ಈ ಸ್ಥಿತಿಯಲ್ಲಿಟ್ಟಿರುವವರು ಕಾರಣ, ಈ ಬಲಿಗೆ ಅವರಿಗೆ ಶಿಕ್ಷೆಯಾಗಬೇಕು—ಎಂದೆಲ್ಲಾ ಚಿಂತೆಮಾಡಿದ.

ತನ್ನ ಬಾಳ್ವೆಯೇ ತನ್ನೆದುರು ವಿಕಟ ನಗೆನಕ್ಕು ಕೆಣಕಿದಂತಾಯ್ತು. ಸೂರಪ್ಪನವರಿಗೆ ಎಂಟುಮಂದಿ ಮಕ್ಕಳಾಗಿದ್ದರೆ ತನಗೆ ಇಬ್ಬರು. ಮೈಯಿಳಿದದ್ದೂ ಲೆಕ್ಕಕ್ಕೆ ತೆಗೆದುಕೊಂಡರೆ ನಾಲ್ಕು. ಮತ್ತೆ ಮೇಲೆ ರಾಜೀವಿ ಗರ್ಭಿಣಿ. ಮೇಲೆ ಎಂಟು ದಿನದಿಂದ ಬಿಡದ ಜ್ವರ, ರಾಜೀವಿಯೂ ಹೋಗಿಬಿಡುವಳೆ? ಈ ಯೋಜನೆಗೆ ತತ್ತರಿಸಿ ಹೋದ. ಅವಳಿಗೆ ಸರಿಯಾದ ಚಿಕಿತ್ಸೆಬೇಕು,

ಅವಳು ತೌರೂರಿನಲ್ಲೇ ಇದ್ದಿದ್ದರೆ ಚೆನ್ನಾಗಿರುತ್ತಿತ್ತು. ಅಲ್ಲಿ ಮಾಡುವವ ರಾರು ? ಅತ್ತಿಗೆ ಖಾಯಿಲೆ, ಮಾವನವರ ಪ್ರಕೃತಿಯೂ ಅಷ್ಟಕ್ಕಷ್ಟೆ. ಅಲ್ಲಿಗಿಂತ ಇಲ್ಲಿಯೇ ವಾಸಿ.

ಇಲ್ಲಿಯೇ ವಾಸಿ! ಮೊಳಕಾಲ್ಮೂರಿನ ಸರ್ಕಾರಿ ಡಾಕ್ಟರು ಡಾ|| ರಾಯನ್ ಔಷಧಿ ಕೊಡುತ್ತಿದ್ದರು. ಚಿತ್ರದುರ್ಗಕ್ಕೆ ಕರೆದೊಯ್ದು ಲೇಡಿ ಡಾಕ್ಟರಿಗೆ ತೋರಿಸಿದರೆ ಉತ್ತಮ, ಸಂಪೂರ್ಣ ಪರೀಕ್ಷೆ ಮಾಡಿ ನೋಡಿದರೆ ಒಳ್ಳೆಯದು, ಕೊಂಚ ಜ್ವರ ಇಳಿದುಬಿಡಲಿ ಆ ಮೇಲೆ ಕರೆದುಕೊಂಡು ಹೋಗಿ ಬನ್ನಿ ಎಂದು ಅವರು ಹೇಳಿದ್ದರು. ಚಿತ್ರದುರ್ಗಕ್ಕೆ ಹೋಗಬೇಕು. ಅಲ್ಲಿ ನೋಡಿಸಬೇಕು. ಅದಕ್ಕೆ ಹಣಬೇಕು. ಊರಿನಿಂದ ಲಕ್ಷ್ಮಣ ಸುತರಾಂ ಕಳಿಸುತ್ತಿರಲಿಲ್ಲ. ಪಾಲಿನ ವಿಚಾರ ಬೇಕಾದಷ್ಟು ಮಾತಾಡುತ್ತಾನಲ್ಲದೆ ಕಾರ್ಯ ತಹ ಕೊಂಚವೂ ಸಹಾಯ ಮಾಡುತ್ತಿರಲಿಲ್ಲ.

ಇನ್ನು ನಾಳೆ ಅಚ್ಯುತ ಊರಿಗೆ ಹೊರಡಬೇಕೆನ್ನುತ್ತಿದ್ದಾನೆ, ಅವನಿಗೂ ಬಸ್ಸು–ರೈಲಿಗೆ ಹಣ ಒದಗಿಸಬೇಕು. ತನಗೆ ಯಾರೂ ಸಹಾಕರಿಲ್ಲ ತನಗೆ ತಾನೇ ಏಕಾಕಿ ; ತನ್ನನ್ನೇ ತಾನು ತಿಂದು ಜೀವಿಸುವಂತಾಯ್ತೆ ಎಂದು ಒಂದು ಘಳಿಗೆ ಏನೂ ತೋಚದೆ ರಾಜೀವಿಯ ಹಾಸಿಗೆ ಬಳಿ ಕುಳಿತುಬಿಟ್ಟ. ಹುಡುಗ ರಿಬ್ಬರೂ ಜನಾರ್ಧನಯ್ಯನ ಮನೆಗೆ ಹೋಗಿದ್ದರು. ಅವಳ ಹಣೆ ಮುಟ್ಟಿ ನೋಡಿದ, ಜ್ವರ ಕೊಂಚ ಇಳಿದಹಾಗಿತ್ತು. ಬೆಳಗ್ಗೆ ಎಲ್ಲಾ ಸಣ್ಣದಾಗೇ ಇರು ತ್ತದೆ ; ಸಂಜೆಯಾದಂತೆ ಹೆಚ್ಚಿ ರಾತ್ರಿ ಎಲ್ಲಾ ಕಾಯುತ್ತಿತ್ತು.

ರಾಜೀವಿ ತುಂಬಾ ಸೊರಗಿದ್ದಳು. ಬೆಳ್ಳಗೆ ಸುಣ್ಣದಂತಹ ಬಣ್ಣಕ್ಕಿಳಿ ದಿದ್ದಳು. ಕೆನ್ನೆ ಬತ್ತಿಹೋಗಿತ್ತು; ಕೈತೋಳು ಸೊರಗಿ ಕಡ್ಡಿಯಾಗಿದ್ದುವು ; ಬಡಕಲ ದೇಹವನ್ನು ಕಂಬಳಿ ಮುಚ್ಚಿತ್ತು. ತೇವಗಣ್ಣಿನಿಂದ ಬೆನ್ನಿನ ಮೇಲೆ ಸುಬ್ಬರಾಯ ಕೈ ಆಡಿಸಿದಾಗ ಬರೀ ಎಲುವು–ಪಕ್ಕೆಲುವು ಹಾದುಕೊಂಡಿದ್ದವು. ಮತ್ತೆ ಈ ದೇಹ ತುಂಬಿಕೊಂಡೀತೆ, ಮತ್ತೆ ರಾಜೀವಿ ಮೊದಲಿನಂತೆ ದಷ್ಟ ಪುಷ್ಟಳಾದಾಳೆ ಎನ್ನುವ ಕೊರಗು ಅವನನ್ನು ಕಾಡ ತೊಡಗಿತು.

"ಅನ್ಯಾಯ, ತುಂಬಾ ಅನ್ಯಾಯ ಶಾರದಮ್ಮ ಹೋದದ್ದು" ಎಂದು ನರ ಳುತ್ತಾ ಹೇಳಿದಾಗ ಅವಳ ಕಣ್ಣೂ ತೇವವಾಗಿತ್ತು.

"ಹುಡುಗರೆಲ್ಲಿ ?"

"ಜನಾರ್ಧನನ ಮನೆಯಲ್ಲಿರಬೇಕು. ಸುಶೀಲ ಇರುವ ಹೊತ್ತಿಗೆ ಆ ಮಕ್ಕಳು ಹೊತ್ತುಹೊತ್ತಿಗೆ ಇಷ್ಟು ಅನ್ನ ಕಾಣುತ್ತಿವೆ. ಯಾವ ಜನ್ಮದ ಪುಣ್ಯವೋ ಅವರೂ ಇಲ್ಲಿರುವುದು"

"....ಸುಶೀಲ....ತನ್ನ ಮಕ್ಕಳ ಹಾಗೇ ನೋಡ್ಕೊತಾಳೆ. ನಾನು ಅವಳ ಋಣ ಈ ಜನ್ಮದಲ್ಲಿ ತೀರಿಸುತ್ತೇನೆಯೆ ? "

—ಈ ಮಾತು ಬಾಯಿಂದ ಆಡಿದ್ದು ಅಷ್ಟೆ. ಅವಳ ಹೃದಯದಲ್ಲಿ ಸುಶೀಲೆ ತನ್ನ ಮನೆಯಲ್ಲೇಕೆ ಇಷ್ಟು ಬಳಕೆಯಿಂದ ಓಡಾಡಬೇಕು? ಲೀಲಾವತಿ ಹೇಳಿದ್ದು ನಿಜವೆ? ಛೆ! ಸುಳ್ಳು, ತನ್ನ ಸುಬ್ಬರಾಯ ಅಂಥವನಲ್ಲ, ಸುಶೀಲಳಲ್ಲಿ ಅನುಮಾನ ಬರುವ ನಡತೆಯೇ ಇರಲಿಲ್ಲವಲ್ಲ-ಎಂಬೀ ಪ್ರಶ್ನೆಗಳು ಮೊಳಗಿದವು.

ಈ ಹೊತ್ತಿಗೆ ಸುಶೀಲೆಯೇ ಬಂದಳು. ಸರಸ್ವತಿಗೆ ಮೊಗ್ಗಿನ ಜಡೆ ಹೆಣೆದಿದ್ದಳು. ಸೊಗಸಾದ ದುಂಡುಮಲ್ಲಿಗೆ ಮೊಗ್ಗು ಜಾಣ್ಮೆಯಿಂದ ಜೋಡಿಸಿ ಹೆಣೆದಿದ್ದಳು. ನಡುನೆತ್ತಿಯ ಭಾಗದಲ್ಲಿ ಹೆಡೆಯಂತೆ ಹರಡಿ ಬರುಬರುತ್ತಾ ಸಣ್ಣಗಾಗಿ ನಾಗರ ಹಾವಿನಂತೆ ಹೆಣೆದಿದ್ದಳು. ಜಡೆಯ ಮಧ್ಯಕ್ಕೆ ತನ್ನ ಬಿಲ್ಲೆ ಹಾಕಿದ್ದಳು, ಕೊರಳಿಗೆ ತನ್ನ ಸರವನ್ನೇ ಹಾಕಿದ್ದಳು. ಹೆಮ್ಮೆಯಿಂದ ಸೆಟೆದ ಕತ್ತನ್ನು ತಿರುಗಿಸಲು ಪ್ರಯಾಸವಾಗುತ್ತಿದ್ದರೂ 'ಅಮ್ಮಾ ನೋಡಮ್ಮ' ಎಂದು ಬಂದು ನಿಂತಾಗ ತುಂಬಾ ಚಲುವಾಗಿ ಕಂಡಳು ಸರಸ್ವತಿ. ವಯಸ್ಸಿಗೆ ಮೀರಿದ ಅವಳ ಬೆಳವಣಿಗೆ, ಕಿತ್ತಲೆ·ಬಣ್ಣದ ಅವಳ ರೂಪು, ಹಾಕಿದ ಜಡೆ ಮೊಗ್ಗು ದೃಷ್ಟಿ ಬರುವಂತಿದ್ದಳು. ಕಣ್ಣಿಗೆ ಕಾಡಿಗೆ ಹಚ್ಚಿಕೊಂಡು ಕಿವಿಗೆ ಲೋಲಾಕು ಹಾಕಿ ಮೂಗಿಗೆ ಬುಲಾಕನ್ನೂ ಇಟ್ಟಿದ್ದಳು. ಇವೆಲ್ಲ ಅಲಂಕಾರಕ್ಕೆ ಸೊಗಸಾದ ರೇಷ್ಮೆ ಪರಕಾರ ಚೋಳಿ ಇದ್ದಿದ್ದರೆ ಚೆನ್ನಾಗಿರುತ್ತಿತ್ತು. ಅದೊಂದು ಮಾತ್ರ ಕಳಪೆಯಾಗಿತ್ತು. ರಾಜೀವಿ ಸೆರಗಿನ ತುದಿಗೆ ಕಟ್ಟಿದ ಬೀಗದ ಕೈ ಕುಚ್ಚು ಬಿಚ್ಚಿ, "ಸರಸು—ನನ್ನ ರೊಟ್ಟೆ ಅಂಚಿನ ಸೀರೆ ಉಟ್ಟುಕೊ" ಎಂದಳು. ಸುಶೀಲೆ ಅವಳನ್ನು ಸೀರೆ ಉಡಿಸಲು ನಡುಮನೆಗೆ ಕರೆದೊಯ್ದಾಗ ಸುಬ್ಬರಾಯ ರಾಜೀವಿಯನ್ನು ಅರ್ಥ ಪೂರ್ಣವಾಗಿ ನೋಡಿದ. ಆ ನೋಟದಲ್ಲಿ ಕೆಲವೇ ನಿಮಿಷಗಳ ಕೆಳಗೆ ಸುಶೀಲೆಯ ಬಗ್ಗೆ ತನ್ನ ಅಭಿಪ್ರಾಯ ಸೂಚಿಸಿದ ಸಮರ್ಥನೆಯಿತ್ತು.

ಭಾರಿ ಸೀರೆಯನ್ನು ಕಷ್ಟಪಟ್ಟು ಉಡಿಸಿದ್ದಳು ಸುಶೀಲ. ಹೆಮ್ಮೆಯಿಂದ ಜಂಭದ ನವಿಲಿನಂತೆ ನಲಿದಾಡಿದಳು ಸರಸ್ವತಿ. "ಜಂಬದ ಕೋಳಿ ಸುಸ್ಸೀ" ಎಂದು ಪೀಡಿಸಿದ ಶಾಮಸುಂದರ.

ಸುಶೀಲೆಗೆ ಸರಸ್ವತಿಯನ್ನು ಎಷ್ಟು ಸಿಂಗರಿಸಿದರೂ ಸಾಲದು, ಎಷ್ಟು ನೋಡಿದರೂ ಸಾಲದು, ಎಷ್ಟುಸಲ ಸೀರೆ ಜಡೆ ಸರಿಮಾಡಿದರೂ ಸಾಲದು. ಸರಸ್ವತಿಯ ಬಿಗ್ಗು ಹೇಳತೀರದು, ಎಷ್ಟು ಜನಕ್ಕೆ ತೋರಿಸಿದರೂ ಸಾಲದು. ಅಚ್ಯುತ ಅವಳನ್ನು ಪೀಡಿಸಿದ, ಹಾಸ್ಯ ಮಾಡಿದ, ಜಂಬದ ಕೋಳಿ ಎಂದು ಛೇಡಿಸಿದ. ಡಾಕ್ಟರ ಮನೆ, ಶಿರಸ್ತೆದಾರ್ರ ಮನೆ, ಸಬ್ ಇನ್ಸ್ಪೆಕ್ಟರ ಮನೆ, ಮಿಡ್ಲ್ ಸ್ಕೂಲ್ ಹೆಡ್ಮೇಸ್ಟರ ಮನೆ, ತನ್ನ ಮೋಡಮ್ಮ ಲೀಲಾವತಿಯ ಮನೆಗಳಿಗೆಲ್ಲಾ ಹೋಗಿ ಬಂದಳು. ದೃಷ್ಟಿಯಾದೀತೆಂದು ಸುಶೀಲೆ ಓಕಳಿ ತೆಗೆದು ನಿವಾಳಿಸಿದಳು. ಮಲಗಿದ್ದಲ್ಲಿಂದಲೇ ಮಗಳನ್ನು ನೋಡಿ ತೃಪ್ತಿಪಟ್ಟಳು.

ರಾಜೀವಿ ನೋವಿನಲ್ಲೂ ನಕ್ಕದ್ದು-ಸರಸ್ವತಿ ಮೊಗ್ಗಿನ ಜಡೆ ಹಾಕಿಕೊಂಡು ಸಡಗರದಿಂದ ಸಂಭ್ರಮದಿಂದ ಓಡಾಡಿದಾಗಲೆ ಇದಕ್ಕೆ ಕಾರಣಳಾದ ಸುಶೀಲೆಯನ್ನು ಹೇಗೆ ವಂದಿಸಬೇಕು; ಹೇಗೆ ಏನು ಹೇಳಬೇಕೆಂಬುದೇ ಅವಳಿಗೆ ತೋಚಲಿಲ್ಲ.

ಸುಬ್ಬರಾಯನಿಗೆ ಮಾತ್ರ ಮನೆಯ ಯಜಮಾನತಿ ನರಳುವಾಗ ಈ ಸಡಗರದ ಮೊಗ್ಗಿನ ಜಡೆ ಏಕೆ ಎಂದೆನಿಸಿತು. ಸುಶೀಲೆಯ ಸಂತೃಪ್ತಿಯ ನೋಟ, ಮಗಳ ಬಿಗ್ಗಿದ ಮುಖ ಇವೆಲ್ಲದರ ಜೊತೆಗೆ ರಾಜೀವಿಯೂ ಹಸನ್ಮುಖಳಾಗಿದ್ದುದನ್ನು ಕಂಡು ಸುಶೀಲೆ ಹಾಗೆ ಮಾಡಿದ್ದೇ ಸರಿ ಎಂದೆನಿಸಿತು.

ಮರುದಿನ ಅಚ್ಯುತ ಊರಿಗೆ ಹೊರಟ. ಸಮಯ ಅಂದರೆ ದೇವರು ಹೇಗೋ ಒದಗಿಸುತ್ತಾನೆಂಬ ಸುಬ್ಬರಾಯನ ನಂಬಿಕೆಗೆ ಸರಿಯಾಗಿ ಕಚೇರಿಯಲ್ಲಿ ಯಾವುದೋ ಭಾರಿ ಇನಮು ಲಕ್ಷಣವಾಗೇ ಕೈ ಬೆಚ್ಚಗೆ ಮಾಡಿದ್ದ. ಡಾ|| ರಾಯರ್ ಹೇಳಿದ್ದ ಔಷಧಗಳನ್ನು ರಾಯದುರ್ಗದಿಂದ ತರಿಸುವುದಕ್ಕೂ, ಅಚ್ಯುತನನ್ನು ಊರಿಗೆ ಕಳಿಸುವುದಕ್ಕೂ ಇದರಿಂದ ಅನುಕೂಲವಾಯಿತು.

ರಾಮಸುಂದರ ತುಂಬಾ ತುಂಟ. ಸದಾ ಹಟ-ತಿಂಡಿಗೆ ತಿನಿಸಿಗೆ ರಾಗ ಹಿಡಿದನೆಂದರೆ ತಲೆ ಚಿಟ್ಟು ಹಿಡಿದು ಹೋಗಬೇಕು. ಒಂದೊಂದುಸಲ ರೇಗಿ ಎರಡು ಬಿಗಿದೂ ಬಿಡುತ್ತಿದ್ದ ಸುಬ್ಬರಾಯ. ಇದರಿಂದ ಅಳು ಹೆಚ್ಚುತ್ತಿ

ತ್ತಿಲ್ಲದೆ ಕಡಿಮೆಯಾಗುತ್ತಿರಲಿಲ್ಲ. ತಾಯಿ ರಾಜೀವಿ ಹಾಸಿಗೆ ಹಿಡಿದ ಮೇಲಂತೂ ಅವನು ಅಟ್ಟಕ್ಕೇ ಏರಿದ್ದ. ಸುಶೀಲೆ ಕೋಡುಬಳೆ, ಚಕ್ಕುಲಿ, ರಾಗಿ ಹುರಿಹಿಟ್ಟು ಮಾಡಿ ತಂದಿಟ್ಟಿದ್ದಳು. ವಿನಾ ಕಾರಣ ರಾಗ ಎತ್ತಿ ಒಂದಲ್ಲ ಒಂದು ಪಡೆಯುವುದೇ ಅವನ ನಿತ್ಯದ ಚರಿಯಾಗಿತ್ತು. ಅವನಿಗೆಲ್ಲಿ ಅಜೀರ್ಣ ವಾಗಿ ಅವನೂ ಹಾಸಿಗೆ ಹಿಡಿಯುವನೋ ಎಂದೆನಿಸಿತ್ತು ರಾಜೀವಿಗೆ. ಏನು ಮಾಡುವುದು ? ಸುಬ್ಬರಾಯ ಆಫೀಸಿಗೆ ಹೋಗುವತನಕ ಹಾಗೂ ಹೀಗೂ ಇರುತ್ತಿದ್ದ. ಆ ಮೇಲೆ ಸರಸ್ವತಿಯನ್ನು ಚಿವುಟುವನು. ಅವಳೂ ತಡೆಯುವ ತನಕ ತಡೆದು ಕಡೆಗೆ ಮೆಲ್ಲಗೆ ಕೈಮಾಡಿದಳು. ಸಾಕು, ಅದೇ ಕಾರಣದಿಂದ ರಾಗ ಹಿಡಿದುಬಿಡುತ್ತಿದ್ದ. ಮೊದಲೇ ಶಾಲೆ ಎಂದರೆ ತಲೆ ಶೂಲೆ ಅವನಿಗೆ. ಇನ್ನು ಕೊಂಚ ನೆಪ ಸಿಕ್ಕರೆ ಸಾಕು-ಅಳುವುದಕ್ಕೆ ಪ್ರಾರಂಭಿಸಿ ಹೋಗಲಿ ಸ್ಕೂಲಿಗೆ ಹೋಗಬೇಡ ಅಂದರೆ ಸುಮ್ಮನಾಗುವನು. ಸರಸ್ವತಿಯೂ ಸ್ಕೂಲಿಗೆ ಹೋಗುತ್ತಿದ್ದಳು. ಸುಶೀಲೆಯಲ್ಲದೆ ಮತ್ತೆ ಯಾರು ಅವನನ್ನು ಸಮಾಧಾನ ಪಡಿಸಬೇಕು ? ಯಾರ ಸಂಸಾರದ ಹೊರೆ ಯಾರ ಮೇಲೆ ? ಮನೆಯ ಕೆಲಸ ದಿಂದ ಹಿಡಿದು ಅವನ ಮಕ್ಕಳನ್ನು ಸುಧಾರಿಸುವವರೆಗೆ ಎಲ್ಲವೂ ಸುಶೀಲೆ ನೋಡಿಕೊಳ್ಳುವಳು. ಇದೆಲ್ಲವನ್ನೂ ಅಸಹಾಯಕ ಪರಿಸ್ಥಿತಿಯಲ್ಲಿದ್ದ ರಾಜೀವಿ ನೋಡಿ,

"ಸುಶೀಲಮ್ಮ ನಿಮಗೊಳ್ಳೆ ಗ್ರಹಚಾರ, ನಾವು ಒಳ್ಳೆ ಕಷ್ಟ ಕೊಡು ತ್ತಿದ್ದೇವೆ ನಿಮಗೆ" ಎಂದಳು.

"ಏನು ತೊಂದರೆ ? "

"ಅಲ್ಲದೆ ಮತ್ತೇನು ? ನಿಮ್ಮ ಸಂಸಾರದ ಹೊರೆಗೆ ನನ್ನದೂ ನಿಮ್ಮ ಮೇಲೆ ಹೇರಿದ್ದೀನಲ್ಲ ನಾನೆಂಥವಳು ನೋಡಿ ! "

"ಹೌದು ಹೌದು, ನನಗೆ ಹತ್ತಾರು ಮಕ್ಕಳು, ಮೂರು ನಾಲ್ಕು ಬಾಣಂತನ ; ಜೊತೆಗೆ ನಿಮ್ಮ ಮನೆ ಕೆಲಸವನ್ನು ಸೇರಿಸಿದ್ದೀರಿ, ಅಲ್ಲವೆ ?............ ಏನು ಮಾತು ನಿಮ್ಮದು ರಾಜಮ್ಮ! ಇದಕ್ಕಿಂತ ನನಗೇನು ಕೆಲಸ? ನನಗೇನು ಮಕ್ಕಳೇ ಮರಿಯೇ! ಗಂಡ ಗುಂಡಿ ಇಬ್ಬರೇ........"

—ಮಕ್ಕಳೇ ಮರಿಯೇ ಎಂದು ಹೇಳುವಾಗ ಅವಳಿಗೆ ದುಃಖವಾಯಿತು. ಈ ಹೊತ್ತಿಗೆ ಶಾಮಸುಂದರ ತಲೆಯ ಮೇಲೆ ಮಣ್ಣು ಸುರಿದುಕೊಂಡು ಅಂಗಿಯೆಲ್ಲಾ ನೀರು ಮಾಡಿಕೊಂಡು ಬಂದಿದ್ದ.

ಅವನನ್ನು ನೋಡುತ್ತಲೇ ಸುಶೀಲೆಗೆ ದುಃಖ ಮಾಯವಾಗಿ ನಗು ಬಂತು; ಎಂತಹ ತುಂಟ ಹುಡುಗ!

"ನೋಡಿ ರಾಜಮ್ಮ, ನಿಮ್ಮ ಮಗನ ಅವತಾರ"

"ನೋಡೀಮ್ಮ ನೀವೇಯ. ಈಗ ಅವನು ನನ್ನ ಮಗನಲ್ಲ ನಿಮ್ಮ ಮಗ...."

ತನ್ನ ಮಗ-ಸುಬ್ಬರಾಯನ ಮಗ ತನ್ನ ಮಗ! ಅಕ್ಕರೆಯಿಂದ ಅವನ ಒದ್ದೆ ಬಟ್ಟೆ ಬದಲಿಸಿ ತಲೆ ಒರಸಿ ಹಿಕ್ಕಿ ಶೃಂಗರಿಸಿದಳು. ನಿಜಕ್ಕೂ ತನ್ನ ಮಗನೆನ್ನುವ ಭಾವನೆಯಿಂದಲೆ ಅವಳು ಅವನ ಹಣೆಗೆ ಸಾರಿನ ಬೊಟ್ಟಿಟ್ಟಳು.

"ಹಾಸಿಗೆಯಿಂದ ಕೊಂಚ ಏಳುವ ಹಾಗಾಗಲಿ, ಸಾಕು ನಿಮಗೆ ಈ ಹುಡುಗರ ಕಾಟದಿಂದ ಮುಕ್ತಮಾಡುವೆ"

"ಹಾಗೇ ಮಾಡುವಿರಂತೆ, ಮೊದಲು ನೀವು ಆರೋಗ್ಯವಂತರಾಗಿ...." ಎಂದು ಗೂಡಿನಲ್ಲಿದ್ದ ಔಷಧಿಯನ್ನು ಬಟ್ಟಲಿಗೆ ಸುರುವಿ ರಾಜೀವಿಗೆ ಕುಡಿಸಿದಳು.

ರಾಜೀವಿ ಊರಿಗೆ ಬರಬಾರದಾಗಿತ್ತು. ಆ ಪ್ರಯಾಣದ ಆಯಾಸವೇ ಆವಳ ಖಾಯಿಲೆಗೆ ಕಾರಣವೆಂದು ಸುಶೀಲೆಯ ಅಭಿಪ್ರಾಯ.

"ರಾಜಮ್ಮ, ನೀವು ಈಗ ಊರಿಗೆ ಬಂದದ್ದು ತಪ್ಪು. ಏನು ಅವಸರವಿತ್ತು ಈಗ........" ಎಂದಳು ಸುಶೀಲೆ.

ಈ ಮಾತಿಗೆ ಎದೆ ಝುಲ್ ಎಂದಿತು ರಾಜೀವಿಗೆ. ಏನು ಅವಸರವಿತ್ತು ಈಗ? ತನ್ನ ಬರುವಿಕೆಯಿಂದ ಸುಶೀಲೆಗೇನು ತೊಂದರೆ! ಅದು ನಿಜವೆ? ಲೀಲಾವತಿಯ ಮಾತು ಛಾಟಿಯಿಂದ ಹೊಡೆದೆಬ್ಬಿಸಿದಂತೆ ಅವಳನ್ನು ಮುತ್ತಿತು. ಹೌದು ನಾನಿಲ್ಲಿಗೆ ಬರಬಾರದಾಗಿತ್ತು. ನನ್ನ ಮನೆಗೆ ನಾನು ಬರಬಾರದಾಗಿತ್ತು. ಸಂಶಯ ಪಿಶಾಚಿ ಪ್ರಳಯಾಂತಕನಂತೆ ಅವಳನ್ನು ಮುತ್ತಿತ್ತು. ತನ್ನನ್ನು ಊರಿಗಟ್ಟಿದರೆ ಇಲ್ಲಿ ತಾನು ಸ್ವೇಚ್ಛೆಯಾಗಿರಲು

ಅನುಕೂಲ. ನಾನಿರುವುದು ಇವಳಿಗೆ ತೊಂದರೆ. ಅದಕ್ಕೆ ಆ ಮಾತು ಅಂದಿರಬೇಕು. ಇಲ್ಲದಿದ್ದರೆ ನಾನು ತವರೂರಿಗೆ ಹೋಗುವುದರಲ್ಲಿ ಸುಶೀಲೆ ಗೇನು ಆಸಕ್ತಿ....? ಸುಶೀಲೆ ನಮ್ಮ ಮನೆಗೆ ಬರುವುದು ಸರಿಯಲ್ಲ. ಎಂದು ಅವಳ ಮನಸ್ಸಿನಲ್ಲಿ ಅಂಘೋಳನವೇ ನಡೆಯಿತು. ಅದೇ ಸಿಟ್ಟಿನ ಭರದಲ್ಲಿ ನಡುಗುವ ನರಳುವ ಧ್ವನಿಯಲ್ಲಿ ಹೇಳಿದಳು.

"ಸುಶೀಲಮ್ಮ ಇನ್ನು ಮೇಲೆ ನೀವು ನಮ್ಮ ಮನೆಗೆ ಬರುವ ಅಗತ್ಯವಿಲ್ಲ. ನಮ್ಮ ಮನೆ ಭಾರ ನಿಮಗೇಕೆ? ಸಾಕು ನಿಮ್ಮ ಉಪಕಾರ. ದೊಡ್ಡ ಉಪ ಕಾರವೇ ಮಾಡಿದ್ದೀರಿ...."

ಎಂದು ಹೇಳಿ ಕಣ್ಣೀರಿಡುತ್ತಾ ಬದಿಗೆ ತಿರುಗಿ ಮಲಗಿಬಿಟ್ಟಳು. ಸುಶೀ ಲೆಗೆ ಬರಸಿಡಿಲು ಎರಗಿದಂತಾಯ್ತು, ಭೂಮಿಯೇ ಬಾಯಿ ಬಿಟ್ಟು ಒಳಕ್ಕೆಳೆದು ಕೊಂಡಂತಾಯ್ತು. ಕಿವಿಗೆ ಕಾಸಿದ ಸೀಸ ಹೊಯ್ದ ಹಾಗಾಯಿತು, ತನ್ನ ಕಿವಿ ತಾನೇ ನಂಬದಾದಳು. ಸನ್ನಿ ತಿರುಗಿ ಹೀಗೆ ಮಾತಾಡಿರಬಹುದೇ ಎಂಬ ಸಂದೇಹ ಬಾರದಿರಲಿಲ್ಲ. ಕೆಲವೇ ನಿಮಿಷಗಳ ಕೆಳಗೆ ಶಾಮಸುಂದರನ ತಾಯಿ ಯೆಂದು ತನಗೆ ಹೇಳಿದ ಬಾಯಿ ಈಗ ಮನೆಗೇ ಬರಬೇಡವೆಂದು ಹೇಳುತ್ತಿರು ವುದು ಸಾಧ್ಯವೆ? ಅವಳಿಗೆ ದಿಕ್ಕು ತೋಚದಾಯ್ತು ದಿಗ್ಭ್ರಮೆಯಾಯಿತು. ಕಕ್ಕಾ ಬಿಕ್ಕಿಯಾಗಿ ಮಾತೇ ಹೊರಡದಾಯ್ತು.

ಮೆಲ್ಲಗೆ ರಾಜೀವಿಯ ಹಣೆ ಮುಟ್ಟಿ ನೋಡಿದಳು. ಸಾಧಾರಣ ಸುಡು ತ್ತಿತ್ತು. ರಾಜೀವಿ ಸುಶೀಲೆಯ ಕೈಯನ್ನು ಕಿತ್ತೊಗೆದು ದುರುಗುಟ್ಟಿ ಕೆಂಗಣ್ಣಿ ನಿಂದ ನೋಡಿದಳು. "ತೊಲಗಾಚೆ ತೊತ್ತೆ" ಎಂದೆನ್ನುವ ನೋಟದಿಂದ ನೋಡಿದಳು. ಸುಶೀಲೆ ಚಿಂತಾಮಗ್ನಳಾಗಿ ಮನೆಯತ್ತ ಮರಳಿದಳು. ರಾಜೀ ವಿಯ ವಿಚಿತ್ರ ವರ್ತನೆ ಅವಳಿಗೆ ಅರ್ಥವೇ ಆಗಲಿಲ್ಲ.

ಮನೆಗೆ ಬಂದರೂ ಅವಳ ಮನಸ್ಸು ಶಾಂತವಾಗಲಿಲ್ಲ. ರಾಜೀವಿ ಹಾಗೇಕೆ ಅಂದಳು, ಕಾರಣವೇನಿರಬಹುದು? ಎನ್ನುವ ಯೋಚನೆಯ ಜೊತೆಗೆ ಅವಳ ಮನೆಯ ಮೇಲೆ ಕ್ರೋಧವೂ ಬಂತು. ಹಾವಿಗೆ ಹಾಲೆರೆ ದಂತಾಯ್ತು. ಏನೋ ಮಕ್ಕಳ ಮನೆಯೆಂದು ಸಹಾಯಕ್ಕೆ ಹೋದರೆ ಕಾರ್ಕೋಟಕನಂತೆ ವರ್ತಿಸಬೇಕೆ? ನನಗೇನು ಬೇಕು? ಅವಳ ಮನೆಯ

ಕಡೆ ತಲೆಯೂ ಹಾಕುವುದಿಲ್ಲ ಎಂದಿತು ಅವಳ ಸ್ವಾಭಿಮಾನ. ಮರುಕ್ಷಣವೆ ಮೂರ್ಖ ರಾಜೀವಿಯ ಮಾತಿಗೆ ಮುದ್ದುಮಕ್ಕಳು ಮರುಗಬೇಕೆ? ಹೇಗೆ ಮಾಡಬೇಕು–ಅವಳಿಗೆ ಅರ್ಥವಾಗಲಿಲ್ಲ. ಸುಬ್ಬರಾಯನ ಸಂಸಾರ ಹೀಗಾಯಿತಲ್ಲಾ ಎಂದು ಮಾತ್ರ ಅವಳು ಕಣ್ಣೀರಿಟ್ಟಳು. ಏನೂ ತೋಚದೆ ದೇವರ ಮುಂದೆ ಬೆಳ್ಳಿಯ ನೀಲಾಂಜನ ಹಚ್ಚಿಟ್ಟಳು. ಅದೇ ದೀಪ, ರಾಜೀವಿ–ಸುಬ್ಬರಾಯ ತನಗೆ ಉಡುಗೊರೆಯಾಗಿ ಕೊಟ್ಟ ನಂದಾದೀಪದ ಕುಡಿ ಮಂದವಾಗಿ ಪ್ರಕಾಶಿಸಿತು.

ಜನಾರ್ಧನಯ್ಯನೂ ಹೊನ್ನಾಳಿಗೆ ಹೋಗಿ ಬಹಳ ದಿನವಾಗಿತ್ತು. ಹದಿನೈದು ದಿನ ರಜೆ ಪಡೆದು ಹೆಂಡತಿಯೊಡನೆ ಹೊನ್ನಾಳಿಗೆ ಹೋಗಬೇಕೆಂದು ತೀರ್ಮಾನಿಸಿದ್ದ. ಸುಶೀಲೆಗೂ ಹೋಗಬೇಕೆಂದು ಮನಸಾಯಿತು. ರಾಜೀವಿಯ ಮಾತಿನಿಂದ ಅವಳು ಬಹಳ ನೊಂದುಕೊಂಡಿದ್ದಳು. ಊರಿಗೆ ಹೋಗಿ ಬಂದರೆ ಸಮಾಧಾನವಾಗಬಹುದೆಂದೂ ಅವಳೇ ಈ ಪ್ರಯಾಣಕ್ಕೂ ಕಾರಣಳಾಗಿದ್ದಳು. ಅಂದಿನಿಂದ ಅವಳು ಸುಬ್ಬರಾಯನ ಮನೆಗೆ ಹೋಗಲೇ ಇಲ್ಲ. ಸುಬ್ಬರಾಯನಿಗೆ ಇದು ಅಚ್ಚರಿಯನ್ನುಂಟುಮಾಡಿದರೂ, ಸುಶೀಲ ಏಕೆ ಬರುತ್ತಿಲ್ಲವೆಂದು ಹೇಗೆ ಕೇಳುವುದು? ಧರ್ಮ ಸೂಕ್ಷ್ಮ ಸಂಕಟಕ್ಕೆ ಈಡಾಗಿದ್ದ. ರಾಜೀವಿಗೆ ಸುಶೀಲೆ ಬಾರದಿದ್ದುದು ಒಂದು ಬಗೆಯ ಸಮಾಧಾನವಾಗಿದ್ದರೂ, ಮಕ್ಕಳ ಪರಿಪೋಷಣೆಗೆ ಎರವಾಗುತ್ತಿದ್ದ ಕೈ ಇಲ್ಲವಾಗಿದ್ದು ಹೇಳಲಾರದ ಸಂಕಟವಾಗಿತ್ತು.

ಡಾ|| ರಾಯನ್‌ರವರು ರಾಜೀವಿಯನ್ನು ಚಿತ್ರದುರ್ಗದ ಹೆಂಗಸರ ಆಸ್ಪತ್ರೆಗೆ ಕರೆದೊಯ್ದರೇ ಉತ್ತಮವೆಂದು ಖಡಾಖಂಡಿತ ಹೇಳಿಬಿಟ್ಟರು.

ಜನಾರ್ಧನಯ್ಯ-ಸುಶೀಲ ಹೊರಟುಹೋದರು. ಸುಶೀಲೆಗೆ ಶಿವಮೊಗ್ಗೆಗೂ ಹೋಗಿಬರುವ ಆಸೆಯಿತ್ತು. ಮೊದಲು ಶಿವಮೊಗ್ಗೆಗೆ ಹೋಗಿ ಆ ಮೇಲೆ ಹೊನ್ನಾಳಿಗೆ ಪ್ರಯಾಣವೆಂದು ತೀರ್ಮಾನವಾಗಿತ್ತು. ಹೋಗುವಾಗ ಒಂದು ಡಬ್ಬದ ತುಂಬ ಮುಚ್ಚೋರೆ ಮಾಡಿ ಸರಸ್ವತಿ – ಶಾಮಸುಂದರರಿಗೆಂದು ಜನಾರ್ಧನನ ಹತ್ತಿರ ಕಳಿಸಿಕೊಟ್ಟಳು.

"ಸುಬ್ಬರಾಯರೆ, ಹೋಗಿಬರ್‍ತೀನಿ"

"ಒಳ್ಳೇದು ಜನಾರ್ಧನಯ್ಯ...."

"ನಿಮ್ಮ ಮಾವನವರಿಗೆ ಏನಾದರೂ ಹೇಳೋದಿದೆಯೆ ?"

"ಏನೂ ಇಲ್ಲ. ರಾಜೀವಿಯ ಸ್ಥಿತಿ ನಿಮಗೆ ಗೊತ್ತೆ ಇದೆ. ತಿಪ್ಪಯ್ಯ ಸಿಕ್ಕರೆ–ಖಂಡಿತ ನನಗೆ ಕಾಗದ ಬರೆಯುವಂತೆ ಹೇಳಿ–ಇಲ್ಲದಿದ್ದರೆ ಇಲ್ಲಿಗೇ ಬರುವಂತೆ ಹೇಳಿ"

"ಹಾಗೇ ಆಗಲಿ....ನಾನು ಎಂಟೇ ದಿನ ಹೊನ್ನಾಳೀಲಿ ಇರೋದು....ಶಿವಮೊಗ್ಗಾದಲ್ಲಿ ಒಂದಷ್ಟು ದಿನ ಇದ್ದು ಬರೋಣಾಂತ ಅತ್ತೆಯವರು ಕಾಗದಾ ಬರೆದಿದ್ದಾರೆ–ಇವಳಿಗೂ ಬೇಸರ"

"ಅಲ್ಲವೆ ಪಾಪ!"

"ಇನ್ನೇನು ಅಷ್ಟೆ ತಾನೆ ?"

"ಅಷ್ಟೆ...."

"ಬರ್ತೀನಿ"

"ನಮಸ್ಕಾರ"

—ಎಂದು ಮೋಟಾರು ಹತ್ತಿದ. ಮೋಟಾರು ಸ್ಟ್ಯಾಂಡಿಗೆ ಹುಡುಗರು ಬಂದಿದ್ದರೆ ಚೆನ್ನಾಗಿತ್ತು ಎಂದೆನಿಸಿದ್ದು ಸುಶೀಲೆಗೆ ಸುಬ್ಬರಾಯನನ್ನು ನೋಡಿದಾಗ. ಕಣ್ಣಂಚಿನಲ್ಲಿ ನೀರು ಬಂದಿತ್ತು. ಮಕ್ಕಳ ಮನೆ, ಯಜಮಾನತಿಗೆ ಖಾಯಿಲೆ–ಗೊತ್ತಿದ್ದೂ ತಾನು ಹೇಗೆ ಊರುಬಿಡುತ್ತಿರುವುದು ಸರಿಯಲ್ಲವೆಂದು ಅವಳ ಒಳಮನಸ್ಸು ಚೀರುತ್ತಿತ್ತು. ಒಳಮನಸ್ಸಿನ ನಿರ್ಧಾರಕ್ಕೆ ಮೋಟಾರು ಕಾಯುತ್ತದೆಯೆ ? ಅದೂ ಹೊರಟೇಬಿಟ್ಟಿತು.

ಸುಬ್ಬರಾಯ ಭಾರವಾದ ಹೃದಯದಿಂದ ಮನೆಗೆ ಬಂದ. ರಾಜೀವಿ ಎದ್ದು ಹಾಸಿಗೆ ಮೇಲೆ ಕುಳಿತಿದ್ದಳು. ಜ್ವರ ಎರಡು ದಿನದಿಂದ ಕಡಿಮೆಯಾಗಿದ್ದು ಅವತ್ತು ಪೂರ್ಣ ಇಲ್ಲವಾಗಿತ್ತು. ಟೋಪಿಯನ್ನು, ಕೋಟನ್ನು ಮೊಳೆಗೆ ತಗಲುಹಾಕಿ ಹೆಂಡತಿಯ ಪಕ್ಕದಲ್ಲಿ ಕುಳಿತ.

"ಮೋಟಾರು ಹೋಯಿತೆ ?"

"ಹುಂ"

"ಉಸ್ಸಪ್ಪ....ಕೊಂಚ ಇವತ್ತು ವಾಸಿ ನೋಡಿ"

"ಇನ್ನೇನು ಎದ್ದು ಅಡಿಗೆಗೇ ಪ್ರಾರಂಭಿಸಿಬಿಡು"

"ಸಾಕು ನಿಮ್ಮ ಹಾಸ್ಯ"

"ಹೌದೆ, ಮತ್ತೆ ಮೊನ್ನೆ ಕೊಂಚ ಜ್ವರ ಇಳಿದಿತ್ತೊ ಇಲ್ಲವೋ ಆಗಲೆ ಕಾಫಿಗೆ ಇಟ್ಟಿದ್ದಿ"

"ಮತ್ತೆ ಮನೆಯಲ್ಲಿ ಯಾರು ದಿಕ್ಕು ?"

"... ..........." ಸುಬ್ಬರಾಯನ ಮನಸ್ಸು ಸುಶೀಲೆಯತ್ತ ಹರಿಯಿತು. ಅವಳಿಗೆ ತನ್ನ ಸಂಸಾರದಲ್ಲಿ ಎಷ್ಟೊಂದು ಆಸಕ್ತಿ. ದೇವತೆಯಂಥ ಹೆಂಗಸು. ಯಾವ ಕಾರಣದಿಂದ ಅವಳು ಇದ್ದಕ್ಕಿದ್ದಂತೆ ಬರುವುದು ನಿಲ್ಲಿಸಿದಳು, ಜನಾರ್ಧನನೇಕೆ ಒಮ್ಮೆಲೆ ರಜೆ ಪಡೆದು ಹೊನ್ನಾಳಿಗೆ ಹೋದ ? ಚಿಕ್ಕಪ್ಪನ ಖಾಯಿಲೆಯ ನೆಪಮಾತ್ರವಾಗಿತ್ತು. ನಿಜವಾದ ಕಾರಣ ಏನಿರಬಹುದು ?........

"ನಮ್ಮ ಮನೆಗೆಲಸ ನಾನಲ್ಲದೆ ಬೇರೆ ಯಾರು ಮಾಡುತ್ತಾರೆ ?" ನರಳುತ್ತಾ ಅಂದವಳು ರಾಜೀವಿ.

"ಈಚೆಗೆ ಸುಶೀಲೆ ಏಕೆ ನಮ್ಮ ಮನೆಗೆ ಬರುತ್ತಿದ್ದಂತೆ ಕಾಣಲಿಲ್ಲ ?"

"ಹೌದು, ಅವಳ ಮಾತೇಕೆ ಈಗ ?"

"ಮಕ್ಕಳನ್ನು ಅಕ್ಕರೆಯಿಂದ ನೋಡಿಕೊಳ್ಳುತ್ತಿದ್ದಳು...."

"ನೆರೆಹೊರ್ಕೆ ಎಂದಮೇಲೆ ಯಾರಾದರೂ ಮಾಡುವುದೆ !"

"ಯಾಕೆ ರಾಜಿ ಇಂಥಾ ಮಾತು ? ಉಪಕಾರ ಮಾಡಿದವಳಿಗೆ ಎರಡು ಒಳ್ಳೇ ಮಾತೂ ಬೇಡವೇ ?"

"ನಾನೇನೆಂದೆ ಈಗ ?"

"ಇನ್ನೇನನ್ನಬೇಕು ? ನೀನು ನರಳಿ ಸಾಯ್ತಾ ಬಿದ್ದಿರುವಾಗ ಬಂದು ತನ್ನ ಮನೆ ಅಂತ ತಿಳಕೊಂಡು ಸಹಾಯ ಈಗಿನ ಕಾಲ್ದಲ್ಲಿ ಯಾರು ಮಾಡ್ತಾರೆ ?" ಕೋಪದಿಂದಲೇ ಅಂದ ಈ ಮಾತನ್ನು.

"ಹೌದು ತನ್ನ ಮನೆ. ನನ್ನ ಯಜಮಾನರು ಅವಳ ಬಲೆಗೆ ಬೀಳುವುದಕ್ಕೆ ಅವಕಾಶ ಕೊಡುವಷ್ಟು ಮೂರ್ಖಳಲ್ಲ ನಾನು"

"ಇದೇನು ಮಾತು ರಾಜೀವಿ...."

"ಬೆಕ್ಕು ಕಣ್ಣುಮುಚ್ಚಿ ಹಾಲು ಕುಡಿದರೆ ಬೇರೆಯವರಿಗೆ ಕಾಣೋದಿಲ್ಲಾಂತ ತಿಳಿದಿದ್ದಳು........"

"ಸಾಕು ಸಾಕು. ನಿನ್ನ ಮಾತು ಬರು ಬರುತ್ತಾ ಚೆನ್ನಾಯ್ತು. ಯಾರ ಹತ್ತಿರ ಮಾತಾಡ್ತಿರೋದು ಅನ್ನೋದರ ಪರಿಜ್ಞಾನ ಬೇಡವೆ ನಿನಗೆ ? ನಿನಗೆ

ವ್ಯೆಲಿ ಚೆನ್ನಾಗಿಲ್ಲದ್ದರಿಂದ ಸುಮ್ಮನಿದ್ದೇನೆ. ಇಗೇ ಹುಡುಗಾಟಿಕೆಯ ಮಾತು ಇನ್ನೊ ವ್ಮೆ ಆಡಿದರೆ ಪರಿಣಾಮ ನೆಟ್ಟಗಾಗಲಿಕ್ಕಿಲ್ಲ. ಬರ್‍ತಾ ಬರ್‍ತಾ ನಿನ್ನ ದೇಹದ ಪ್ರಕೃತಿ ಜೊತೆಗೆ ತಲೆಯೂ ಕೆಡುತ್ತಾ ಇಲ್ಲವಷ್ಟೆ!"

ಎಂದು ತಡೆಯಲಾರದೆ, ಎಷ್ಟು ತಡೆದರೂ ಮಾತು ಉಚಾಯಿಸಿ ಬಿಟ್ಟಿತು. ಅನೇಕಮಂದಿ ಸಹೋದ್ಯೋಗಿಗಳು ಹೀಗಂದದ್ದು ಕೇಳಿದ್ದ. ಅದೆಲ್ಲಾ ಗಾಳಿ ಮಾತು. ಅನೇಕಸಲ ಟೀಕೆಯನ್ನು ಪರೋಕ್ಷವಾಗಿ ಆಗ ದವರು ಕಿವಿಗೆ ಬೀಳುವಂತೆ ಮಾಡಿದರು. ಈಗ ರಾಜೀವಿಯೋ ಹೀಗೆ ಅವನ ಮೇಲೆ ಈ ಅಪವಾದದ ಹೊರೆ ಹೊರಿಸಿದ್ದು ನಖಶಿಖಾಂತ ಉರಿದೆದ್ದಿದ್ದ. ಊಟವನ್ನು ಮಾಡದೆ ಹೊರಟುಹೋದ.

ಸರಸ್ವತಿ, ಶಾಮಸುಂದರರಿಗೆ ಇದೊಂದೂ ಅರ್ಥವಾಗದೆ ಗಾಬರಿಯಾಗಿ ತಂದೆಯ ಕೋಪದ ಮಾತು ಎಂದೂ ಕೇಳದವರು ಇಂದು ಕೇಳಿ ಭಯದಿಂದ ನಿಂತಿದ್ದರು.

ರಾಜೀವಿ ಬಿಕ್ಕಿ ಬಿಕ್ಕಿ ಅತ್ತುಬಿಟ್ಟಳು. ತಲೆದಿಂಬಲ್ಲಿ ಮುಖ ಹುದು ಗಿಸಿ ಅತ್ತಳು. ಹೀಗೆ ಹಿಂದೆ ಅತ್ತಾಗ ಸುಶೀಲೆ ಸಮಾಧಾನ ಮಾಡಿದ್ದಳು. ಸುಬ್ಬರಾಯನ ಮಾತು ಅವಳಲ್ಲಿ ಅತೀವಯಾತನೆಯನ್ನುಂಟುಮಾಡಿತ್ತು. ಸರಸ್ವತಿ, ಶಾಮಸುಂದರರೂ ಅಳುತ್ತಾ ಕುಳಿತುಬಿಟ್ಟರು. ಪಾಪ ಅವೇನು ಮಾಡಿಯಾವು?

ಸುಬ್ಬರಾಯ ನೇರವಾಗಿ ಕಚೇರಿಗೆ ಹೋದ, ಅಲ್ಲಿ ಕುಚೋದ್ಯದ ಕ್ಲಾರ್ಕೊಬ್ಬ ಮಾತನಾಡಿಸಿದ.

"ಹಿ, ಹಿ....ಜನಾರ್ಧನಯ್ಯನೋರು ಊರಿಗೆ ಹೋದರಂತೇ...."

"..............."

"ಅವರು ಹೆಂಡ್ತೀನೂ ಜೊತೆಗೆ ಹೋದರಂತೆ...."

"....ಅದಕ್ಕೆ ನಾನೇನುಮಾಡ್ಲಿ ನಂಜಪ್ಪ"

"....ನೀವೇನು ಮಾಡ್ತೀರಿ ಪಾಪ....ನಿಮಗೆ ಬೇಸರವೇನೋ...."

"ನನಗೇಕೆ ಬೇಸರ"

"ಜನಾರ್ಧನಯ್ಯನ ಹೆಂಡ್ತಿ ಊರಿಗೆ ಹೋದ್ರೂಂತ...."

"Shut up ಹಲ್ಲು ಉದಿರಿಸೇನು. ನಾಲಿಗೆ ಇದೇಂತ ಹೇಗೆಂದರೆ ಹಾಗೆ ಉಚಾಯಿಸಬೇಡಿ ನಂಜಪ್ಪ, ಹುಶಾರು...."

ಎಂದು ಹಾವಿನಂತೆ ಸಿಡಿದುಬಿದ್ದಾಗ ನಂಜಪ್ಪ ನಂಜಿಲ್ಲದ ಜೊಂಡಿಂಗನ ಹಾಗೆ ಹರಿದುಹೋದ; ಉಸುರೇ ಎತ್ತಲಿಲ್ಲ.

ಇಡೀ ಕಚೇರಿಯೇ ತನ್ನ ನೋಡಿ ಅಣಗಿಸುವಂತೆ ತೋರಿತು. ಮನೆಯಲ್ಲಿ ಕೈಹಿಡಿದ ಅರ್ಧಾಂಗಿಯೇ ಹಾಗಂದಮೇಲೆ ಇವರನ್ನೇಕೆ ಆಕ್ಷೇಪಿಸಬೇಕು? ತಲೆ ಚಿಟ್ಟು ಹಿಡಿದುಹೋಯಿತು. ಕಚೇರಿಯಲ್ಲೂ ಇರಲಿಕ್ಕಾಗಲಿಲ್ಲ. ರಜ ಹೇಳಿ ಹೊರಟುಬಂದ.

ಮತ್ತೆ ಮನೆಗೆ ಬಂದು ಮಾತೇ ಆಡದೆ ಹುಡುಗರಿಗೆ ಬಡಿಸಿ, ತಾನೂ ಉಂಡ ಶಾಸ್ತ್ರ ಮಾಡಿ ರಾಜೀವಿಗೆ ಔಷಧ ಕುಡಿಯಲು ಹೇಳಿ ಟವಾಲು ಹೆಗಲಿಗೇರಿಸಿ ನೇರವಾಗಿ ಜೋಗಪ್ಪನ ಗುಡ್ಡ ಏರಿಹೋದ.

ಪ್ರಶಾಂತವಾದ ಬಂಡೆಯೊಂದರ ಮೇಲೆ ಕುಳಿತುಬಿಟ್ಟ. ಮನಸ್ಸಿನ ಆವೇಗದ ಭಾರ ಇಳಿಯಲಿಲ್ಲ. ದೂರದಲ್ಲಿ ದನಕಾಯುವ ಹುಡುಗನೊಬ್ಬ ಕೊಳಲಿನಿಂದ ಸುಮಧುರನಾದ ಹೊರಹೊಮ್ಮಿಸಿದ. ಕೃಷ್ಣನ ಕೊಳಲು ನೆನಪಿಗೆ ಬಂತು–ಮುರಳಿ ನಾದ, ರಾಧೆ ಕೃಷ್ಣ. ರಾಧೆ ಮದುವೆಯಾದವಳು ಕೃಷ್ಣನನ್ನು ಪ್ರೇಮಿಸಿದಳು. ಕೃಷ್ಣ ರುಕ್ಮಿಣಿಯ ಗಂಡ ಆದರೂ ರಾಧೆಯನ್ನು ಪ್ರೇಮಿಸಿದ, ಅದರಲ್ಲೇನು ತಪ್ಪು? ನಿಜ ಸುಶೀಲೆಗೆ ತನ್ನ ಮೇಲೆ ಅನುರಾಗವಿದ್ದಿರಬಹುದು, ತನಗೆ ಅವಳನ್ನು ಕಂಡರೆ ಪ್ರೀತಿ ಇತ್ತು, ಅದೊಂದು ಅಮರ ಪ್ರೇಮವಾಗತ್ತೆ? ಕಾಮ ಪಿಪಾಸೆಯ, ವ್ಯಾಮೋಹದ, ಹಸಿವಿನ ಕೂಗು ಆಗಿರಲಿಲ್ಲವೆ? ದೇವರ ಸಾಕ್ಷಿಯಾಗಿ ಅವಳ ಪ್ರಾಣವನ್ನೊಮ್ಮೆ ಉಳಿಸುವಾಗಲ್ಲದೆ ಬೇರಾವಾಗಲೂ ಅವಳನ್ನು ಮುಟ್ಟಿರಲಿಲ್ಲ. ಮತ್ತೇಕೆ ಈ ಜನ ಹೀಗೆ ಪೀಡಿಸಬೇಕು? ಕೈಹಿಡಿದ ಹೆಂಡತಿಗೂ ಈ ಅನುಮಾನವೇ?

ಅದೇ ಯೋಚನೆಯಲ್ಲಿ ಗಂಟೆಗಳುರುಳಿ ಸೂರ್ಯ ಮುಳುಗುವ ಹೊತ್ತಾಯಿತು. ರಮ್ಯ ಪ್ರಕೃತಿಯ ನೋಟ ಮನಸ್ಸನ್ನು ಹದಕ್ಕೆ ತಂದಿತ್ತು, ಒಂದು ಶಾಂತತೆ ಕೊಟ್ಟಿತ್ತು. ಈ ಚಿಕ್ಕ ಆರೋಪಕ್ಕೆ ಈ ಪಾಟ ಉದ್ವಿಗ್ನನಾದುದಕ್ಕೆ ತನಗೆ ತಾನೇ ನಾಚಿಕೊಂಡ; ರಾಜೀವಿಗೆ ಬೈದುದಕ್ಕೆ ಪಶ್ಚಾ

ತ್ತಾಪಪಟ್ಟ. ಸಣ್ಣಗೆ ತಣ್ಣಗೆ ಬೀಸಿದ ಗಾಳಿಗೆ ಪ್ರೈಯ್ಯೊಡ್ಡಿ ಮನಸ್ಸು ಹಗುರ ಮಾಡಿಕೊಂಡು ಗುಡ್ಡದಿಂದ ಇಳಿದುಬಂದ. ಮನೆಯತ್ತ ಕಾಲು ಹಾಕಿದ.

ಮನೆಗೆ ಬಂದಾಗ ರಾಜೀವಿ ಕಾದಿದ್ದಳು. ಹುಡುಗರು ಹುಣಸೆ ಮರದ ಕೆಳಗೆ ಕುಂಟಾಪಿಲ್ಲಿ ಆಡುತ್ತಿದ್ದರು.

ತಂದೆಯ ಶಾಂತಮುಖ ಕಂಡು "ಅಪ್ಪಾ ಅಪ್ಪಾ" ಎಂದು ಓಡಿ ಬಂದು ಅಪ್ಪಿಕೊಂಡರು. ಇಬ್ಬರನ್ನೂ ಬೆನ್ನು ನೇವರಿಸಿ ಒಳಕ್ಕೆ ಕರೆದೊಯ್ದ. ಆಗಲೆ ಸಂಜೆಯಾಗಿತ್ತು ; ಅಡಿಗೆಗಿಟ್ಟು ರಾಜೀವಿಯ ಬಳಿ ಬಂದ.

"ಸಧ್ಯ ಬಂದಿರಲ್ಲ...." ಎಂದು ನಿಟ್ಟುಸಿರು ಸುಯ್ದಳು ರಾಜೀವಿ. ಅವಳ ನೋಟದಲ್ಲಿ 'ಆಡಿದ ಮಾತೆಲ್ಲಾ ಮರೆತು ಕ್ಷಮಿಸಿ' ಎಂಬ ಬೇಡಿಕೆ ಇತ್ತು.

"ಅಡಿಗೆ ಏನು ಮಾಡಲಿ ? "

"ಏನೂ ಬೇಡ ನಾನೇ ಮಾಡುತ್ತೇನೆ"

"ಬೇಡ....ನೀನು ಸುಧಾರಿಸಿಕೋ"

"ಇಲ್ಲ ನನಗೆ ಜ್ವರ ಬಿಟ್ಟಿದೆ. ಇನ್ನು ಮೇಲೆ ನಾನೇ ಮಾಡ್ತೀನಿ"

"ಏನೂ ಬೇಡ, ಸಧ್ಯ ನೀನು ಆರಾಮು ತೊಗೋ"

ರಾಜೀವಿಯೂ ಪಶ್ಚಾತ್ತಾಪ ಪಟ್ಟಿದ್ದಳು. ಆ ಮಾತು ಆಡಬಾರದಾಗಿತ್ತೆಂದು ಮರುಗಿದ್ದಳು. ತಡೆಯಲಾರದೆ ನಾಲಿಗೆ ಮಾಡಿದ ಕೆಲಸ ಅದು. ಸುಬ್ಬರಾಯ ಎಷ್ಟು ನೊಂದುಕೊಂಡನೋ ಎಂದು ಅತ್ತಿದ್ದಳು. ಗಂಡನ ಮುಖ ಮಾತು ನೋಡಿ ತೃಪ್ತಳಾದಳು. ಆದರೂ ಹೊಗೆಯಾಡೇ ಆಡುತ್ತಿತ್ತು. ಬೆಂಕಿ ಇರಲೇ ಬೇಕಲ್ಲವೆ ಎಂಬುದು ರಾಜೀವಿಯ ಯೋಚನೆ.

೨೪

ಶಿವಮೊಗ್ಗೆಯನ್ನು ತಲುಪಿದಾಗ ಬೆಳಗ್ಗೆ ಎಂಟು ಘಂಟೆಯಾಗಿತ್ತು. ಶಿವಮೊಗ್ಗೆ! ತನ್ನ ಎಳೆತನದ ನೆನಪೆಲ್ಲಾ ಮನದಲ್ಲಿ ಮರುಕಳಿಸಿತು. ಅದೇ ಹಳೇ ಸ್ಟೇಷನ್ನು. ತುಂಗಾ ನದಿಯನ್ನು ಕಬ್ಬಿಣದ ಸೇತುವೆಯಿಂದ ದಾಟಿದರೆ ಹೊಸ ನಿಲ್ದಾಣ. ಅಲ್ಲಿಂದ ಇಳಿದು ಗಂಡ ಹೆಂಡಿರಿಬ್ಬರೂ ಗಾಡಿ ಮಾಡಿ ಕೊಂಡು ದೊಡ್ಡ ಬ್ರಾಹ್ಮಣರ ಕೇರಿಯ ಕಡೆ ಹೋದರು.

ರಂಗಮ್ಮ ಕಳ್ಳೂರುಕಟ್ಟೆಯಿಂದ ಶಿವಮೊಗ್ಗೆಗೆ ಬಂದಿದ್ದಳು! ರಂಗಮ್ಮ ಕಳ್ಳೂರುಕಟ್ಟೆಯಲ್ಲಿ ಬೇಸರವಾದರೆ ಶಿವಮೊಗ್ಗೆಗೆ ಬರುವಳು, ಅಲ್ಲಿ ಬೇಡವೆನಿಸಿ ದರೆ ಮಗಳ ಊರಲ್ಲಿ ಅಷ್ಟು ದಿನವಿದ್ದು ಬರುವಳು. ಈಚೆಗೆ ಕಳ್ಳೂರುಕಟ್ಟೆ ಯಲ್ಲೆ ಹೆಚ್ಚುದಿನ ಇರಬೇಕಾಗಿತ್ತು. ಅದಕ್ಕೆ ಕಾರಣ ರಂಗಮ್ಮನ ಅಣ್ಣನ ಹೆಂಡತಿಗೆ ಮಲರೋಗ ಬರುತ್ತಿತ್ತು. ಅದರಿಂದಾಗಿ ಕಳ್ಳೂರುಕಟ್ಟೆ ಬಿಡುವು ದಕ್ಕೇ ಸಾಧ್ಯವಾಗುತ್ತಿರಲಿಲ್ಲ. ಮಗಳ ಮನೆಯಲ್ಲಿಯಾದರೂ ಬಂದು ಆರು ತಿಂಗಳು ಇರುವುದೆಂದರೆ ಅದಕ್ಕೂ ಅಡ್ಡಿ ಬಂತಲ್ಲಾ ಎಂದು ಪೇಚಾಡುವಳು.

ಈಗ ಬಹಳ ಪ್ರಯಾಸದಿಂದ ಶಿವಮೊಗ್ಗಾಕ್ಕೆ ಬಂದಿದ್ದಳು. ಅಳಿಯ ಮಗಳು ಬರುವ ವಿಚಾರ ಕಾಗದ ಬರೆದು ತಿಳಿಸಿದ್ದರು. ರಂಗಮ್ಮ ಅಷ್ಟು ಹೊತ್ತಿಗೇ ಎದ್ದು ನೀರು ಕಾಸಿ ಕಾಫಿ ಉಪ್ಪಿಟ್ಟು ಮಾಡಿಕೊಂಡು ಮನೆಯ ಮುಂದೆ ಕಾದಿದ್ದಳು. ಇವರು ಬರುವ ವಿಚಾರವನ್ನು ರಂಗಮ್ಮ ತ್ರಿಪುರ ಸುಂದರಿಗೂ ತಿಳಿಸಿದ್ದಳು. ತ್ರಿಪುರಸುಂದರಿಯ ಮಕ್ಕಳು ಮಂಜುಳ, ರುಕ್ಮಿಣಿ ಇಬ್ಬರೂ ರಂಗಮ್ಮನ ಮನೆಯ ಮುಂಬಾಗಿಲಲ್ಲೇ ನಿಂತು ಸುಶೀಲಕ್ಕ ಬರುವ ಳೆಂದು ಕಾದಿದ್ದರು.

ಸುಶೀಲೆ ಗಾಡಿಯಿಂದ ರೈಲುಚೊಂಬು ಹಿಡಿದು ಇಳಿದಳು. ಹಿಂದಿ ನಿಂದಲೇ ಜನಾರ್ಧನ ಇಳಿದ. ಗಾಡಿ ಹೊಡೆಯುವ ಆಳು ಟ್ರಂಕು ಹಾಸಿಗೆ ಒಳಕ್ಕೆ ತಂದಿರಿಸಿ ಹೋದ. ಪಾವಾಡ ಹಾಕಿಕೊಂಡ ಮಂಜುಳ ರುಕ್ಮಿಣಿಯ ರಿಬ್ಬರೂ ಗುರ್ತು ಸಿಗದಷ್ಟು ಬೆಳೆದಿದ್ದರು. ಮಾತೇ ಆಡಲಿಲ್ಲ.

"ಯಾಕ್ರೇ ಗುರ್ತು ಸಿಗಲಿಲ್ಲವೇ" ಎಂದಳು ರಂಗಮ್ಮ. ಕಾಲ ಹೆಬ್ಬೆಟ್ಟಿನಿಂದ ನೆಲ ಕೆರೆದು ತಲೆ ತಗ್ಗಿಸಿ ನಾಚಿದರು ಆ ಹುಡುಗರಿಬ್ಬರು.

"ತ್ರಿಪುರಸುಂದರಿ ಮಕ್ಕಳು ಮಂಜುಳ, ರುಕ್ಕೂ, ಅಲ್ಲವೇ....ಎಷ್ಟು ದೊಡ್ಡವರಾಗಿಬಿಟ್ಟಿದ್ದೀರೇ ನಿಮ್ಮಮ್ಮ ಚೆನ್ನಾಗಿದ್ದಾರಾ....?"

"ಹೂಂ-ನಮ್ಮನೆಗೆ ಬನ್ನಿ ಸುಶೀಲಕ್ಕ" ಎಂದಳು ಮಂಜುಳ.

"ಇಲ್ಲ ಅವಳು ಬರೋಲ್ಲ" ಎಂದು ನಗುತ್ತಾ ಮಂಜುಳೆಯ ಕೆನ್ನೆ ಚಿವುಟಿದ ಜನಾರ್ಧನಯ್ಯ.

"ಹೋ‌ೕ ಗ್ರೀೕ" ಎಂದು ಸುದ್ದಿ ತಿಳಿಸಲು ಮನೆಯ ಕಡೆ ಓಟಕಿತ್ತರು. ರಂಗಮ್ಮ 'ಬನ್ನಿರೇ' ಎಂದು ಕೂಗಿದ್ದೂ ಕೇಳಲಿಲ್ಲ.

ಸುಶೀಲೆ ಒಳಕ್ಕೆ ಹೋಗಿ ಮುಖ ತೊಳೆದುಕೊಂಡು ಪೆಟ್ಟಿಗೆಯಿಂದ ಟೌಲು ತೆಗೆದು ಗಂಡನಿಗೆ ಕೊಟ್ಟಳು. ಜನಾರ್ಧನನು ಸ್ನಾನಮಾಡಿಯೇ ಬಿಟ್ಟ.

ಬಾಳೆ ಎಲೆಯಲ್ಲಿ ಬಿಸಿ ಬಿಸಿಯಾದ ಉಪ್ಪಿಟ್ಟು ಹಾಕಿ ನೀರು ಕೊಟ್ಟಳು ರಂಗಮ್ಮ. ಇಬ್ಬರೂ ತಿನ್ನುತ್ತಾ ಕುಳಿತರು.

"ರಾತ್ರಿ ರೈಲಲ್ಲಿ ನಿದ್ರೆ ಬಂತೆ?"

"ನಿದ್ರೆ! ನನಗಂತು ಕೂಡೋಕೇ ಸ್ಥಳ ಸಿಗಲಿಲ್ಲ. ಇವಳು ಹೆಂಗಸರ ಗಾಡೀಲಿ ಕುಳಿತಿದ್ದಳು-ಗೊರಕೆ ಹೊಡೆದೇ ಬಂದಿರಬೇಕು"

"ಪಾಪ-ಅಲ್ಲಿಯೂ ನೂಕು ನುಗ್ಗಲೇ...."

"ಇನ್ನೇನು ಸಮಾಚಾರ-ಸುಬ್ಬರಾಯನ ಮನೆಯಲ್ಲಿ ಎಲ್ಲಾ ಆರೋಗ್ಯವೇ-ರಾಜೀವಿಯ ಆರೋಗ್ಯ ಹೇಗಿವೆ?"

—ರಾಜೀವಿ ಸುಬ್ಬರಾಯರ ವಿಚಾರ ಬಂದಾಗ ಸುಶೀಲೆ ಮೂಕಳಾದಳು. ಏನೊಂದು ವಿಚಾರ ಹೇಳಲಿಕ್ಕೂ ಅವಳಿಗೆ ಬಾಯೇ ಬರಲಿಲ್ಲ. ತಲೆ ತಗ್ಗಿಸಿ ಉಪ್ಪಿಟ್ಟಿನಲ್ಲಿನ ಒಗ್ಗರಣೆಯ ಕಡಲೆಬೇಳೆ ಒಂದೊಂದನ್ನೇ ಆರಿಸಿ ತಿನ್ನ ತೊಡಗಿದಳು. ಜನಾರ್ಧನನೇ ಮಾತಾಡಿದ.

"ಹೂಂ-ರಾಜಮ್ಮನವರು ಇನ್ನೂ ಪೂರ್ತ ಗುಣವಾಗಿಲ್ಲ....ಸುಬ್ಬರಾಯರಿಗೆ ಅದೇ ವ್ಯಥೆ"

"ಅಲ್ಲವೇ ಪಾಪ-ಅವರು ತುಂಬಾ ಖರ್ಚುಮಾಡಿರಬೇಕು"

"ಲೇಡಿ ಡಾಕ್ಟರಿಗೆ ತೋರಿಸಬೇಕಂತೆ-ಚಿತ್ರದುರ್ಗಕ್ಕೆ ಹೋಗಬೇಕೂಂತ ಇದ್ರು"

"ಮೊನ್ನೆ ತಿಪ್ಪಯ್ಯನವರು ಬಂದಿದ್ದರು. ಅವರ ಪಾಲಿನ ಹೊಲವಾರ ಬೇಕೂಂತ ಬರೆದಿದ್ದರಂತೆ"

"ಹೌದೆ? ಈ ವಿಚಾರ ನನಗೆ ತಿಳಿಯದು-ನಿನಗೇನಾದರೂ ಗೊತ್ತೇನೆ?"

"..............." ಇಲ್ಲವೆಂದು ತಲೆ ಆಡಿಸಿದಳು ಸುಶೀಲ.

"ಏನೋ ಪಾಪ-ಕಷ್ಟಗಳು ಬಂದರೆ ಒಂದೇಸಲ ಬರುತ್ತವೆ....ಇನ್ನಷ್ಟು ಉಪ್ಪಿಟ್ಟು ಹಾಕಿ ಮೊಸರು ಹಾಕಲೆ?"

"ಬೇಡ ಬೇಡ"

"ನೀನು ಹಾಕಿಸಿಕೊಳ್ಳೆ"

"ಉಹುಂ....ಬೇಡಮ್ಮ....ಸಾಕು ಸಾಕು ಕೊಂಚ. ಹಾಂ ಅವರಿಗೂ ಇಷ್ಟು ಹಾಕು"

ಬೇಡ ಬೇಡವೆನ್ನುತ್ತಲೇ ಮತ್ತೊಂದು ಒಬ್ಬೆ ಉಪ್ಪಿಟ್ಟು ಮೊಸರು ಹಾಕಿಕೊಂಡು ತಿಂದರು. ಸೊಗಸಾದ ಕಾಫಿ ಮಾಡಿದ್ದರು. ಅದನ್ನು ದೊಡ್ಡ ಲೋಟದಲ್ಲಿ ಹೀರಿದರು.

"ಇಂಥಾ ಕಾಫಿ ಉಪ್ಪಿಟ್ಟು ತಿಂದು ಎಷ್ಟೊದಿನವಾಗಿತ್ತು"

—ಎಂದಳು ಸುಶೀಲ. ಹೌದು ಎನ್ನುವ ಮುಖಮಾಡಿದ್ದ ಜನಾರ್ಧನ.

"ನಾನು ಹಾಗೇ ಹೊರಗೆ ಹೋಗಿ ಬರ್ತೀನಿ"

"ಎಲ್ಲಿಗೆ?"

"ನರಿ ಎಲ್ಲಿಗೆ ಅಂದರೆ ಹೋಗೋ ಕೆಲಸ ಆದಹಾಗೇ ಇದೆ"

"ಮಹಾರಾಜ ಕಾರ್ಯ ಆಗದಿದ್ದರೆ ಇಲ್ಲ"

"ಸರಿ ಅದರಿಂದ ನನಗೇನು ನಷ್ಟವಿಲ್ಲ, ನಿನಗೇ ನಷ್ಟ"

"ನನಗೇಕೆ ನಷ್ಟ?"

"ಅದೇ ಹೊಸಮೂಗು ಬೊಟ್ಟು ಅಂತ ಮೊಳಕಾಲ್ಮೂರಿನಲ್ಲಿ ಹೇಳಿದ್ದೆಯಲ್ಲಾ, ಈಗ ತರೋಣವೆಂದು ಹೊರಟಿದ್ದೆ"

"ಅಯ್ಯಯ್ಯೋ—ಹಾಗಾದರೆ ಎಲ್ಲಿಗೇಂತ ಕೇಳಿದ್ದು ಊಫಿ. ಕೊಂಚ ಹೊತ್ತು ಕುಳಿತಿದ್ದು ಹೊರಡಿ—ಸರಿಹೋಗುತ್ತೆ"

"ಪರವಾಗಿಲ್ಲ ಜಾಣೆ–ನೀನು, ನೇರವಾಗಿ ಅಂಗಡಿಗೆ ಹೋಗೋಬದಲು ಆ ವೆಂಕಟೇಶನ್ನ ನೋಡಿಕೊಂಡು ಬಂದು ಆ ಮೇಲೆ ಬಟ್ಟೆ ಅಂಗಡಿಗೆ ಬಂದ ರಾಯ್ತು"

"ಸಂಜೆ ನಾನೂ ತ್ರಿಪುರಸುಂದರಿ ಜೊತೆಗೆ ಹೋಗಿ ನನಗೆ ಬೇಕಾದ ನಮೂನೆ ಆರಿಸಿ ತರ್ತೇನೆ–ನೀವು ಈಗ ತರಹೇ ಇದ್ದರೇ ವಾಸಿ"

"ಹಾಗೇ ಮಾಡು-ಇರೊ ಈ ಹದಿನೈದು ರೂಪಾಯಿ ಇಟ್ಟುಕೋ, ಬೇಕಾದ್ದು ಮಾಡಿಕೊ ಆ ಜವಾಬ್ದಾರಿ ತಪ್ಪಿದ್ದೂ ಒಳ್ಳೇದೆ"

—ಎಂದು ಅವಳ ಕೈಗೆ ದುಡ್ಡು ಹಾಕಿ ಹೊರಬಿದ್ದ ಜನಾರ್ಧನ. ಅವನ ಮನಸ್ಸು ಬಹು ಹಗುರವಾಗಿತ್ತು. ಅನೇಕ ದಿನಗಳಿಂದ ರಜವನ್ನು ಪಡೆಯದವನು. ಈಗ ರಜೆಯಲ್ಲಿ ಏನುಮಾಡುವುದು ಎಂಬುದೂ ಒಂದು ಪ್ರಶ್ನೆಯೇ ಆಗಿತ್ತು ಅವನಿಗೆ. ಹೆಂಡತಿಯೊಡನೆ ಈ ಸರಣಿಯಲ್ಲಿ ಹಿಂದೆಂದೂ ಮಾತಾಡಿರಲಿಲ್ಲ. ಸದಾ ಸಿಡಿ ಸಿಡಿಯ ಮುಖವನ್ನೇ ಕಂಡು ಬೆದರಿದ ಬೆಕ್ಕಿನಂತೆ ಮುಸುಳುತ್ತಿದ್ದವನಿಗೆ ನಗುಮುಖದ ಸರಸ ಸಂಭಾಷಣೆ ಮಾಡಿದ ಸುಂದರಿ ಸುಶೀಲೆಯನ್ನು ಕಂಡು ಮನಸ್ಸು ಹಕ್ಕಿಯಂತೆ ಹಗುರಾಗಿ ಹಾರಿತು. ಅವರ್ಣನೀಯ ಆನಂದ ಅವನಲ್ಲಿ ತುಂಬಿತ್ತು. ರಸ್ತೆಯಲ್ಲಿ ನಡೆವಾಗ ಅಂತರಿಕ್ಷದಲ್ಲಿ ತೇಲಿಹೋದ ಅನುಭವವಾಯ್ತು. ನೇರವಾಗಿ ಪೋಸ್ಟಾಫೀಸಿಗೆ ಹೋದ. ಶ್ರೀಧರಮೂರ್ತಿಯ ಭೇಟಿಯಾಯಿತು. ಆಫೀಸಿನ ಸಮಯವಾದ್ದರಿಂದ ಹೆಚ್ಚು ಮಾತಾಡಲಾಗಲಿಲ್ಲ. ಮತ್ತೆ ಸಂಜೆ ಕಡೆ ಕಾಣುವೆನೆಂದು ಹೇಳಿ ಬೀಳ್ಕೊಟ್ಟ.

ವೆಂಕಟೇಶ ಮನೆಯಲ್ಲಿರಲಿಲ್ಲ. ಹೊಸದುರ್ಗದಲ್ಲಿ ಮಾಸ್ತರಗಿರಿಗೆ ಅವನು ರಾಜಿನಾಮೆಕೊಟ್ಟು ವಾಪಸ್ಸು ಬಂದನೆಂಬುದು ಮಾತ್ರ ಗೊತ್ತಿತ್ತು. ದೊಡ್ಡಪೇಟೆ ಕಡೆ ಹೋಗಿ ನಶ್ಯ ತೆಗೆದುಕೊಂಡು ಆಳವಾಗಿ ಏರಿಸುತ್ತಾ ನಿಂತಾಗ ಹಿಂದಿನಿಂದ ಬೆನ್ನಮೇಲೆ ಕೈಯಿಟ್ಟು ವ್ಯಕ್ತಿಯೊಂದು "ಏನ್ರೀ ಯಾವಾಗ ಬಂದದ್ದು" ಎಂದು ವಿಚಾರಿಸಿತು.

ಹರವಾದ ಮೈಕಟ್ಟು–ತುಂಬುಮೀಸೆ. ಕಚ್ಚೆ ಪಂಚೆ, ಜುಬ್ಬ; ತೇಜೋವಂತ ಕಣ್ಣು ನೋಡಿದಾಕ್ಷಣ ಜನಾರ್ಧನನಿಗೆ ಅಮಿತಾನಂದವಾಯಿತು.

"ಹಲೋ ವೆಂಕಟೇಶ್–ಈಗ ತಾನೆ ನಿಮ್ಮ ಮನೆಗೆ ಹೋಗಿದ್ದೆ–ಇವತ್ತು ಮುಂಜಾನೆ ಬಂದೆ"

"ಎಲ್ಲಾ ಸೌಖ್ಯವೇ?–ಸುಬ್ಬು ಮೊಳಕಾಲ್ಮೂರಿನಲ್ಲೇ ಇದ್ದಾನೆಯೇ? ಅವನಿಗೆಷ್ಟು ಜನ ಮಕ್ಕಳು, ನಿಮಗೆಷ್ಟು ಜನ ಮಕ್ಕಳು? ನೀವೆಲ್ಲಿದ್ದೀರಾ– ನಿಮ್ಮ ಮನೆಯಲ್ಲಿ ಎಲ್ಲಾ ಆರೋಗ್ಯವೇ?........"

"ಕೊಂಚ–ಕೊಂಚ ಒಂದೊಂದೇ ಪ್ರಶ್ನೆ ಕೇಳಿ, ಎಕ್ಸ್‌ಪ್ರೆಸ್ ರೈಲಿನಂತೆ ಪ್ರಶ್ನೆಗಳ ಸುರಿಮಳೆ ಹಾಕಿದರೆ ಹೇಗೆ?"

''ನಿಜ-ತಿಳಿಯಬೇಕೂನ್ನೊ ಆತುರದಲ್ಲಿ ಇರೋ ವಿಷಯಗಳನ್ನೆಲ್ಲಾ ಒಂದೇಬಾರಿ ಕೇಳಿಬಿಟ್ಟೆ....ಬನ್ನಿ ಆ ಉಡುಪಿಯವರು ನಮಗಾಗಿ ಇಟ್ಟಿರೋ ಸುಖ ನಿವಾಸದಲ್ಲಿ ಆರಾಮವಾಗಿ ಕೂತು ಎಲ್ಲಾ ವಿಷಯ ತಿಳಿಸುವಿರಂತೆ"

"ಬೆಳಿಗ್ಗೆ ನಮ್ಮ ಅತ್ತೆಯವರು ಕಂಠ ಪೂರ್ತಿ ಉಪ್ಪಿಟ್ಟು ಕೊಟ್ಟು ಬಿಟ್ಟಿರು ಹಸಿವೇ ಇಲ್ಲ"

"ನನಗೆ ತಾನೆ ಹಸಿವಿದೆಯೆ? ಮಹಡಿಮೇಲೆ ಮಾತಾಡಲು ಅನುಕೂಲ ವಾದ ಜಾಗವಿದೆ–ಎರಡು ಲೋಟ ನೀರು ಕುಡಿದು ನಾಲ್ಕು ಘಂಟೆ ಹರಟೆ ಹೊಡಿಯುವ"

"ಹ ಹ....ಚೆನ್ನಾಗಿ ಹೇಳಿದಿರಿ...."

—ಎಂದೆನ್ನುತ್ತಾ ಇಬ್ಬರೂ ಹೋಟಲನ್ನು ಸೇರಿದರು. ಮಹಡಿಯ ಮೇಲೇರಿ ಪ್ರಶಸ್ತ ಜಾಗದಲ್ಲಿ ಕುಳಿತರು.

"ಮಾಣೀ....ಎರಡು ಲೋಟ ನೀರು"

"ಬಂತೂ" ಎಂದು ಕೆಳಗಿಂದ ಮಾಣಿ ಉತ್ತರಿಸಿದ.

—ವೆಂಕಟೇಶ ಬಂದನೆಂದರೆ ಮಾಣಿ ಎರಡು ಲೋಟ ನೀರು ಮೊದಲು ತರಲೇಬೇಕು.

ಹೊಸದುರ್ಗ ಬಿಟ್ಟಮೇಲೆ ಕೆಲಸಕ್ಕೆ ರಾಜಿನಾಮೆ ಕೊಟ್ಟಿರಾ?"

''ಇಲ್ಲ-ಅಲ್ಲಿಂದ ಹಿರಿಯೂರಿಗೆ ವರ್ಗ ಮಾಡಿದರು, ಅಲ್ಲಿಂದಲೇ ರಜ ದಲ್ಲಿ ಇಲ್ಲಿಗೆ ಬಂದವನು ವಾಪಸ್ಸು ಹೋಗಲೇ ಇಲ್ಲ"

"ಏಕೆ?"

"ಲೇ ಮಾಣಿ ಎರಡು ಕಾಫಿ ತಾ....''

"ನನಗೆ ಬೇಡ...."

"ಇಲ್ಲಿ ಕೊಂಚ ತೊಗೊಳ್ಳಿ–ಅಪರೂಪಕ್ಕೆ ಭೆಟ್ಟಿಯಾಗಿದ್ದೀರ...."

"ಹಾಗಾದರೆ ಈಗ ಏನು ಮಾಡ್ಕೊಂಡ್ದೀರಿ ?"

"ಅಪ್ಪನ ಮನೆ ಊಟ, ಸುಖನಿದ್ರೆ, ಸ್ನೇಹಿತರೊಂದಿಗೆ ಹರಟೆ ಇದಿಷ್ಟೆ ಸಧ್ಯಕ್ಕೆ"

"ಸುಳ್ಳು ಹೇಳ್ತೀರ-ಮಕ್ಕಳೆಷ್ಟು ಮಂದಿ? ನಿಜ ಹೇಳಿ, ಹಾಗೆಲ್ಲಾ ನೀವು ಸುಮ್ಮನೆ ಕಾಲಹರಣ ಮಾಡೋರಲ್ಲಾಂತ ನನಗೆ ಗೊತ್ತು"

—ವೆಂಕಟೇಶ ಏನೂ ಮಾತಾಡದೆ ಕಾಫಿ ಸುರುಕ್ ಎನ್ನಿಸಿದ. ಜನಾರ್ಧನ ಅವನನ್ನೇ ನೋಡುತ್ತಿದ್ದ. ಶುಭ್ರವಾದ ಬಿಳಿಯ ಖದ್ದರ್ ಜುಬ್ಬ, ಖದ್ದರ್ ಪಂಚೆಯಲ್ಲಿ ಗಂಭೀರವಾಗಿ ಕುಳಿತಿದ್ದ ವೆಂಕಟೇಶ ಎಷ್ಟು ಗಂಭೀರದ ಮುಖಮಾಡಿದ್ದರೂ ಅವನ ಹಾಸ್ಯಸ್ವಭಾವದ ಮುಖ ಭಂಗಿ ಹಾಗೇ ಇತ್ತು. ಇತ್ತೀಚಿನಲ್ಲಿ ಅವನೇನು ಚಟುವಟಿಕೆಯಲ್ಲಿ ನಿರತನಾಗಿದ್ದಾನೆಂಬುದನ್ನು ತಿಳಿಯುವುದು ಜನಾರ್ಧನನ ಆಸೆಯಾಗಿತ್ತು.

"ಯಾತಕ್ಕೆ ವೆಂಕಟೇಶ್ ಮಾತೇ ಆಡೊಲ್ಲ–ಪ್ರಶ್ನೆಗಳ ಸುರಿಮಳೆಯನ್ನೆ ಹಾಕಿದವರು ತೆಪ್ಪಗೆ ಕುಳಿತಿರಲ್ಲಾ? "

"ಸುಬ್ಬರಾಯನಿಗೆ ಎಷ್ಟು ಜನ ಮಕ್ಕಳೀಗ ?"

"ಇಬ್ಬರು–ಒಂದು ಗಂಡು ಒಂದು ಹೆಣ್ಣು"

"ಎಲ್ಲಾ ಚೆನ್ನಾಗಿದ್ದಾರಾ ?"

"....ಅವನ ಹೆಂಡತಿಗೆ ಮೈಲಿ ಸ್ವಸ್ಥವಿರಲಿಲ್ಲ"

"ಏಕೆ? ಏನು ಖಾಯಿಲೆ ?"

"ಅನಿಮಿಯ ಅಂತೆ....ಮೇಲೆ ಗರ್ಭಿಣಿ ಹೆಂಗಸು....ಈಗ ವಾಸಿ"

"....ಅನಿಮಿಯ....ಮೈಯ್ಯಲ್ಲಿ ರಕ್ತವಿಲ್ಲದೆ ಸುಡುವ ಖಾಯಿಲೆ....ಅವನ ಹೆಂಡತಿಗೂ ಅದೇ ಕಂಪ್ಲೇಂಟೇ !"

"ಯಾಕೆ ಅವನ ಹೆಂಡ್ತಿಗೂ ಅಂದು ರಾಗ ಎಳೆಯುತ್ತೀರೇ ? ಅಂದರೆ ನಿಮ್ಮ...."

"....ಹೌದು ನನ್ನ ಮನೆಯಾಕೆಗೂ ಅದೇ ಖಾಯಿಲೆ"

"ಈಗ ಹೇಗಿದೆ...."

"....ಈ ಬ್ರಿಟಿಷ್‌ನೋರ ರಾಜ್ಯಾಡಳಿತ ಹೋಗೋವರೆಗೂ ನಮಗೆ ಈ ಅನಿಮಿಯ ತಪ್ಪಿದ್ದಲ್ಲ"

ಇದೇನು ಒಮ್ಮೆಲೇ ಗಾಂಧಿ ಚಳುವಳಿಯ ಮಾತು ತೆಗೆದನಲ್ಲ ಈ ಮಹರಾಯ ಎಂದು ಬೆದರಿ ಸುತ್ತಲೂ ಕಣ್ಣು ಆಡಿಸಿ ನೋಡಿದ. ಯಾರಾದರೂ ಈ ಮಾತು ಕೇಳಿದರೋ ಅವರಿಂದ ಇಂತಹ ಸರ್ಕಾರಿ ವಿರುದ್ಧ ತಪ್ಪದ ಮಾತಾಡುವವನೊಡನೆ ಮಾತಾಡುವುದರಿಂದ ತನಗೆಲ್ಲಿ ಅಪಾಯ ಸಂಭವಿಸೀತೋ ಎಂದು ಹೆದರಿದ್ದ.

"ಅದೇನು ಕಾಸಿಂ ನಾಬಿಗೂ ಗೋಕುಲಾಷ್ಟಮಿಗೂ ಸಂಬಂಧ ಕಲ್ಪಿಸ್ತಾ ಇದ್ದೀರಲ್ಲಾ?"

"....ಅದೇ ನಮ್ಮ ದಾಸ್ಯಪ್ರವೃತ್ತಿ. ಅರ್ಥವಾಗದ ಮಂಕುಬೂದಿಯ ಪ್ರೊರೆ ಮುಚ್ಚಿ ಕುರುಡರನ್ನಾಗಿ ಮಾಡಿದೆ ನಮ್ಮನ್ನ...."

"ನಿಮ್ಮ ಭಾಷಣ ಮಾಡಿದಂಥ ಮಾತು ನನಗೆ ಅರ್ಥವಾಗೋದಿಲ್ಲ"

"ಇಲ್ನೋಡೀ ಜನಾರ್ಧನಯ್ಯ. ನಮ್ಮ ದೇಶದಿಂದ ಕೊಳ್ಳೆ ಹೊಯ್ದಂತೆ ಹೊನ್ನು ಹರಿದು ಬ್ರಿಟಿಷ್ ದ್ವೀಪಗಳಿಗೆ ಸೇರ್‍ತಾ ಇದೆ ಇಲ್ಲಿ ನಾವು ಉದ್ಧಾರವಾಗಬೇಕು, ನಾವು ಸುಖವಾಗಿರಬೇಕೂಂದರೆ ಹೇಗೆ ಸಾಧ್ಯ ?"

"ಇಲ್ಲ, ಗಾಂಧಿಕು ಜೈ ಅಂತ ಜೈಲಿಗೆ ಹೋದರೆ ನಮ್ಮ ಹೆಂಡಿರುಗಳ ಅನೀಮಿಯ ಹೊರಟುಹೋಗುತ್ತೆ....ಎಲ್ಲಿಂದ ಎಲ್ಲಿಗೋ ಮಾತು ಸಾಗ್ತಾ ಇದೆ. ನನಗೇಕೆ ಈ ಚಳುವಳಿಯ ಮಾತು"

"ಹೆದರಬೇಡಿ. ನಿಮ್ಮ ಗುಮಾಸ್ತಗಿರಿಗೇನೂ ಸಂಚಕಾರ ಬರೋಲ್ಲ ಮಾತಾಡಲಿಕ್ಕೂ ಸ್ವಾತಂತ್ರ್ಯವಿಲ್ಲಾ ಅನ್ನೋದು ಗೊತ್ತು...."

"ಹೊತ್ತಾಯ್ತು ಮನೆಗೆ ಹೊರಡೋಣವೆ?"

ವೆಂಕಟೇಶನಿಗೆ ನಗು ಬಂದಿತ್ತು. ಭಾರತದ ಸ್ವಾತಂತ್ರ್ಯ ಚಳುವಳಿ ಈ ಸಹಸ್ರಾರು ಗುಮಾಸ್ತೆಗಳಿಗೆ ಅರ್ಥವಾಗುತ್ತಿಲ್ಲವಲ್ಲಾ, ಎಲ್ಲರೂ ತನ್ನಂತೆ ಕೆಲಸಕ್ಕೆ ರಾಜೀನಾಮೆ ಕೊಟ್ಟು ಗಾಂಧೀಜಿಯವರ ಮಹತ್ಕಾರ್ಯದಲ್ಲಿ ಏಕೆ ಸಹಕರಿಸಬಾರದು ಎಂದು ಚಿಂತಿಸಿದ. ಲಕ್ಷಾನು ಲಕ್ಷ ಬಡಗುಮಾಸ್ತೆಗಳಂತೆ ಹೊಟ್ಟೆ ಬಟ್ಟೆಗೆ ದುಡಿಯಲು ಕೆಲಸವನ್ನೇ ನಂಬಿದ ಜನಾರ್ಧನನಿಗೆ ಚಳುವಳಿ ಹೆಸರು ಚೇಳು ಕಂಡಂತೆ ಎಂಬುದು ಅವನರಿಯ. ಮನಸ್ಸಿನಲ್ಲಿ ಸೇರುವ

ಉತ್ಸಾಹವಿದ್ದರೂ ಮೇಲಧಿಕಾರಿಗಳ ಕೆಂಗಣ್ಣ ನೋಟ. ಸಿಐಡಿಗಳ ಸತತ ಕಾಟ ಸಂಪೂರ್ಣ ಅವರನ್ನು ಗುಲಾಮಗಿರಿಗೇ ಕಟ್ಟಿಬಿಟ್ಟಿತ್ತು. ಸಂಕೋಲೆ ಹಾಕಿಕೊಂಡು ಮೂಗಿಗೆ ಕವಡೆ ಕಟ್ಟಿಕೊಂಡು ದುಡಿಯುವ ಗ್ಯಾಲಿ ಗುಲಾಮನ ಗತಿಯಾಗಿತ್ತು ಗುಮಾಸ್ತೆಯ ಸ್ಥಿತಿ-ಇದೆಲ್ಲವನ್ನೂ ಗ್ರಹಿಸಬಲ್ಲವನಾಗಿದ್ದ ವೆಂಕಟೇಶ. ಜನಾರ್ಧನಯ್ಯ ಹೆದರಿ ಹೊರಡಲು ಸಿದ್ಧವಾದದ್ದು ಅವನಿಗೆ ಗೊತ್ತು.

"....ಸರಿ ಅರ್ಥವಾಯಿತು ಜನಾರ್ಧನಯ್ಯನವರೇ''

"ಹೆದರಿಕೆ ಮಾತಿಗಲ್ಲ, ಬಡವಾ ನೀಮುಡಗಿದಂಗೆ ಇರು ಅಂತ ಇರೋರಿಗೆ ಇದೆಲ್ಲ ಯಾತಕ್ಕೆ? ನೀವೂ ಅಷ್ಟೆ, ಹಾಯಾಗಿ ಮಾಸ್ತರಾಗಿದ್ದವರಿಗೆ ಇದೇನು ಕೇಡುಬುದ್ಧಿ ಬಂತು...."

"ಅದು ಈಗ ಅರ್ಥವಾಗೋಲ್ಲ ಜನಾರ್ಧನಯ್ಯ, ದೇಶಕ್ಕೆ ಸ್ವಾತಂತ್ರ್ಯ ಬಂದು ನಮ್ಮನ್ನ ನಾವೇ ಆಳಿಕೊಳ್ಳುವಾಗ ಗೊತ್ತಾಗುತ್ತದೆ....ಬಡತನ ನಿರ್ಮೂಲ ಮಾಡುತ್ತೇವೆ, ಸಮಾಜದ ಘಾತುಕ ಶಕ್ತಿಗಳನ್ನು ಅಡಗಿಸುತ್ತೇವೆ. ಕೋಟ್ಯಾನು ಕೋಟಿ ರೂಪಾಯಿಗಳನ್ನು ನೀರಿನಂತೆ, ಸುರೆ ಸುಂದರ ಹೆಣ್ಣುಗಳು ಕುದುರೆ ಜೂಜುಗಳ ಮೇಲೆ ಸುರಿದು ಲೋಲಪ್ತರಾಗಿರುವ ಈ ರಾಜ ಮಹರಾಜರುಗಳನ್ನು ಸಾಮಾನ್ಯರ ವರ್ಜೆಗೆ ಇಳಿಸಿ 'ಸರ್ವೇಜನಾ ಸುಖಿನೋ ಭವಂತು' ಅನ್ನೊ ಆರ್ಯೋಕ್ತಿ ನಿಜವಾಗುವಂತೆ ಮಾಡುತ್ತೇವೆ. ನಮ್ಮ ಕೈಗಾರಿಕೆ, ವ್ಯವಸಾಯಗಳು ನಾಲ್ಕಾರು ಜನ ಬಂಡವಾಳಸ್ತರು ಹತ್ತಾರು ಮಂದಿ ಜಮೀನ್ದಾರರ ಕೈಯಲ್ಲಿನ ಗೊಂಬೆಯಾಗಿ ಅದನ್ನು ಅವಲಂಬಿಸಿದ ಕೋಟ್ಯಾನು ಕೋಟಿ ಬಡರೈತರ, ಕೂಲಿಗಾರರ ನೆತ್ತರದಿಂದ ಅವರ ಶ್ರೀಮಂತಿಕೆಯ ಶಿಖರವನ್ನು ಮತ್ತಷ್ಟು ಹೊಳೆಯುವಂತೆ ಇನ್ನೆಂದೂ ಆಗಲಾರದು. ಜನಾರ್ಧನಯ್ಯ, ಇದೆಲ್ಲಾ ಹೋಗಿ ಜನತೆಯು ಜನತೆಯಿಂದ ಜನತೆಗಾಗಿ ಸರ್ಕಾರ ನಡೆಸಿದರೇ ನಾವೂ ಒಂದು ಜನಾಂಗವಾದೇವು, ನಮ್ಮದೂ ಒಂದು ರಾಷ್ಟ್ರವಾದೀತು ಅಲ್ಲವೆ? ಯೋಚಿಸಿ ನೋಡಿ...."

ಎಂದು ಬಹಳ ಕಳಕಳಿಯಿಂದ ಹೇಳಿದಾಗ ಮಾಸ್ತರಾಗಿದ್ದ ಹೊಸದುರ್ಗದ ವೆಂಕಟೇಶನಿಗೂ ರಾಷ್ಟ್ರಭಕ್ತ ವೆಂಕಟೇಶನಿಗೂ ಎಷ್ಟೊಂದು ಅಂತರ ಎಂದೆನಿಸಿತು ಜನಾರ್ಧನಯ್ಯನಿಗೆ. ಈ ಮಾತೆಲ್ಲಾ ಅವನಿಗೆ ಹೊಸದು.

ಭಾವಿಯಲ್ಲಿನ ಕಪ್ಪೆಯಂತೆ, ಹೆಡ್ ಗುಮಾಸ್ತರ ಗುಟರಿಗೆ ಹೆದರಿದ ಹಲ್ಲಿಯಂತೆ, ಚಿಕ್ಕ ತಾಲ್ಲೂಕಿನಲ್ಲಿ ಸರ್ವೀಸು ಕಳೆದ ಜನಾರ್ಧನ ಈ ವಿಚಾರ ಧಾರೆಗೆ ಡಂಗು ಬಡಿದುಹೋದ. ಒಮ್ಮೊಮ್ಮೆ ಅಪುರೂಪಕ್ಕೆ ವೃತ್ತಾಂತ ಪತ್ರಿಕೆಗಳನ್ನು ಓದಿ ಚಳುವಳಿಯ ವಿಚಾರ ಸ್ವಲ್ಪ ತಿಳಿದುಕೊಂಡಿದ್ದ. ಅದರ ವಿಚಾರ ತಿಳಿಯುವುದೂ ಆಳುವ ಸರ್ಕಾರದ ದೃಷ್ಟಿಯಲ್ಲಿ ಅಪರಾಧ. ಹೀಗಿರುವಲ್ಲಿ ತನ್ನ ಪಾಡಿಗೆ ತಾನಿರುವುದು ತನ್ನ ಕರ್ತವ್ಯ ಎಂಬ ಪಂಥದ ಜನಾರ್ಧನ, ವೆಂಕಟೇಶನ ಆವೇಶದ ಮಾತಿಗೆ ಮೂಕನಂತೆ ಗರಬಡಿದವನಂತೆ ಕುಳಿತ. ಬೆವರು ಒರೆಸುತ್ತಾ "ಇನ್ನು ಹೊರಡೋಣವೇ" ಎಂದ.

"ಯಾತಕ್ಕೆ ನನ್ನ ಮಾತು ಬೇಸರವೆ ?"

"ಬೇಜಾರಿಗಲ್ಲ–ಹೊತ್ತಾಯಿತೂಂತ ಹಾಗಂದೆ–"

"ಸರಿ–ಅದು ಹೋಗಲಿ ಸುಬ್ಬರಾಯ ಇಲ್ಲಿಗೆ ಬರುವ ಸಂಭಾವ ಉಂಟೆ? "

"ಸಧ್ಯಕ್ಕೇನೂ ಬರುವ ಹಾಗೆ ಕಾಣೆ–ಇತೀ ಮೀರಿಬಂದರೆ ಅವನ ಹೆಂಡತಿನ್ನ ಬಾಣಂತಿತನಕ್ಕೆ ಕರೆದುಕೊಂಡು ಬಂದಾಗ ಬರಬೇಕು"

"ಅನೀಮಿಯ ಅಂದಿರಿ ? ''

''ಹೌದು''

"ಈ ಸ್ಥಿತೀಲಿ ಬರ್ತ್ತಾನೆಯೆ ? ''

''ಒಬ್ಬಂಟಿಗ, ಅಲ್ಲಿ ಜನ ಬಲ ಸಾಲದು ಬಂದೇ ಬರ್ತ್ತಾನೇಂತ ನನ್ನ ನಂಬಿಕೆ. ತೀರ ನೆಲಹಿಡಿಯುವಂಥ ಖಾಯಿಲೆಯಲ್ಲ''

"ರೈಟ್ಹೊ ಹಾಗಾದರೆ ಮತ್ತೆ ಭೇಟಿ ?"

"ಸಂಜೆ ಕಡೆ ಬರ್ತ್ತೀರಾ"

''ಹೂಂ–ಬರ್ತ್ತಿನಿ ಹಾಗೇ ವಾಕಿಂಗ್ ಹೋಗೋಣ–ಬೇರೆ ಮಾತಾಡೋಣಂತೆ, ಈ ಚಳುವಳಿ ವಿಚಾರ ನಿಮ್ಮನ್ನ ಕಾಡೋಲ್ಲ"

"ನನಗೇನು ಹೆದರಿಕೇನೆ? ''

''ಹೆದರಿಕೆ ಮಾತಿಗಲ್ಲ, ನಿಮಗೆ ಬೇಸರಾಂತಾ"

''ಹ್ಹಿ ಹ್ಹಿ ಹ್ಹಿ....ಅಂಥಾದ್ದೇನೂ ಇಲ್ಲ...."

"ಇಲ್ಲಿ ಎಷ್ಟುದಿನ ಠಾಣೆ ? ''

"ಇನ್ನೊಂದು ಎಂಟು ದಿನ ಇರ್ತೀನಿ–ಆಮೇಲೆ ಹೊನ್ನಾಳಿಗೆ ಹೋಗಿ ಬರ್ತೀನಿ...."

"ಆಮೇಲೆ ?"

"ಆ ಮೇಲೆ ಯಥಾಪ್ರಕಾರ ಗಾಣದೆತ್ತಿನ ದುಡಿತ. ಗುಮಾಸ್ತಗಿರಿಗೆ ಹಾಜರಾಗಬೇಕಷ್ಟೆ....ಈ ಸಲ ನಾನು ಮತ್ತೆ ಮೊಳಕಾಲ್ಮೂರಿಗೆ ಹೋಗದೆ ಇಲ್ಲಿಗೇ ವರ್ಗಮಾಡಿಸಿಕೊಳ್ಳೋಣಾಂತ"

"ಹಾಗೇ ಮಾಡಿ, ಆ ಸುಬ್ಬರಾಯನಿಗೂ ಇಲ್ಲಿಗೇ ವರ್ಗಮಾಡಿಸಿಕೋಂತ ಹೇಳಿ ಎಲ್ಲಾ ಒಟ್ಟಿಗೆ ಇಲ್ಲೇ ಇರಬಹುದು...."

"ನೀವು ಚಳುವಳಿಯವರು, ನಿಮ್ಮಿಂದ ದೂರವಿದ್ದರೇ ಮೇಲು"

"....ಹ ಹ ಹ....ಅಂಥಾದ್ದೇನು ಹೆದರಬೇಡಿ. ನಿಮ್ಮನ್ನೇನೂ ಚಳುವಳಿಗೆ ಸೇರ್ಸೊಲ್ಲ...."

—ಎಂದು ವೆಂಕಟೇಶ ನಿಧಾನವಾಗಿ ಮನೆ ಸೇರಿದ. ಇವರಿಗೆಲ್ಲಾ ದೇಶದ ಮೇಲೆ ಅಭಿಮಾನ–ನಮ್ಮ ಚಳುವಳಿಯಲ್ಲಿ ಆಸಕ್ತಿ ಎಂದು ಬಂದೀತು ಎನ್ನುವ ಚಿಂತೆ ಮೂಡಿತ್ತು ಅವನ ಮನಸ್ಸಿನಲ್ಲಿ.

ಜನಾರ್ಧನನು ಸರಸರನೆ ಕಾಲುಹಾಕಿ ಮನೆ ಸೇರಿದ. ಸಧ್ಯ ಇವನಿಂದ ಪಾರಾದರೆ ಸಾಕು ಎನ್ನುವ ಆತುರವಿತ್ತು ಅವನ ನಡಿಗೆಯಲ್ಲಿ.

ಸಂಜೆ ಗಂಡ ಹೆಂಡ್ತಿ ಇಬ್ಬರೂ ಶ್ರೀಧರಮೂರ್ತಿಯ ಮನೆಗೆ ಹೋದರು. ಪ್ರೀತಿಯಿಂದ ಅಕರಾಸ್ತಿಯಿಂದ ಆದರದಿಂದ ಹಿರಿ ಹಿರಿ ಹಿಗ್ಗಿ ಸ್ವಾಗತಿಸಿದಳು. ತ್ರಿಪುರಸುಂದರಿ–ಶ್ರೀಧರಮೂರ್ತಿ ಜನಾರ್ಧನನನ್ನು ರೂಮಿಗೆ ಕರೆದೊಯ್ದ.

"ಎಷ್ಟು ದಿನವಾಗಿತ್ತು ನಿನ್ನ ನೋಡಿ ಸುಶೀಲ ?"

"..............." ಮಾತೇ ಹೊರಡಲಿಲ್ಲ ಸುಶೀಲೆಯ ಬಾಯಿಂದ. ಆ ಪ್ರೀತಿಯ ಮಾತಿಗೆ ಕಣ್ಣಲ್ಲಿ ಆನಂದಾಶ್ರು ಮೂಡಿತ್ತು.

"ಏಕೆ ಸುಶೀಲ ತುಂಬಾ ಬಡವಾಗಿದ್ದೀಯ....?"

"ಹೌದೆ!....ನನಗೇನೂ ಹಾಗೆ ಕಾಣೋಲ್ಲವಲ್ಲ ?"

"ನಿನಗೆ ಹೇಗೆ ಗೊತ್ತಾಗಬೇಕು ಹೇಳು–ಶಾನೆ ದಿನ ಬಿಟ್ಟು ನೋಡು ನೋಡುತ್ತಿರುವ ನನಗೆ ತಾನೆ ಆದ ವ್ಯತ್ಯಾಸ ಕಾಣಬೇಕು"

"ಇರು-ಒಂದು ನಿಮಿಷ ಬಂದೆ"

—ಎಂದು ಎದ್ದು ಒಳಕ್ಕೆ ಹೋದಳು ತ್ರಿಪುರಸುಂದರಿ. ಅವಳಿನ್ನ ಟೀಯನ್ನೋ, ಕಾಫಿಯನ್ನೋ ಮಾಡಲೇ ಎದ್ದು ಹೋದದ್ದೆಂದು ಸುಶೀಲೆಗೆ ಗೊತ್ತು. ತ್ರಿಪುರಸುಂದರಿಯ ಹಿಂದೆಯೇ: ಸುಶೀಲೆಯೂ ಎದ್ದು ಅಡಿಗೆ ಮನೆಯ ಕಡೆಯೇ ಹೊರಟಳು.

"ನೀವಿನ್ನು ಕಾಫಿ ಗೀಫೀಂತ ಹಚ್ಚಿಕೋಬೇಡಿ"

"....ಅಂಥಾದ್ದೇನು ಮೇಜುವಾನಿ ಮಾಡೋಲ್ಲವಮ್ಮ...." ಎಂದೆನ್ನುತ್ತಾ ಬಾಳೆ ಎಲೆಯಲ್ಲಿ ಸೊಗಸಾದ ಗೊಜ್ಜು ಅವಲಕ್ಕಿ ಹಾಕಿ ಸುಶೀಲೆಯ ಮುಂದೆ ಹಿಡಿದಳು.

ಇನ್ನೆರಡು ತಟ್ಟೆಯಲ್ಲಿಯೂ ಹಾಕಿ ಮಗಳ ಕೈಯಲ್ಲಿ ಶ್ರೀಧರಮೂರ್ತಿ–ಜನಾರ್ಧನಯ್ಯ ಇವರಿಗೆ ಕಳಿಸಿಕೊಟ್ಟಳು.

—ಗೊಜ್ಜು ಅವಲಕ್ಕಿ ತುಂಬಾ ರುಚಿಯಾಗಿತ್ತು. ಆದರದಿಂದ ಬಡಿಸಿದ ತ್ರಿಪುರಸುಂದರಿಯ ಪ್ರೀತಿಯ ಜೇನೂ ಅದರ ರುಚಿ ಮುಮ್ಮಡಿಸಿತ್ತು. ಕಾಫಿ ಬೇಡವೆಂದು ಹೇಳಿದರೂ ಕೇಳಲಿಲ್ಲ. ಉಪಹಾರವಾದ ಮೇಲೆ ಎಲೆ ಅಡಿಕೆ ತಂದಿರಿಸಿ ಸುಶೀಲೆಯ ಮುಡಿಗೆ ಮಲ್ಲಿಗೆ ಕುಚ್ಚು ಮುಡಿಸಿದಳು ತ್ರಿಪುರ ಸುಂದರಿ. ಮೊದಲಿಂದಲೂ ಅಷ್ಟೆ ಅವಳು. ಸುಂದರಿಯಾದ ಸುಶೀಲೆಗೆ ಅಲಂಕರಿಸಿ ನೋಡಿ ತೃಪ್ತಿಪಡುತ್ತಿದ್ದಳು ಹಿಂದೆ. ಈಗ ಸುಶೀಲೆ ದೊಡ್ಡವಳಾದ ಮೇಲೂ ಹಾಗೇ ಮಾಡಬೇಕೆಂಬ ಅವಳ ಸ್ವಭಾವಕ್ಕೆ ಸುಶೀಲೆಗೆ ನಗು ಬಂತು.

"ಯಾಕೆ ಸುಶೀಲ ನಗ್ತೀಯ ?"

"ಯಾಕೂ ಇಲ್ಲ. ನಾನು ನಿಮ್ಮನೆಗೆ ಆಡೋಕೆ ಬರ್ತಿದ್ದಾಗ ಜಡೆ ಹಾಕುತ್ತಿದ್ದಾಗ ಹೇಗೆ ಇದ್ದಿರೋ ಈಗಲೂ ಹೂವು ಮುಡಿಸಿದಾಗಲೂ ಹಾಗೇ ಇದ್ದೀರಲ್ಲಾಂತ ನಗು ಬಂತು"

"ಸ್ವಭಾವ ಸುಡುವತನಕ ಹೋಗೋಲ್ಲಾನ್ನೋದು ಗೊತ್ತಿಲ್ಲವೇ ? ನಮ್ಮ ರಾಜೀವೀನೂ ಹಾಗೇ ನೋಡು. ಇಲ್ಲಿ ಇದ್ದಾಗಲೆಲ್ಲಾ ಮಂಜುಳಂಗೆ, ರುಕ್ಮಿಣಿಗೆ ಎಷ್ಟು ಅಲಂಕಾರ ಮಾಡಿದರೂ ಸಾಲದು ಅವಳಿಗೆ—"

ರಾಜೀವಿ ಎಂದಕೂಡಲೆ ಮೊಳಕಾಲ್ಮೂರಿನ ಪ್ರಸಂಗ ನೆನಪಿಗೆ ಬಂತು. ಸರಸ್ವತಿಗೆ ತಾನು ಮೊಗ್ಗಿನ ಜಡೆ ಹಾಕಿ ಊರೆಲ್ಲಾ ಮೆರಸಿದ್ದು ನೆನಪಿಗೆ ಬಾರ ದಿರುತ್ತದೆಯೆ? ರಾಜೀವಿಯೇಕೆ ಹಾಗಂದಳು? ತಂಗೀ ಎಂದು ಆದರಿಸಿ ಔಷಧೋಪಚಾರ ಮಾಡಿದ್ದು ಈ ರೀತಿಯ ತನ್ನ ಕಂಡರಾಗದ ಮನೋಭಾವ ತಾಳಿದಳೇಕೆ ಆಕೆ? ಎಂದೆಲ್ಲಾ ಯೋಚನೆಯಲ್ಲಿರುವಾಗಲೇ ತ್ರಿಪುರಸುಂದರಿ ಮಾತನಾಡಿದಳು....

"ಈಗ ರಾಜೀವಿಗೆ ಹೇಗಿದೆ ಸುಶೀಲ? ಈಚೆಗೆ ಅವಳಿಂದಲೂ ಕಾಗದವಿಲ್ಲ. ಸುಬ್ಬುವಿಗೆ ಕೆಲಸಕಾರ್ಯ ಪುರುಸೊತ್ತೇ ಆಗೋಲ್ಲಾಂತ ಕಾಣತ್ತೆ. ಅವರುಗಳ ಸಮಾಚಾರವೇ ಈಚೆಗೆ ತಿಳಿದಿಲ್ಲ"

"....ರಾಜಮ್ಮನ ಆರೋಗ್ಯ ಇನ್ನೂ ಪೂರ್ಣ ಸುಧಾರಿಸಿಲ್ಲ....ಅಲ್ಲಿನ ಡಾಕ್ಟರು ಲೇಡಿ ಡಾಕ್ಟರಿಗೇ ತೋರಿಸಿದರೆ ಒಳ್ಳೇದೂಂತ ಹೇಳಿದರು"

"....ಅವಳು ಇಲ್ಲಿಗೆ ಬಂದಾಗ ಇಲ್ಲೇ ಇದ್ದು ಸುಧಾರಿಸಿಕೊಂಡು ಹೋಗೂಂತ ಎಷ್ಟು ಹೇಳಿದೇಂತ....ಕೇಳಬೇಕಲ್ಲ ಮಹರಾಯ್ತಿ....ಅವಳಿಲ್ಲ ದಿದ್ದರೆ ಗಂಡನ್ನ ನೋಡುವವರೇ ಇಲ್ಲವೇನೋ ಅನ್ನೋಹಾಗೆ ಮಾತಾಡಿ ಹೋದಳು....ನೀವೆಲ್ಲಾ ಇರಲಿಲ್ಲವೇ ಅಲ್ಲಿ? ಸುಬ್ಬರಾಯ ಒಪ್ಪತ್ತು ಅಡಿಗೆ ಮಾಡಿಕೊಳ್ಳಲಾರನೆ? ಅದೇನೋ ಸುಶೀಲ, ನೋಡು ರಾಜೀವಿಯ ಮನಸ್ಸೇ ಅರ್ಥವಾಗೋಲ್ಲ"

—ಸುಬ್ಬರಾಯ ತನ್ನ ಮನೆಯಲ್ಲೇ ಊಟ ಮಾಡುತ್ತಿದ್ದ. ಅವನಿ ಗೇನು ತೊಂದರೆಯಿತ್ತು? ಎಷ್ಟು ಆದರದಿಂದ ಬಡಿಸಿದ್ದಳು ಅವನಿಗೆ? ಹೊರ ಬಾಗಿಲಕಡೆ ದೃಷ್ಟಿಸಿ ನೋಡಿದಳು, ಅದೇ ಬೀದಿ–ಢಣ್ ಎಂದು ಲಕ್ಷ್ಮಿ ನಾರಾಯಣ ಗುಡಿಯ ಗಂಟೆಯನ್ನು ಯಾರೋ ಭಕ್ತರು ಬಾರಿಸಿದರು. ತರಂಗ ತರಂಗವಾಗಿ ಗಾಳಿಯಲ್ಲಿ ತೇಲಿಬಂದ ಆ ನಾದ ಅವಳ ಹೃದಯವನ್ನು ಬಡಿದು ಅಲ್ಲಿಯೂ ತರಂಗಗಳೆದ್ದು ವರ್ಷಾನುವರ್ಷಗಳ ಹಿಂದೆ ಅದೇ ಘಂಟಾ ನಾದದ ಮೊರೆತದಲ್ಲಿ ಲಕ್ಷ್ಮಿನಾರಾಯಣ ಸ್ವಾಮಿಯ ಮಹಾ ಮಂಗಳಾರತಿಯ ಸಮಯದಲ್ಲಿ ಹರೆಯದ ಚಲುವ ಸುಬ್ಬರಾಯ ಪ್ರಸಾದ ಹಂಚುತ್ತಿದ್ದ. ತನ್ನ ಕೈಗೂ ಪ್ರಸಾದ ಹಾಕಿದ್ದ. ಆ ಕೈಯ್ಯ ಸೋಂಕಿನ ವಿದ್ಯುತ್ ಸ್ಪರ್ಶ ಮೈಯನ್ನು ಪುಳುಕಿತ ಮಾಡಿತ್ತು. ಪ್ರೀತಿಯಿಂದ ಮನೆಗೆ ಆಹ್ವಾನಿಸಿದ್ದಳು, ಬಂದು

ನಿಂತಿದ್ದ ನಡುಮನೆಯಲ್ಲಿ. ಈ ಎಲ್ಲ ಸಂಗತಿಗಳೂ ಮನದಲ್ಲಿ ಸುಳಿದು ಹೋದವು. ಮರುಕ್ಷಣವೇ ಮೊಳಕಾಲ್ಮೂರಿನಲ್ಲಿ ಅವಳು ಸುಬ್ಬರಾಯನ ಸಂಸಾರ ಕಷ್ಟದಲ್ಲಿದ್ದಾಗ ಮಾಡಿದ ಉಪಚಾರ, ಸೇವೆ, ಸರಸ್ವತಿ ಶಾಮಣ್ಣ ಇವಳನ್ನೇ ತಾಯಿಯಂತೆ ಪ್ರೀತಿಸುತ್ತಿದ್ದುದು, ಎಲ್ಲ ಪ್ರೀತಿ, ವಿಶ್ವಾಸ, ಪ್ರೇಮಕ್ಕೆ ದೊರೆತ ಪ್ರತಿಫಲ ರಾಜೀವಿಯ ಕಟುನುಡಿ "ನಮ್ಮ ಮನೆಗೆ ಬರುವ ಅಗತ್ಯವಿಲ್ಲ" ಎಂಬ ನಿಷ್ಠೂರದ ಮಾತು ಇರಿದಿರಿದು ಕೊಂದಿತ್ತು ಸುಶೀಲೆ ಯನ್ನು. ಹಾಲಿನಂತಹ ಇವಳ ಮನಸ್ಸಿಗೆ ಹುಳಿ ಹಿಂಡಿದ್ದಳು ರಾಜೀವಿ. ಇದೆಲ್ಲ ವನ್ನೂ ತ್ರಿಪುರಸುಂದರಿಗೆ ಹೇಳುವುದೆ? ಮನಸ್ಸು ಈ ಅಂಧೋಳನದ ಗಾಣಕ್ಕೆ ಸಿಕ್ಕು ನುರಿಯುತ್ತಿದ್ದಾಗಲೇ ತ್ರಿಪುರಸುಂದರಿ ಮತ್ತೆ ಮಾತನಾಡಿದಳು.

"ಆ ಕೊಂಪೆ ಬಿಟ್ಟು ಈ ಕಡೆಗೆಲ್ಲಾದರೂ ವರ್ಗ ಮಾಡಿಸಿಕೋ ಅಂತ ಹೇಳಿ ಹೇಳಿ ಸಾಕಾಯ್ತು"

"ನಮ್ಮವರೂ ಹಾಗೇ ಮಾಡಬೇಕೆಂದುಕೊಂಡಿದ್ದಾರೆ ಈ ಊರಿಗೇ ಬರಬೇಕೆಂದಿದ್ದೇವೆ...."

"ನೀವು ಇಲ್ಲೆ ಇದ್ದು ನಮ್ಮ ಸುಬ್ರಾಯನೂ ಬಂದರೆ ಮತ್ತೆ ಹಿಂದಿ ನಂತೇ ಇರಬಹುದು"

"ಹೌದು...." ಎಂದು ಸುಶೀಲೆ ಹೊರಡಲನುವಾದಳು. ಹೊರ ಬಾಗಿ ಲಿಗೆ ಬಂದಾಗ ಶ್ರೀಧರಮೂರ್ತಿ, ಜನಾರ್ಧನಯ್ಯ ಹರಟೆಯಲ್ಲಿ ತಲ್ಲೀನರಾ ಗಿದ್ದರು. "ನಾನು ಹೋಗ್ತೇನೆ" ಎಂದು ಸುಶೀಲ ಮನೆಗೆ ಹೊರಟುಹೋದಳು.

ಜನಾರ್ಧನಯ್ಯ ತನ್ನ ಆಫೀಸಿನ ಸುದ್ದಿ ಹೇಳುತ್ತಿದ್ದ, ಶ್ರೀಧರಮೂರ್ತಿ ತನ್ನ ಪೋಸ್ಟಾಫೀಸಿನ ಸುದ್ದಿ ಹೇಳುತ್ತಿದ್ದ. ಒಬ್ಬರಿಗೊಬ್ಬರು ಅವರವರ ಕಷ್ಟ ಕಾರ್ಪಣ್ಯ ತಮ್ಮ ಸಾಹೇಬರ ಗುಣಾವಗುಣಗಳ ವರ್ಣನೆಯಲ್ಲಿ ತೊಡಗಿದ್ದರು.

ಕಡೆಗೆ, ಮತ್ತೆ ಮರುದಿನ ಭೆಟ್ಟಿಯಾಗುವುದಾಗಿ ಹೇಳಿ ಜನಾರ್ಧನ ಹೊರಬಿದ್ದಾಗ ರಾತ್ರಿ ಒಂಭತ್ತು ಘಂಟೆಯ ಸಮಯವಾಗಿತ್ತು. ಗಂಡನಿಗೆ ಕಾಯದೆ ಸುಶೀಲೆ ಊಟ ಮಾಡದೇ ಮಲಗಿದಳೆಂದು ಅತ್ತೆಯವರಿಂದ ತಿಳಿದು ಕೊಂಡ ಜನಾರ್ಧನ.

*

## ೨೫

ಸುಬ್ಬರಾಯನ ಕಾಗದಾ ನೋಡಿ ಲಕ್ಷ್ಮಣ ಕಿಡಿ ಕಿಡಿಯಾಗಿದ್ದ. ಪರಿಸ್ಥಿತಿ ಈ ಘಟ್ಟಕ್ಕೆ ಬರುವುದೆಂದು ಅವನು ತಿಳಿದಿರಲಿಲ್ಲ. ಊರಲ್ಲಿ ಅವನ ಪ್ರತಿಷ್ಠೆ ನಡೆಯುತ್ತಿರಲಿಲ್ಲ. ಅತ್ತೆಯೊಡನೆ ಇವನ ಅಕ್ರಮ ಸಂಬಂಧದಿಂದಾಗಿ ಇವನಿಗೆ ಮರ್ಯಾದೆಯೇ ಇಲ್ಲವಾಗಿತ್ತು. ಪಂಚಾಯಿತಿಯಲ್ಲಿ ಅನೂಚಾನವಾಗಿದ್ದ ಅವನ ಸ್ಥಾನ ಬೇರೊಬ್ಬರಿಂದ ತುಂಬಲ್ಪಟ್ಟದ್ದಿತು. ಅನ್ನುವಹಾಗಿಲ್ಲ ಅನುಭವಿಸುವಂತಿಲ್ಲ. ಅತ್ತೆ ಎಂಬ ಕುತ್ತ ಕತ್ತು ಸುತ್ತಾ ನಾಗರಹಾವಿನಂತೆ ಸುತ್ತಿಕೊಂಡುಬಿಟ್ಟಿತ್ತು.

ಪಂಕಜ ಶುದ್ಧ ಎಳೆ ನಿಂಬೆ, ಹೆಸರಿಗೆ ಹೆಂಡತಿಯಂತಿದ್ದರೂ ಆ ಪ್ರಾಣಿ ಗಂಡನೊಡನೆ ಮಲಗುವುದಿರಲಿ ಮಾತಾಡುವುದಕ್ಕೂ ಲಕ್ಷ್ಮಣನ ಅತ್ತೆಯ ಅಪ್ಪಣೆ ಬೇಕಾಗಿತ್ತು. ಹೊಲ ಮನೆಗಳ ವ್ಯವಹಾರದಲ್ಲೆಲ್ಲಾ ಪಾಪಾಸು ಕಳ್ಳಿ ಹಬ್ಬಿದಂತೆ ಅತ್ತೆಯ ಆಡಳಿತ ಹಬ್ಬಿತ್ತು.

ಕೀಲುಗೊಂಬೆಯಾಗಿದ್ದ ಲಕ್ಷ್ಮಣ. ಆನಂದರಾಯರ ಮನೆತನ ಈ ಪರಿಸ್ಥಿತಿಗೆ ಬಂತೇ ಎಂದು ಮರುಗುವವನು ತಿಪ್ಪಯ್ಯನೊಬ್ಬನೆ. ತಿಪ್ಪಯ್ಯ ಸುಬ್ಬರಾಯನ ಪಾಲಾದರೂ ಸುವ್ಯವಸ್ಥಿತವಾಗಿರಲಿ, ಅವನ ಕಷ್ಟಕ್ಕಾದರೂ ಚೂರುಪಾರು ಭೂಮಿಕಾಣಿಯಿಂದ ವರಮಾನ ಬರಲಿ ಎಂದು ಯತ್ನಿಸಿದ್ದು ಅವನ ಮೇಲೇ ಅಪವಾದ ಬರುವಂತಾಯಿತು.

ಒಂದು ದಿನ ಸುಬ್ಬರಾಯನ ಕಾಗದ ಹಿಡಿದುಕೊಂಡು ತಿಪ್ಪಯ್ಯನೇ ಲಕ್ಷ್ಮಣನ ಮನೆಗೆ ಬಂದ. ಬಂದಾಗ ಲಕ್ಷ್ಮಣ ಏನೋ ಬರೆಯುತ್ತಾ ಕುಳಿತಿದ್ದ, ಪಾಪಾಸು ಸದ್ದು ಕೇಳಿ ತಲೆ ಎತ್ತಿ ತಿಪ್ಪಯ್ಯನನ್ನು ನೋಡಿ, ಮುಖ ಮುದುಡಿ ನಂಜಿನ ನೋಟದಲ್ಲಿ ಕಣ್ಣು ಹೊರಳಿಸಿ ಮತ್ತೆ ತನ್ನ ಬರವಣಿಗೆಯಲ್ಲಿ ತೊಡಗಿದ. ಹೊರಕಟ್ಟೆಯ ಮೇಲೆ ಕಂಬಕ್ಕೆ ಒರಗಿ ಕುಳಿತು ಕೆಮ್ಮಿದರೂ ತಿಪ್ಪಯ್ಯನತ್ತ ದೃಷ್ಟಿ ಮತ್ತೆ ಹಾಯಿಸಲಿಲ್ಲ ಲಕ್ಷ್ಮಣ. ಮತ್ತೇನು ಮಾಡುವುದು ? ತಿಪ್ಪಯ್ಯನೇ ಮಾತನಾಡಬೇಕಾಯಿತು—

"ಲಕ್ಷ್ಮಣರಾಯರು ತುಂಬಾ ಕೆಲಸದಲ್ಲಿದ್ದಾಂಗಿದೇ"

"........ಹೂಂ ಇರುತ್ತಲ್ಲ....ಶಾನುಬೋಕಿ ಲೆಖ್ಖ...."

"ಪುರುಸೊತ್ತಾಗಿದ್ದರೆ ಸ್ವಲ್ಪ ಮಾತಾಡಬೇಕಾಗಿತ್ತು"

"ಅದೇ ಪಟ್ಟಾಭಿರಾಮ ದೇವರ ಉತ್ಸವದ ಪಟ್ಟಿ ತಾನೇ? ಆ ಮೇಲೆ ಬನ್ನಿ ನೋಡೋಣ"

ಮೈಯಲ್ಲಿ ಉರಿವ ಕೊಳ್ಳಿ ಆಡಿಸಿದಂತಾಯಿತು ತಿಪ್ಪಯ್ಯನಿಗೆ. ಸಿಂಹದ ಹೊಟ್ಟೆಯಲ್ಲಿ ನಾಯಿಯ ಹಾಗೆ ಹುಟ್ಟಿದನಲ್ಲ ಈ ಲಕ್ಷ್ಮಣ. ಪಟ್ಟಾಭಿರಾಮ ದೇವರ ಉತ್ಸವ ನ್ಯಾಯವಾಗಿ ಇವನೇ ನಿಂತು ನಡೆಸಬೇಕಿತ್ತು. ಅವರಪ್ಪ ಆನಂದರಾಯರಲ್ಲಿನ ಕೋಟಿಯಲ್ಲಿ ಒಂದು ಪಾಲು ಹೋಲಿಕೆ ಬೇಡವೇ! ಅವರು ಸಾವಿರ ಜನಕ್ಕೆ ಸಮಾರಾಧನೆಯನ್ನೇ ನಡೆಸಿದ ಖ್ಯಾತಿವಂತರು. ಇವನು ಚಂದಾಪಟ್ಟಿಗೆ ಆ ಮೇಲೆ ಬಾ ಅನ್ನುವುದೆ? ಅವರು ಧಾರಾಳವಾಗಿ ಖರ್ಚು ಮಾಡಿದರೂ ದೇವರು ಹಾಗೇ ಅವರನ್ನು ಊರ್ಜಿತಗೊಳಿಸಿದ. ಇದೆಂತಹ ಬಿಕನಾಸಿ ಜೀವ, ಇದ್ದಿದ್ದನ್ನ ಉಳಿಸಿಕೊಂಡರೇ ಸಾಕು ಅನ್ನುವ ಜಾಣತನವೂ ಇಲ್ಲದ ಈ ಲಕ್ಷ್ಮಣ, ಅವರ ಹೊಟ್ಟೆಯಲ್ಲಿ ಹುಟ್ಟಬಾರದಾಗಿತ್ತು ಎಂದು ಮರುಗಿದ ತಿಪ್ಪಯ್ಯ.

"ಚೆನ್ನಾಗಿದೆ ಲಕ್ಷ್ಮಣ, ನಾನೀಗ ಬಂದದ್ದು ಪಟ್ಟಾಭಿರಾಮ ದೇವರ ಉತ್ಸವದ ಚಂದಾ ಹಣಕ್ಕಲ್ಲ....ಒಂದು ಪಕ್ಷ ಅದಕ್ಕೇ ಬಂದಿದ್ದರೂ ನೀನು ಹೀಗೆ ಅನ್ನಬಹುದೆ? ಅಂ ನಿನ್ನ ತಂದೆ ಇಡೀ ಜೀವಮಾನಾನೇ ಪಟ್ಟಾಭಿರಾಮ ದೇವರ ಗುಡಿ ಪ್ರಾಕಾರ ಕಟ್ಟಿಸೋಕೆ ಮೀಸಲಿಟ್ಟರು. ನೀನು ನಿಂತು ಕೆಲಸಮಾಡಿ ತಂದೆ ಹೆಸರು ಉಳಿಸಬೇಕು–ಅಂಥಾದ್ದು ಚಂದಾಪಟ್ಟಿಗೆ ಆ ಮೇಲೆ ಬನ್ನಿ ಅಂತೀಯಲ್ಲಾ ಇದು ಸರಿಯಾದ ಮಾತಲ್ಲ...."

"ಬರೀ ಸರಿಯಾದ ಅನ್ನುವ ಮಾತು ಮಾತ್ರ ಯಾಕೆ, ಮರ್ಯಾದಸ್ತರ ಮಾತಲ್ಲಾಂತ ಮನಸ್ಸಲ್ಲಿರೋದನ್ನ ಅಂದುಬಿಡಿ"

"ನೀನೇ ಅಂದುಕೊಳ್ತಾ ಇರಬೇಕಾದರೆ ನಾನೇಕೆ ಮತ್ತೆ ಅನ್ಲಿ...."

"ತಿಪ್ಪಯ್ಯನೋರೇ ನನಗೆ ಪುರುಸೊತ್ತಿಲ್ಲಾಂತ ಆಗಲೇ ಹೇಳಿದೆ. ಈಗ ಬಂದ ವಿಚಾರ ಹೇಳಿದರೆ ಒಳ್ಳೇದು"

"....ಸರಿ....ಸುಬ್ಬರಾಯ ಕಾಗದಾ ಬರೆದಿದ್ದಾನೆ...."

"ನನಗೂ ಬರಿದಿದ್ದಾನೆ....ಆದಕ್ಕೆ ಉತ್ತರ ಬರೀತಾ ಇದ್ದೆ ಈಗ ನೀವೂ ಬಂದಿರಿ...."

"ಹಾಗಾದರೆ ಅವನು ರಜ ತೊಗೊಂಡು ಬಂದಾಗ ಪಾಲುಪಟ್ಟಿ ಇತ್ಯರ್ಥ ವಾಗಬಹುದಲ್ಲವೆ ?...."

ಈ ಮಾತಿಗೆ ಲಕ್ಷ್ಮಣ ಏನು ಹೇಳುತ್ತಿದ್ದನೋ ಎತ್ತಿದ ಮಾತು ಅಲ್ಲೆ ಮುರಿದು ಸುಮ್ಮನಾದ. ಕಾರಣ ಬೇರೇನೂ ಆಗಿರದೆ ಮುಂಬಾಗಿಲಲ್ಲಿ ನಿಂತ ಅವನ ಅತ್ತೆಯ ಆಕೃತಿಯೇ ಆಗಿತ್ತು. ತಲೆ ತಗ್ಗಿಸಿ ತನ್ನ ಕೆಲಸದಲ್ಲಿ ತೊಡ ಗಿದ ಲಕ್ಷ್ಮಣ. ತಿಪ್ಪಯ್ಯ ಮಾತ್ರ ಪೇಚಿನಲ್ಲಿ ಸಿಕ್ಕಿಬಿದ್ದ. ಅವನಿಗೆ ಗೊತ್ತು ಇನ್ನು ಮುಂದಿನ ಮಾತು ಆ ಹೆಂಗಸೇ ಆಡುವಳೆಂದು, ಹಾಗೇ ಆಯಿತು.

"ಊಟಕ್ಕೆ ಎಲೆ ಹಾಕಿದೆ ಏಳಬಾರದೇ....ಹೊತ್ತಾಯಿತು"

ಎಂದಳು ವೆಂಕಮ್ಮ. ಮಾತಿನಲ್ಲಿ ಈ ಮುದಿಹಂಕನ ಹತ್ತಿರ ಏನು ಹರಟೆ ಎದ್ದೇಳಿ ಸಾಕು ಎನ್ನುವ ಕೊಂಕಿತ್ತು. ಮನೆಯ ಯಜಮಾನಿಯಂತೇ ಅಂದಿದ್ದಳು ಈ ಮಾತನ್ನು. ತಿಪ್ಪಯ್ಯನಿಗೆ ಅಸಹ್ಯವಾಯಿತು ಅವಳನ್ನು ನೋಡಿ.

"ಏನು ಲಕ್ಷ್ಮಣ, ಏನಂತಿ ?"

"ಎನಂತೆ ತಿಪ್ಪಯ್ಯನವರಿಗೇ...." ಎಂದು ಅಳಿಯನನ್ನ ಕೇಳಿದಳು.

"ಏನೂ ಇಲ್ಲ ಸುಬ್ರಾಯ ಕಾಗ್ದಾ ಬರೆದಿದ್ದ...."

"ಸುಬ್ರಾಯನವರ ವಕಾಲತ್ತು ವಹಿಸೋ ವಕೀಲರೇನು ಇವರು. ಈ ಊರ ಜನದ ವ್ಯವಹಾರವೇ ಹಾಗೇನೋ ! ಇನ್ನೊಬ್ಬರ ಮನೆ ವಿಚಾರಕ್ಕೆ ವದ್ದಾಡೋದು"

ತಿಪ್ಪಯ್ಯನ ದೇಹಾದ್ಯಂತ ಮೆಣಸಿನಕಾಯಿ ಅರೆದು ತಿಕ್ಕಿ ಬಿಸಿಲಲ್ಲಿ ಕೂರಿಸಿದಂತಾಯಿತು.

"ಲಕ್ಷ್ಮಣಾ ಮಾತಾಡುವವನು ನೀನೋ, ನಿಮ್ಮ ಅತ್ತೆಯೋ ಇತ್ಯರ್ಥ ವಾಗಲಿ ಮೊದಲು. ನನಗೆ ಬೇರೆ ಕೆಲಸವಿಲ್ಲದೆ ಇಲ್ಲಿಗೆ ಬಂದಿಲ್ಲ. ನಾಗರಾಜ ಜೋಯಿಸರ ಮಗಳನ್ನು ಸುಬ್ಬರಾಯ ಆದದ್ದಕ್ಕೆ ನನ್ನ ಕರುಳು ಅಯ್ಯೋ ಎಂತ ಅಂದು ಅವನ ಕಷ್ಟದಲ್ಲಿ ಸಹಾಯ ಮಾಡೋಣ ಅನ್ನೊ ಕಕಲಾತಿಯೇ

ಹೊರ್ತು ನನಗೆ ಬರೋ ಭಾಗ್ಯವೇನೂ ಇಲ್ಲ ಇದರಲ್ಲಿ" ಎಂದು ಬಿರುಸಾಗೇ ಮಾತಾಡಿದ ತಿಪ್ಪಯ್ಯ.

"ಹೇಳಿ ಸರ್ಕ್ಕಾರಿ ಕೆಲಸದವರಿಗೆ ಹೊಲ, ಮನೆ ಚಿಂತೆ ಯಾಕೆ, ನಿಮಗೆ ನಿಮ್ಮ ತಮ್ಮನ ಮೇಲಿರೋ ಪ್ರೀತಿಗಿಂತ ಊರವರಿಗೇ ಅವರ ಚಿಂತೆ ಹೆಚ್ಚಾಗಿದೇಂತ ಕಾಣುತ್ತೆ"

''ನಿಮ್ಮನ್ನಲ್ಲ ವೆಂಕಮ್ಮ ನಾನು ಮಾತಾಡಸ್ತಾ ಇರೋದು ಲಕ್ಷ್ಮಣನ್ನ....ಈ ಮಾತಿಗೆಲ್ಲಾ ಹೆಂಗಸರು ಬರಬಾರದು''

"ನಾನು ಕೂಡಾ ನಿಮಗಲ್ಲ ಹೇಳಿದ್ದು ತಿಪ್ಪಯ್ಯನೋರೆ, ನನ್ನ ಅಳಿಯಂದರಿಗೆ ಹೇಳಿದ್ದು. ನನ್ನ ಮಗಳ ಮನೆ ತೊಳೆದು ಹೋಗಬಾರದೂಂತ ನಾನೂ ನನ್ನ ಜೀವ ಇಲ್ಲೇ ತೇಯ್ತಾ ಇದ್ದೀನಿ. ನನ್ನ ಮಾತು ಯಾರು ಕೇಳಬೇಕು ಈ ಮನೆಯಲ್ಲಿ? ಎಷ್ಟಾಗಲೀ ನಾನು ಹೊರಗಿನವಳು; ನನಗಾಗ ಬೇಕಾದ್ದೇನಿದೆ? ಆಸ್ತಿಯೆಲ್ಲಾ ಕೊಚ್ಚಿಕೊಂಡು ಹಾಳಾಗಿ ಹೋಗಲಿ...."

ಎಂದು ಧಾರಾಕಾರವಾಗಿ ಕಣ್ಣಲ್ಲಿ ನೀರು ಹರಿಸಿ ಬಿಕ್ಕಳಿಸಿದಳು ವೆಂಕಮ್ಮ.

''ಲಕ್ಷ್ಮಣಾ, ನಾನು ಏನು ಕಾಗದಾ ಬರೀಲಿ ಹೇಳಬಾರದೇ...."

''ಆಂ....ಹೂಂ....ನಾನೂ....," ಎಂದು ತಡವರಿಸಿ ಮಾತಾಡುತ್ತಿರುವಾಗಲೇ ಮಧ್ಯೆ ಮತ್ತೆ ಬಾಯಿ ಹಾಕಿದಳು ವೆಂಕಮ್ಮ.

''ನೀವೇನೂ ಬರೀಬೇಕಾದ್ದಿಲ್ಲ. ಇಲ್ಲಿ ಎಲ್ಲಾ ಆರೋಗ್ಯಾಂತ ಬರೆದು ಹಾಕಿ. ಏನು ಮಾಡಬೇಕಿದ್ದರೂ, ಮಾತಾಡಬೇಕಿದ್ದರೂ ಸುಬ್ಬರಾಯರೇ ಇಲ್ಲಿಗೆ ಬರಲಿ ಊರಮುಂದಿಗೆಲ್ಲಾ ನಮ್ಮ ಸಂಸಾರದ ಗುಟ್ಟು ರಟ್ಟಾಗುವುದೇನೂ ಬೇಡ"

ಎಂದು ರಪ್ಪನೆ ರಾಚಿದಂತೆ ಹೇಳಿ ಭಿರಿಭಿರಿ ಹೊರಟೇ ಹೋದಳು ಒಳಗೆ. ತಿಪ್ಪಯ್ಯನೂ ಅಂಗವಸ್ತ್ರ ಕೊಡವಿಕೊಂಡು ಎದ್ದ. ಲಕ್ಷ್ಮಣ ಒಂದು ಮಾತೂ ಆಡಲಿಲ್ಲ. ತಿಪ್ಪಯ್ಯನೇ ಹೇಳಿದ ಹೊರಡುವ ಮುನ್ನ.

"....ಇನ್ನು ಕೋರ್ಟು ಗೀರ್ಟೂಂತ ಹಗರಣ ಮಾಡಿಕೊಳ್ಳಬೇಡ. ಹೆಂಗಸರ ಕೈಲಿ ಎಲ್ಲಾ ಆಡಳಿತ ಕೊಟ್ಟರೆ ನಿನ್ನ ಮನೆ ಖಂಡಿತ ಹಾಳಾಗಿ ಹೋಗುತ್ತೆ. ಹೀಗಂದೇಂತ ಏನೂ ತಿಳ್ಕೋಬೇಡ. ಇಷ್ಟರ ಮೇಲೆ ಹಾಗೇ

ಆಗಬೇಕೂಂತ ಇದ್ದರೆ ನಾವೇನೂ ತಪ್ಪಿಸೋಕೆ ಆಗೋಲ್ಲ-ಸುಬ್ಬರಾಯನ ಹಿತಬಯಸುವವನು ನಾನೂಂತ ಆಗಲೇ ಹೇಳಿದ್ದೀನಿ. ಆ ಮೇಲೆ ನನ್ನ ಅನ್ನಬೇಡಿ....''

ಎಂದು ಸಿಟ್ಟಿನ ಮುಖದಲ್ಲಿ ಧಡಬಡನೆ ಕಾಲುಹಾಕಿ ಹೊರಟುಹೋದ ತಿಪ್ಪಯ್ಯ. ಇದು ಕಡೆಯ ಬಾರಿಯ ರಾಯಭಾರವೆಂದು ಹೊರಡುವ ಮುನ್ನ ಅಂದುಕೊಂಡಿದ್ದ. ಅದು ಹಾಗೇ ಆಗಿತ್ತು.

ಸುಬ್ಬರಾಯನಿಗೆ ಏನು ಬರೆಯಲಿ? ಶಿವಮೊಗ್ಗಿಗೆ ಹೋಗಿ ವಕೀಲರಿಗೇ ಹೇಳಿ ಬಂದು ಬಿಡಲೆ? ಹಿರೇಹಳ್ಳಿಗೆ ಹೋದರೇ ಒಳ್ಳೆಯದಲ್ಲವೆ? ನಾಗ ರಾಜಜೋಯಿಸರಿಗೆ ತಿಳಿಸಿದರೆ ಉತ್ತಮ. ಉಹೂಂ ಸುಬ್ಬರಾಯ ಬಂದು ಬಿಡಲಿ-ಈ ಎಲ್ಲ ಹತ್ತಾರು ಯೋಚನೆಗಳು ಅವನನ್ನು ಮುತ್ತಿ ಕಾಡಿದವು.

ಇತ್ತ ವೆಂಕಮ್ಮ ಹುಣುಸೇಬರಲು ಹಿಡಿದು ಅಳಿಯನನ್ನು ತರಾಟೆಗೆ ತೆಗೆದುಕೊಳ್ಳುವುದೊಂದು ಬಾಕಿ. ಅಲ್ಲಿನತನಕ ಕೈ ತೊಳೆದು ಬೆನ್ನು ಹತ್ತಿದ್ದಳು ಆಕೆ.

"ಈ ಮನೆಯ ವ್ಯವಹಾರ ನಾನು ಕಟ್ಟಿಕೊಂಡು ಏಗಬೇಕಾಗಿದೆ. ಕೊಟ್ಟಿದ್ದೊಂದು ಹೆಣ್ಣುಮಗಳಾದರೂ ಅವಳೂ ಇಲ್ಲವಾದಳು. ಆದರೂ ಈ ಸಂಸಾರ ನನ್ನ ಕತ್ತಿಗೆ ಕುತ್ತವಾಗಿ ಗಂಟು ಬಿದ್ದಿದೆ...."

ಎಂದೆಲ್ಲಾ ಹೇಳಿಕೊಂಡು ಕಣ್ಣೀರು ಹರಿಸಿ ಹಾರಾಡಿದಳು.

"ನನ್ನೇನು ಮಾಡೂಂತೀರ...."

"ಏನೂ ಮಾಡಬೇಡಿ, ಹೊಲಗಳೆಲ್ಲಾ ಪಂಕಜಳ ಹೆಸರಿಗೆ ಮಾಡಿ ಸುಬ್ಬರಾಯರಿಗೇಂತ ಮೂಲೆ ಹೊಲ ಒಂದು ಬಿಡಿ. ಪಂಚಾಯ್ತಿ ಮಾಡಿ ಮಾತಾಡಿದರೆ ಸುಬ್ಬರಾಯ ಒಪ್ತಾರೆ"

"....ಹಾಗೆ ಮಾಡೋಕೆ ಅದು ಹೇಗೆ ಸಾಧ್ಯ? ಅಪ್ಪನ ಕಾಲದ ಆಸ್ತಿ ಅವನ ಪಾಲಿನ ಬಾಬತ್ತು ಕೊಡದಿದ್ದರೆ ಹೇಗೆ?"

"ಹಿರೇಕೆರೂರೊಳಗೆ ಹಿಂಗೇ ಆಯ್ತು ಒಂದುಸಲ, ಸ್ವಯಾರ್ಜಿತಾಂತ ಮಾಡಿಕೊಂಡು ಎಲ್ಲಾ ಹೆಂಡ್ತಿ ಹೆಸರಿಗೆ ಮಾಡಿದರವರು. ಹಾಗೇ ಮಾಡ ಲಿಕ್ಕೆ ಬರೋಲ್ಲವೆ?...."

"ಅವರು ಹ್ಯಾಗೇ ಮಾಡಿದರೋ ನನಗೇನು ಗೊತ್ತು ?"

"ನೀವು ಬರ್‍ರಿ ನಾನೂ ಬರ್‍ತೀನಿ, ಜೊತೆಗೆ ಹೋಗಿ ಅವರನ್ನ ಕಂಡು ಹೇಗೆ ವ್ಯವಸ್ಥೆ ಮಾಡಿದರೂನ್ನೋದನ್ನ ವಿಚಾರ್‍ಸಿ ಬರೋಣ?...."

"..............."

"ಯಾಕೆ ಮಾತಾಡಲಿಕ್ಕೇ ಬೇಸರವೇನೋ–"

ಎಂದು ಅರ್ಥಗರ್ಭಿತವಾಗಿ ನೋಡಿದಳು ವೆಂಕಮ್ಮ. ಕಣ್ಣು ಕರೆಯುತ್ತಿತ್ತು; ಮೈ ಮುರಿಯುತ್ತಿತ್ತು.

"....ಅದಕ್ಕಲ್ಲ, ಒಳ್ಳೆ ಧರ್ಮಸಂಕಟಕ್ಕೆ ಸಿಕ್ಕು ಹಾಕಿದಿರಿ ನನ್ನ"

"....ಸಧ್ಯ ನನಗೇನು ಬೇಕಾಗಿದೆ? ನೀವು ನಿಮ್ಮ ಪಂಕಜ ಚೆನ್ನಾಗಿರಲಿ, ನಿಮ್ಮ ಸಂಸಾರ ವೈನಾಗಲೀಂತ ನಾನು ನನ್ನ ಇಡೀ ಜೀವ ನಿಮ್ಮ ಮನೆಗೆ ತೇದದ್ದು ಸುಳ್ಳೆ ? ನನ್ನ ಪಾಡಿಗೆ ನಾನು ಹಿರೇಕೆರೂರಲ್ಲಿ ಹಾಯಾಗಿದ್ದಿದ್ದರೆ ಚೆನ್ನಾಗಿತ್ತು. ಈ ಪಂಕಜಿ ಸಂಸಾರ ಕಟ್ಟಿಕೊಂಡು ನಾನು ಏಗ ಬೇಕಾಗಿದೆ...."

ಎಂದಾಗ ಲಕ್ಷ್ಮಣ 'ಅಯ್ಯೋ ಮಹರಾಯಿತಿ ಹಾಗೇ ಆಗಲಿ' ಎಂಬ ಸೋತ ಮಾತು ಹೇಳುವ ಭಂಗಿಯಲ್ಲಿ ತಲೆ ಕೆರೆದುಕೊಂಡು ವೆಂಕಮ್ಮನನ್ನು ನೋಡಿದ. ಹೊದ್ದ ಸೆರಗು ಜಾರಿತ್ತು; ಹಾಕಿದ ಗುಂಡಿಯ ಸಂದಿನಿಂದ ಬೆಳ್ಳಗೆ ಕಂಡ ತುಂಬು ಎದೆಯನ್ನೇ ದಿಟ್ಟಿಸಿದ–

"ಹೂಂ ಎನ್ನ ಬಾರದೇ...." ಎಂದಾಗ ಲಕ್ಷ್ಮಣ "ಆಗಲಿ ಅದಕ್ಕೇನು" ಎಂದೇ ಹೇಳಿ ಅವಳನ್ನು ಹಿಂಬಾಲಿಸಿ ನಡೆದ ಮಲಗುವ ಮನೆಗೆ.

## ೨೬

ಸುಬ್ಬರಾಯ ಕಚೇರಿಯಲ್ಲಿ ಸಾಹೇಬರ ಮುಂದೆ ಕೈಹೊಸೆದು ನಿಂತಿದ್ದ. ಆಗಿದ್ದ ವರ್ಗಕ್ಕೆ ಬೇಡವೆಂದು ಬರೆಯುವೆನೆಂದು ಅಮಲ್ದಾರರು ಹೇಳಿದ್ದರು. ಯಾವಾಗಲೂ ಹಾಗೇ, ಚೆನ್ನಾಗಿ ಕೆಲಸ ಮಾಡುವವರೆಂದು ದೊಡ್ಡವರ ಮನಸ್ಸಿಗೆ ಬಂದರೆ ಅವರು ಆ ಊರಿನಲ್ಲಿರುವವರೆಗೂ ಆ ಗುಮಾಸ್ತೆಯೂ ಅಲ್ಲೇ ಇದ್ದರೆ ಮೇಲೆಂದು ಬಲವಂತ ಮಾಡುವುದು ಸಂಪ್ರದಾಯ. ಸುಬ್ಬರಾಯನಿಗೂ ಇದು ಉಪಚಾರದ ಬಲವಂತ ಎಂದು ಗೊತ್ತು.

ಅವನಿಗೆ ತರೀಕೆರೆಗೆ ವರ್ಗವಾಗಿತ್ತು. ಮನೆಯಲ್ಲಿ ರಾಜೀವಿ ದಿನ ಕಳೆದಂತೆ ಕೈಯ್ಯಲ್ಲಿ ಏನೂ ಸಾಗದೆ ಎರಡು ದಿನ ಎದ್ದು ಓಡಾಡಿದರೆ ನಾಲ್ಕು ದಿನ ಹಾಸಿಗೆಯಲ್ಲಿರುತ್ತಿದ್ದಳು. ಈ ವರ್ಗದಿಂದಾಗಿ ರಜೆ ಪಡೆಯುವ ಅವಕಾಶ ಸಿಕ್ಕಿತ್ತು, ರಾಜೀವಿಗೆ ಶಿವಮೊಗ್ಗೆಯಲ್ಲಿ ಲೇಡಿ ಡಾಕ್ಟರ ಹತ್ತಿರ ಔಷಧ ಕೂಡಿಸುವುದಾಗಿ ಯೋಚಿಸಿದ್ದ. ಡಾ|| ರಾಯನ್‌ರವರ ಎಚ್ಚರಿಕೆ ಅವನನ್ನು ಅಧೀರನನ್ನಾಗಿ ಮಾಡಿತ್ತು.

ತರೀಕೆರೆ ಶಿವಮೊಗ್ಗೆಗೇನೂ ಅಷ್ಟು ದೂರವಿರಲಿಲ್ಲ. ಶ್ರೀಧರಮೂರ್ತಿ ತನಗೆ ಬಲಭುಜವಿದ್ದಂತೆ ಇರುತ್ತಾನೆ. ಮುಖ್ಯವಾದ ವಿಚಾರ ತನ್ನ ಆಸ್ತಿ ವಿಭಾಗ. ಲಕ್ಷ್ಮಣನಂತೂ ಬರುಬರುತ್ತಾ ಬರಿಯ ಮಾತಿನಲ್ಲಿ ಮಂಡಿಗೆ ತಿನ್ನಿಸುತ್ತಿದ್ದನಲ್ಲದೆ ಪಾಲಿನ ವಿಚಾರ ಸುಮ್ಮನೇ ಮುಂದುವರಿಸುತ್ತಿದ್ದ. ತರೀಕೆರೆಗೆ ಹೋಗಿ ಕೆಲಸಕ್ಕೆ ಸೇರುವ ಮುನ್ನ ರಜ ಪಡೆದು ಮೊದಲು ರಾಜೀವಿಯನ್ನು ಲೇಡಿ ಡಾಕ್ಟರಿಂದ ಪರೀಕ್ಷಿಸಿ ಔಷಧೋಪಚಾರದ ವ್ಯವಸ್ಥೆ ಮಾಡುವುದು, ಅಮ್ಮೇನಹಳ್ಳಿಗೆ ಹೋಗಿ ತಿಪ್ಪಯ್ಯನ ಮಧ್ಯಸ್ತಿಕೆಯಲ್ಲಿ ಪಾಲಿನ ವ್ಯವಸ್ಥೆ ಪೂರೈಸುವುದು.

—ಈ ಎಲ್ಲ ವಿಷಯಗಳಿರುವಾಗ ಅಮಲ್ದಾರರು ವರ್ಗ ವಜಮಾಡಿಸುತ್ತೇನೆಂದರೆ ಆಗಲಿ ಎನ್ನಲಿಕ್ಕಾಗುತ್ತದೆಯೆ? ಅವನಿಗೂ ಮೊಳಕಾಲ್ಮೂರು ಸಾಕಾಗಿತ್ತು. ಹೊಸದರಲ್ಲಿ ಹಸಿರು ಗಿಡದಂತೆ ಇದ್ದ ಸಂಸಾರ ರೋಗದ ಮಡದಿಯ ದೆಸೆಯಿಂದಾಗಿ ಮನೆಯಲ್ಲಿ ನಗುವೇ ಇಲ್ಲವಾಗಿತ್ತು. ಸುಶೀಲೆ ಮತ್ತು ತನ್ನ

ಬಗ್ಗೆ ಹೆಂಡತಿಯೇ ಶಂಕಿಸಿ ಅಪವಾದ ಹೊರಿಸಿದ್ದು ಮರೆಯುವುದೆಂತು? ಸುಶೀಲೆ ಊರಿಗೆ ಬಂದಾಗ ತನ್ನನ್ನು ಉತ್ಸಾಹದಿಂದ ಸ್ವಾಗತಿಸಿ ಊಟ ಹಾಕಿದವಳು ದಿನ ಕಳೆದಂತೆ ತನ್ನನ್ನು ಪರಕೀಯನಂತೆ ಕಾಣುತ್ತಿದ್ದಳಲ್ಲಾ.

ಈ ಎಲ್ಲ ವಿಚಾರ ಅವನನ್ನು ಬೇಸರಗೊಳಿಸಿತ್ತು. ಮೊದಲು ತರೀಕೆರೆಗೆ ಹೊರಡುವುದು ಎಲ್ಲ ಕಾರಣಗಳಿಂದ ತನಗೆ ಒಳ್ಳೆಯದೆಂದು ಅವನಿಗನ್ನಿಸಿತ್ತು.

ವರ್ಗದ ಹುಕುಂ ತೆಗೆದುಕೊಂಡು ರಜಾಕ್ಕೆ ಅರ್ಜಿ ಕೊಟ್ಟೇ ಮನೆಗೆ ಬಂದ. ಸಾಮಾನು ಕಟ್ಟಬೇಕು. ಪಾರಿವ್ರಾಜಕ ಸನ್ಯಾಸಿಗಳ ಸಂಸಾರದಂತಹ ಈ ಸರ್ಕಾರಿ ಗುಮಾಸ್ತೆ ಗಿರಿಯಲ್ಲಿ ಊರಿಂದ ಊರಿಗೆ ಸಾಮಾನು ಕಟ್ಟಿ ಸಾಗಿಸುವುದೇ ಬೇಸರದ ಕೆಲಸ. ಗೋಣೀಚೀಲ ಹೊಂದಿಸಿ, ಜಾಕಾಯಿ ಪೆಟ್ಟಿಗೆ ಹೊಂದಿಸಿ ತಾನೇ ಸಾಮಾನು ಕಟ್ಟಬೇಕಾಯಿತು.

ರಾಜೀವಿ ಅಸಹಾಯಕಳಾಗಿ ನರಳುತ್ತಾ ಮಲಗಿದ್ದಳು. ಸರಸ್ವತಿ, ಶಾಮಣ್ಣ ಹುಡುಗಾಟವಾಡಿಕೊಂಡು ತಂದೆ ಸಾಮಾನು ಕಟ್ಟುವುದರಲ್ಲಿ ಸಹಾಯ ಮಾಡತೊಡಗಿದರು. ಅವರು ಮಾಡುತ್ತಿದ್ದದ್ದು ಆಗುವ ಕೆಲಸಕ್ಕೆ ಅಡಚಣೆಯಾಗುತ್ತಿತ್ತಲ್ಲದೆ ಉಪಯೋಗವೇನೂ ಆಗುತ್ತಿರಲಿಲ್ಲ.

"ರಾಜೀವಿ ಸಾಮಾನೇನೋ ಕಟ್ಟಿದೆವೂಂತ ಇಟ್ಕೋ, ಸಾಗಿಸೋದು ಹೇಗೆ...."

"ಇಲ್ಲೇ ಎಲ್ಲಾವರೂ ಹತ್ತಿರದ ಊರಿಗೆ ವರ್ಗ ಮಾಡಬಾರದಾಗಿತ್ತೆ?"

"....ನೀನು ಹೇಳುವುದಂತೂ–ಸಧ್ಯ ನಮ್ಮ ಊರಿಗೆ ಹತ್ತಿರದ ತರೀ ಕೆರೆಗೆ ಆಗಿದೆಯಲ್ಲಾಂತ ನನಗೆ ಹಿಗ್ಗು...."

"ಬೇಕಾದ ಊರಿಗೆ ವರ್ಗವಾದ ಮೇಲೆ ಸಾಮಾನು ಸಾಗಿಸೋಕೆ ಕಷ್ಟಾಂತ ಅಂದರೆ ಹೇಗೆ?"

"ಎಲ್ಲಾ ಸಾಗಿಸೇನು, ನನ್ನ ಯೋಚನೆ ಏನಂದ್ರೆ–ನಿನ್ನ ಹೇಗೆ ಜಖಂ ಆಗದ ಆಗದ ಹಾಗೆ ಸಾಗಿಸೋದೂಂತ"

"....ಅದೇ ನಾನೂ ಅಂದುಕೊಂಡಿದ್ದು. ದೇವರೇ ಬೇಗ ನನ್ನ ನಾಲ್ಕು ಮಂದಿ ಸಾಗಿಸುವ ಸ್ಥಿತಿಗೆ ತಾ....ಎಂದು"

"....ಅದೆಂಥಾ ಮಾತಾಡ್ತಿ ರಾಜೀವಿ....?"

ಸುಬ್ಬರಾಯನ ಕರುಳು ಕತ್ತರಿಗೆ ಸಿಕ್ಕಂತಾಯ್ತು. ತಾನೇಕೆ ಹಾಗೆ ಅನ್ನಬೇಕಿತ್ತು. ರಾಜೀವಿ ಹೀಗೆ ಮಾತಾಡುವಳೆಂದು ಸುಬ್ಬರಾಯ ನಿರೀಕ್ಷಿಸಲಿಲ್ಲ. ಅವಳ ಮಾತಲ್ಲಿ ನೋವಿತ್ತು. ಬೇಗ ನಾನು ಹೋದರೆ ಸಾಕು ಎನ್ನುವ ಸ್ಪೃಹೆಯೂ ಇತ್ತು. ಈ ಮಕ್ಕಳು ಗಂಡನ್ನ ಬಿಟ್ಟು ಹೇಗೆ ಹೋಗುವುದು? ಎಂಬ ಸಂಕಟವೂ ಇತ್ತು. ಆದರೆ ಅವಳ ಆ ಮಾತು ಸುಬ್ಬರಾಯ ಹೀಗೆ ಮಾತಾಡಿದ್ದಕ್ಕೆ ಬಂದಿತ್ತಲ್ಲದೆ ಉದ್ದೇಶ್ಯ ಪೂರ್ವಕ ಹೇಳಿದ್ದಲ್ಲ.

ಮುಂದೇನೂ ಮಾತಾಡದೆ ಎದ್ದು ಹೊರಗಡೆ ಹೋದ. ಅವನ ಹೃದಯ ಚೂರಾಗಿತ್ತು. ರಾಜೀವಿಯ ಮಾತು ಅವನನ್ನು ಅಧೀರನನ್ನಾಗಿ ಮಾಡಿತ್ತು. ಶೂನ್ಯ ದೃಷ್ಟಿಯಿಂದ ಸೂರು ನೋಡುತ್ತಾ ಪಕ್ಕದಲ್ಲಿ ಕುಳಿತ. ಶಾಮಣ್ಣನ ತಲೆ ನೇವರಿಸುತ್ತಾ ಮಲಗಿದ್ದಳು ರಾಜೀವಿ. ಕಣ್ಣಂಚಿನಲ್ಲಿ ನೀರು ಮೂಡಿತ್ತು.

ಹೊರಗೆ ನಿಂತ ಸುಬ್ಬರಾಯನ ಕೈಗೆ ಅಂಚೆಯಾಳು ಬಂದು ಪತ್ರವನ್ನು ಕೊಟ್ಟ. ಶಿವಮೊಗ್ಗೆಯ ಮುದ್ರೆ ಇತ್ತು–ಜನಾರ್ಧನನ ಅಕ್ಷರವಾಗಿತ್ತು. ಹಾಗೇ ಕತ್ತು ಹೊರಳಿಸಿ ಪಕ್ಕದ ಮನೆಯ ಕಡೆ ನೋಡಿದ. ಜನಾರ್ಧನಯ್ಯನ ಮನೆ ಬಾಗಿಲು ಬೀಗ ಹಾಕಿಸಿಕೊಂಡು ನಿಂತಿತ್ತು. ಆದರೆ ಸುಬ್ಬರಾಯನಿಗೆ ಕಂಡಿದ್ದು ಅವನ ಒಳ ಮನಸ್ಸಿನ ಚಲಚ್ಚಿತ್ರ. ಸುಂದರಿ ಸುಶೀಲ ಹೊರಬಾಗಿಲಲ್ಲಿ ನಿಂತಿದ್ದಳು. ಚಲುವಾದ ಗುಲಾಬಿಯಂತೆ ನಸುನಗುತ್ತ ಆಹ್ವಾನಿಸುವ ನೋಟದಿಂದ, ತುಟಿಯಾಡಿಸಿ ಮಾತಾಡಿದಂತೆ ಕಂಡಿತು. ಹಾಗೇ ಮಾತಾಡಿದ್ದು ಕೇಳಿಯೂ ಕೇಳಿಸಿತು ಸುಬ್ಬರಾಯನಿಗೆ. ಆದರೆ ಆ ಮಾತು ನರಳುವಿಕೆಯಂತಿತ್ತು, ಹೌದು ನರಳುತ್ತಿದ್ದ ರಾಜೀವಿಯ ಸದ್ದೇ ಅವನಿಗೆ ಕೇಳಿಸಿದ್ದು. ಆಗಲೇ ಅವನು ಸ್ವಪ್ನದಲ್ಲಿಂದ ವಾಸ್ತವಿಕತೆಗೆ ಬಂದದ್ದು.

ಈ ಒಂದು ಕಾಗದ ಇಷ್ಟೆಲ್ಲ ಮನೋವಿಕಾರಕ್ಕೆ ಎಡೆಕೊಟ್ಟದ್ದು ಅವನಿಗೇ ನಾಚಿಕೆಯಾಯಿತು. ಕಾಗದ ಒಡೆದು ನೋಡಿದ. ಓದುತ್ತಿದ್ದಂತೆ ಒಮ್ಮೆ ಮುಖ ಅರಳಿತು, ಮರುಕ್ಷಣವೇ ಮುದುಡಿತು, ಮತ್ತೆ ಕಿರುನಗೆ ಮೂಡಿತು.

ರಾಜೀವಿ ಮಲಗಿದ್ದ ಹಾಸಿಗೆ ಬಳಿ ಕುಳಿತ. ಅವಳು ಶೂನ್ಯದೃಷ್ಟಿಯನ್ನು ಬೀರಿದಳು. ಯಾರದದು ಪತ್ರ ಎಂದು ಕೇಳುವಂತಿತ್ತು ಅವಳ ದೃಷ್ಟಿ.

"ಜನಾರ್ಧನಯ್ಯ ಕಾಗದಾ ಬರೆದಿದ್ದಾರೆ. ಆಗಲೇ ಅವರು ಊರಿಗೆ ಹೋಗಿ ಹದಿನೈದು ದಿನವಾಯಿತೆ ?...."

ಜನಾರ್ಧನಯ್ಯನ ಹೆಸರೆತ್ತಿದೊಡನೇ ಅವಳಿಗೆ ಸುಶೀಲೆಯ ರೂಪು ಎದುರು ನಿಂತಂತಾಯಿತು. ಅದೇನು ಅಂತಹ ಮಹತ್ತರದ ಕಾಗದವಲ್ಲ ಎಂದು ಅವಳ ಮನಸ್ಸು ಹೇಳಿತು. ಆದರೂ ನರಳುವ ಧ್ವನಿಯಲ್ಲಿ ಕೇಳಿದಳು.

"ಹೂಂ....ಏನು ಬರೆದಿದ್ದಾರೆ ?

"ವರ್ಗಕ್ಕೆ ಪ್ರಯತ್ನ ನಡೆಸಿದ್ದಾರಂತೆ, ರಜ ಮುಂದುವರಿಸಿದ್ದಾರೆ"

"ಅವರಿಗೂ ಈ ಊರು ಬೇಸರವಾಯಿತೆ ?"

"ಸರ್ಕಾರಿ ಗುಮಾಸ್ತರಿಗೆ ಮೊಳಕಾಲ್ಮೂರೇನು, ತರೀಕೆರೆ ಏನು...."

"ಹಾಗಾದರೆ ಅವರೂ ತರೀಕೆರೆಗೆ ವರ್ಗ ಮಾಡಿಸಿಕೊಳ್ಳಲು ಪ್ರಯತ್ನಿಸಿದ್ದಾರೇನು ?...."

ಗಾಬರಿಯ ನಡುಗುವ ಧ್ವನಿಯಲ್ಲಿ ಕೇಳಿದಳು. ಈ ಊರಿಗೇ ಪೀಡೆ ಪರಿಹಾರವಾಯಿತೆಂದರೆ ಹೋದಲ್ಲಿಗೂ ಬರುತ್ತದೆಯೆ ? ಇನ್ನೂ ನನ್ನ ಕರ್ಮ ಸವೆದಿಲ್ಲವೆ ಎಂದುಕೊಂಡಳು.

"ಇಂಥಾ ಊರಿಗೇಂತ ಬರೆದಿಲ್ಲ, ವರ್ಗಕ್ಕೆ ಪ್ರಯತ್ನಿಸುತ್ತಾ ಇದ್ದೀನೀಂತ ಬರೆದಿದ್ದಾರೆ"

"ಮನೇಲೆಲ್ಲಾ ಆರೋಗ್ಯವಂತೇನು ?"

"ಕ್ಷೇಮ ಅಂತ ಬರೆದ ಮೇಲೆ ಕ್ಷೇಮವಾಗಿ ತಾನೇ ಇರಬೇಕು ?"

"ಅದು ಸರಿಯೆ....ತ್ರಿಪುರಸುಂದರಕ್ಕ, ಮಕ್ಕಳು ಆರೋಗ್ಯವಂತೆ ?"

"ಹೂಂ....ಅವರಿಗೆ ನನ್ನ ವರ್ಗದ ವಿಚಾರ ಗೊತ್ತಿಲ್ಲಾಂತ ಕಾಣತ್ತೆ"

"ಹ್ಯಾಗೆ ಗೊತ್ತಾಗಬೇಕು ?....ನೀವು ಬರೆದರೆ ತಾನೇ ಅವರಿಗೆ ತಿಳಿಯಬೇಕು"

"ಈಗ ದೊಡ್ಡ ಪೇಚಾಟಕ್ಕೆ ಸಿಕ್ಕ ಹಾಗಾಯ್ತು....ಏನು ಮಾಡೋದು ?"

"ಪೇಚಾಟವೇನು ಬಂತು ?"

"ಜನಾರ್ಧನಯ್ಯ ಬರೆದಿದ್ದಾರೆ, ಅವರ ಸಾಮಾನೆಲ್ಲಾ ಕಟ್ಟಿ ನಮ್ಮ ಮನೇಲಿಟ್ಟಿರ್ತಾರಂತೆ"

"ವರ್ಗಕ್ಕೆ ಪ್ರಯತ್ನಿಸುವಾಗಲೇ ಈ ಏರ್ಪಾಟಿ? ಅಂದರೆ ಖಂಡಿತ ವಾಗಿ ವರ್ಗವಾಗಿಯೇ ಆಗುತ್ತೇಂತ ಕಾಣುತ್ತೆ"

"ಎಲ್ಲೋ ತಿಳಿದವರ ಕಡೆಯಿಂದ ಪ್ರಯತ್ನಿಸಿರಬೇಕು. ನಾವೂ ಹೊರಡ ಬೇಕು. ಇನ್ನು ಆತ ಯಾವಾಗ ಬರುತ್ತಾರೋ ಹೇಗೆ ಮಾಡೋದು ?"

"....ಹೌದು, ಹೇಗೆ ಮಾಡೋದು ?" ಅವನ ಸಮಸ್ಯೆಯೇ ತನ್ನದೂ ಪ್ರಶ್ನೆ ಎಂದೆನ್ನುವ ಹಾಗೆ ಹೇಳಿದಳು. ಇವರಿಬ್ಬರ ಮಾತನ್ನು ಕೇಳುತ್ತಿದ್ದರು ಸರಸ್ವತಿ ಶಾಮಸುಂದರರು. ಸರಸ್ವತಿಯ ಮುಖದಲ್ಲಿ ನಗು ಮೂಡಿ ಬಂತು. ಅವಳೆಂದಳು.

"....ಜನ್ನು ಮಾವನ ಜೊತೆ ಸುಶೀಲಮ್ಮನೂ ಬರ್ತಾರೇನಪ್ಪಾ...."

ಈ ಪ್ರಶ್ನೆಗೆ ಉತ್ತರ ಕೊಡುವಾಗ ರಾಜೀವಿಯನ್ನು ನೋಡಿದ. ಈ ಒಂದು ಪ್ರಶ್ನೆ ಗಂಡಹೆಂಡಿರಲ್ಲಿ ನೂರು ಗಾವುದ ದೂರದ ಅಂತರ ತಂದಿಟ್ಟ ಹಾಗಿತ್ತು. ರಾಜೀವಿ ಸಿಟ್ಟಿನ ಮುಖ ಮಾಡಿಕೊಂಡು ಮುಖ ತಿರುಗಿಸಿ ಮಲಗಿಬಿಟ್ಟಳು.

"ಆ ವಿಚಾರವೇನೂ ಬರೆದಿಲ್ಲ ಸರಸು" ಎಂದು ಹೇಳಿದ. ಮೂಲ ಸಮಸ್ಯೆ ತಾವು ಇಲ್ಲಿಂದ ಹೊರಟ ಮೇಲೆ ಜನಾರ್ಧನಯ್ಯ ಬಂದರೆ ಹೇಗೆ ಎಂಬುದು ಹಾಗೇ ಉಳಿಯಿತು.

ತಕ್ಷಣವೇ ಜನಾರ್ಧನಯ್ಯನಿಗೆ ಕಾಗದ ಬರೆದು ಹಾಕಿದ ಸುಬ್ಬರಾಯ. ತನಗೆ ತರೀಕೆರೆಗೆ ವರ್ಗವಾಗಿರುವುದಾಗಿಯೂ ತನ್ನ ಸಾಮಾನು ಸರಿಂಜಾಮು ಕಟ್ಟಿಕೊಂಡಿರುವುದಾಗಿಯೂ ಹೆಚ್ಚೆಂದರೆ ಇನ್ನು ಮೂರು ನಾಲ್ಕು ದಿನ ಮಾತ್ರ ಮೊಳಕಾಲ್ಮೂರಿನಲ್ಲಿರುವುದಾಗಿಯೂ ಅಷ್ಟರಲ್ಲಿ ಬಂದರೆ ಉತ್ತಮ, ಇಲ್ಲವಾದರೆ ತಾವು ಹೊರಡಲೇಬೇಕಾಗುತ್ತದೆ ಎಂದೂ ಕಾಗದದಲ್ಲಿ ನಮೂದಿಸಿದ್ದ.

ಮುಂದೆರಡು ದಿನ ಕಚೇರಿಯ ಇತರ ಗುಮಾಸ್ತೆ–ಸ್ನೇಹಿತರ ಮನೆಯಲ್ಲಿ ಔತಣದಲ್ಲಿ ಕಳೆಯಿತು. ಶಾಮಸುಂದರನ ಮೇಸ್ಟ್ರು ನರಸಿಂಗರಾಯರು ಬಂದು ಸುಬ್ಬರಾಯನ ಮನೆಯಲ್ಲೇ ಊಟ ಮಾಡಿ ತಾಂಬೂಲ ತೆಗೆದು ಕೊಂಡು ಹೋದರು. ಸಧ್ಯ ಈ ಊರುಬಿಟ್ಟರೆ ನರಸಿಂಗರಾಯರ ಬಾಸುಂಡೆ ಯಿಂದ ವಿಮುಕ್ತನಾಗಬಹುದೆಂದು, ಅಪ್ಪನಿಗೆ ವರ್ಗವಾದುದು ಶಾಮಸುಂದರ

ನಿಗೆ ಸಂತೋಷವಾಗಿತ್ತು. ಸರಸ್ವತಿಗೆ ತನ್ನ ವಾರಿಗೆಯವರಾದ ಡಾ|| ರಾಯನ್ ಮಗಳು, ಶಿರಸ್ತೆದಾರರ ಮಗಳು, ಇಂದಿರೆ–ಊರ್ಮಿಳೆಯರನ್ನು ಬಿಟ್ಟು ಹೋಗಬೇಕಲ್ಲಾ ಎಂದು ಮರುಗಿದಳು. ರಾಜೀವಿ ಮಾತ್ರ ಮೊದಲು ಈ ಊರು ಬಿಡಬೇಕು, ತನ್ನ ಸಧ್ಯದ ದೇಹ ಸ್ಥಿತಿಗೆ ಮೊಳಕಾಲ್ಮೂರೇ ಕಾರಣ ವೆಂದು ಊರಿನ ಮೇಲೇ ತಪ್ಪು ಹೊರಿಸಿದ್ದಳು.

ಸುಬ್ಬರಾಯನ ಕಾಗದ ಜನಾರ್ಧನನಿಗೆ ತಲುಪಿ ಮತ್ತೆ ಅವನಿಂದ ಉತ್ತರ ಬರುವವರೆಗೆ ಊರು ಹೇಗೆ ಬಿಡುವುದು ? ಈ ಚಿಂತೆಯಲ್ಲಿದ್ದಾಗಲೇ ಜನಾರ್ಧನಯ್ಯನಿಂದ ಮರುಟಪಾಲು ಬಂದು, ಸುಬ್ಬರಾಯನನ್ನು ನಿಶ್ಚಿಂತ ನನ್ನಾಗಿ ಮಾಡಿತು.

"ರಾಜೀವೀ, ಜನಾರ್ಧನಯ್ಯ ನಾಳೆಯೇ ಬರುತ್ತಾರಂತೆ!"

"ಅಬ್ಬ ಅಂತೂ ಸಮಸ್ಯೆ ಬಗೆ ಹರಿದ ಹಾಗಾಯಿತಲ್ಲ, ಅವರೇ ಸಾಮಾನು ಸಾಗಿಸಿಕೊಂಡು ಎಲ್ಲಿಗೆ ಒಯ್ಯುತ್ತಾರಂತೆ ?"

"ಸಧ್ಯಕ್ಕೆ ಶಿವಮೊಗ್ಗಾಕ್ಕೇ ಒಯ್ದು ಹಾಕಿರ್ತಾರೇಂತ ಕಾಣುತ್ತೆ"

"ಯಾರ್‍ಯಾರು ಬರ್ತಾರೆ ?"

ಈ ಪ್ರಶ್ನೆಯಲ್ಲಿ ಕೊಂಕು ಇತ್ತು, ಸುಶೀಲೆ ಬರುವುದಿಲ್ಲವೇ ಎಂಬುದೂ ಕೇಳಿದಂತಿರಬೇಕೆನ್ನುವ ಕುತೂಹಲ ಮಿಶ್ರಿತ ಧ್ವನಿಯಲ್ಲಿ ಕೇಳಿದ್ದಳು.

"ನಾನು ಹ್ಯಾಗೆ ಹೇಳಲಿ ? ನಾಳೆ ಬಂದ ಮೇಲೇ ಗೊತ್ತಾಗಬೇಕು"

"ಕಾಗದದಲ್ಲಿ ಬರೆದಿಲ್ಲವೇ ?"

"....ಇಲ್ಲ...." ಎಂದು ಹೇಳಿ ಹೊರಕ್ಕೆ ಹೊರಟುಹೋದ.

ನಾಳೆ ಬಂತು, ಮುಂಜಾನೆ, ಮಧ್ಯಾಹ್ನ, ಸಂಜೆ ಮೂರೂ ಕಳೆಯಿತು ಆದರೆ ಜನಾರ್ಧನಯ್ಯ ಬರಲಿಲ್ಲ. ಏಕೆ ಬರಲಿಲ್ಲ!

ಪಾಪ ಇಲ್ಲಿದ್ದ ಸುಬ್ಬರಾಯ ರಾಜೀವಿಯರಿಗೆ ಅಲ್ಲಿ ಶಿವಮೊಗ್ಗೆಯ್ಲಲ್ಲಿನ ವಿಚಾರ ಹೇಗೆ ತಿಳಿದೀತು ? ಅಂತೂ ಮತ್ತೆ ಜನಾರ್ಧನನು ಏಕೆ ಬರಲಿಲ್ಲ ? ಎಂದು ಮೊಳಕಾಲ್ಮೂರು ಬಿಡುವ ಮುಹೂರ್ತ ಬರುವುದು ? ಎಂಬ ಪ್ರಶ್ನೆ ಹಾಗೇ ಉಳಿಯಿತು.

ಇತ್ತ ಶಿವಮೊಗ್ಗೆಯಲ್ಲಿ ಜನಾರ್ಧನ ಊರಿಗೆಂದೇ ಹೊರಟಿದ್ದ. ತನ್ನ ವರ್ಗಕ್ಕೆ ಪ್ರಯತ್ನ ನಡೆಸಿದ್ದ. ಶಿವಮೊಗ್ಗೆಗೇ ವರ್ಗವಾಗುವುದಕ್ಕೆ ಮಾಡ ಬೇಕಾಗಿದ್ದನ್ನೆಲ್ಲಾ ಮಾಡಿ ಯಶಸ್ವಿಯಾಗಿದ್ದ.

ಸುಶೀಲೆಯ ಸಮಯೋಚಿತ ಸಲಹೆಗಳಿಲ್ಲದಿದ್ದರೆ ಜನಾರ್ಧನ ಈ ವರ್ಗ ದಲ್ಲಿ ಎಷ್ಟರಮಟ್ಟಿಗೆ ಯಶಸ್ವಿಯಾಗುತ್ತಿದ್ದನೋ ತಿಳಿಯದು. ರಂಗಮ್ಮ ಬರು ಬರುತ್ತಾ ನಿಶ್ಶಕ್ತರಾಗುತ್ತಿದ್ದಳು. ಮಗಳು ಅಳಿಯನೊಡನೆ ಹಾಯಾಗಿ ಇನ್ನುಳಿದ ದಿನಗಳನ್ನು ಶಿವಮೊಗ್ಗೆಯಲ್ಲೇ ಕಳೆಯುವುದು ಅವರ ಇಷ್ಟವಾಗಿತ್ತು. ತಮ್ಮ ಕೂಗನ್ನು ಕೇಳಿಯೇ ಪಿಳ್ಳಂಗೇರಿಯ ರಂಗನಾಥ ಸ್ವಾಮಿ ಅಳಿಯನಿಗೆ ಶಿವಮೊಗ್ಗಾಕ್ಕೆ ವರ್ಗವಾಗುವಂತೆ ಮಾಡಿದ್ದೆಂದು ಆಕೆಯ ನಂಬಿಕೆ.

ಮೊಳಕಾಲ್ಮೂರಿನಿಂದ ಬಂದಲಾಗಾಯಿತು, ಒಂದು ತೆರನ ಸಮಾಧಾನ ಮೂಡಿತ್ತು ಸುಶೀಲೆಯಲ್ಲಿ. ಈಗ ಮತ್ತೆ ಸುಬ್ಬರಾಯನಿಗೆ ತರೀಕೆರೆಗೆ ವರ್ಗ ವಾದ ವಿಚಾರ ಮತ್ತು ಸಧ್ಯಕ್ಕೆ ಅವನು ಶಿವಮೊಗ್ಗಿಗೇ ಬರುವನೆಂಬುದು ಅವಳ ಚಿತ್ತವನ್ನು ಬೆದಕಿ ಹೃದಯದಲ್ಲಿ ತರಂಗವನ್ನೆಬ್ಬಿಸಿತ್ತು.

ಸುಶೀಲೆಯ ಸೂಚನೆಯಂತೆ ಜನಾರ್ಧನ, ತನ್ನ ಸಾಮಾನೆಲ್ಲಾ ಕಟ್ಟಿ ಕೊಂಡು ಬರಲು ಮೊಳಕಾಲ್ಮೂರಿಗೆ ಹೊರಟಿದ್ದ. ಸಂಜೆ ಮೇಲು ಗಾಡಿಯಲ್ಲಿ ಚಿತ್ರದುರ್ಗ ಸೇರಿ ಅಲ್ಲಿಂದ ಮರುದಿನ ಮುಂಜಾನೆ ಮೋಟಾರಿನಲ್ಲಿ ಮೊಳಕಾ ಲ್ಮೂರು ಸೇರುವುದೆಂದು ಅವನು ಯೋಚಿಸಿದ್ದ.

ಆದರೇ..............................

ರಾಜಕೀಯ ಚದುರಂಗದಾಟದ ಕಾಯಿ ನಡೆಸಿದಾಗ ಎಲ್ಲಿಯೋ ನಡೆ ಸಿದ ಕಾಯಿ ಯಾವುದೋ ಕಾಲಾಳನ್ನು ಕೊಲೆ ಮಾಡುತ್ತದೆ.

ಎಲ್ಲಿಯೋ ಆಗುವ ಪಾಕಿಸ್ಥಾನಕ್ಕೆ ಎಲ್ಲೆಲ್ಲಿಯ ಮುಸ್ಲಿಮರೂ ಕೈ ಕೊಟ್ಟರು. ಅಖಂಡ ಭಾರತದ ಭಾಗ ಒಂದನ್ನು ತುಂಡರಿಸುವ ಶಸ್ತ್ರ ಚಿಕಿತ್ಸೆ ಯಲ್ಲಿ ದೇಹದ ಎಲ್ಲ ಭಾಗಕ್ಕೂ ಅತೀವ ಯಾತನೆ ಸಹಜತಾನೆ.

ಜಿನ್ನಾ ಸಾಹೇಬರ ರಾಜಕೀಯ ಚದುರಂಗದಾಟದಲ್ಲಿ ಭಾರತಾದ್ಯಂತ ಮುಸಲ್ಮಾನರು ಕತ್ತಿ ಕಠಾರಿ ಹಿಡಿದು ಹಿಂದೂಗಳನ್ನು ಇರಿದು ಕೊಂದರು.

ಹಿಂದೂಗಳೂ ಅವರನ್ನು ಸದೆಬಡಿದರು. ಇದರಿಂದಾದದ್ದು ಇಲ್ಲಿನ ಮುಸಲ್ಮಾನರಿಗೆ ಪ್ರಾಣಮಾನ ಹಾನಿಯಲ್ಲದೆ ಪಾಕಿಸ್ಥಾನದಿಂದಾಗಿ ಇವರಿಗೇನು ಪ್ರಯೋಜನ?

ಮೊದಲಿಂದಲೂ ಶಿವಮೊಗ್ಗ ಈ ಕೋಮುವಾರು ಗಲಾಟೆಗಳಲ್ಲಿ, ಘರ್ಷಣೆಗಳಲ್ಲಿ ಭಾಗವಹಿಸಿದ ಊರು. ಗಣೇಶನ ಗಲಾಟೆ, ಮಸೀತಿಯ ಮುಂದೆ ಡೋಲು ಬಾರಿಸಿದರೆಂಬ ಕ್ಷುಲ್ಲಕ ಕಾರಣಕ್ಕೆ ಕೊರಳನ್ನೆ ಕೊಯಿದು ರಕ್ತ ಕುಡಿಯಲು ಕತ್ತಿ ಹಿರಿಯುತ್ತಿದ್ದರು, ಆ ಕೋಮಿನ ಅಂಥ ಗೂಂಡಾಗಳು. ಈ ಒಳ ಜಗಳಗಳನ್ನೇ ಪ್ರಧಾನವಾಗಿ ಕಾಣಿಸಿ ನಾವಿಲ್ಲದಿದ್ದರೆ ನಿಮಗೆ ನೀವೇ ಜಗಳಾಡಿ ಸುಂದೋಪಸುಂದರ ಹಾಗೆ ಸಾಯುವಿರಿ ಎಂದು ಬ್ರಿಟಿಷ್ ಸಾಮ್ರಾಜ್ಯ ಶಾಹಿ ಹೀಗೆ ಸುರಿದ ರಕ್ತದಲ್ಲೇ ಕತ್ತಿ ಮಸೆಯುತ್ತಿತ್ತು.

ಸುಶೀಲೆಗೆ ಹೇಳಿ ಮನೆಯಿಂದ ಹೊರಟಿದ್ದ ಜನಾರ್ಧನ ರೈಲ್ವೆ ನಿಲ್ದಾಣವನ್ನು ಸೇರಲೇ ಇಲ್ಲ. ಯಾವುದೋ ಕಾರಣಕ್ಕೆ ಎರಡು ಕೋಮುಗಳ ಇರಿದಾಟ ಅವನಿಗೆ ತಿಳಿಯದು ಪಾಪ. ತಲೆ ತಗ್ಗಿಸಿ ಸರಸರ ಸ್ಟೇಷನ್ನು ತಲುಪುವ ಅವಸರದಲ್ಲಿ ಹತ್ತಿರದ ಮಾರ್ಗ ಹುಡುಕಿ ಸಂದು ಓಣಿಗಳ ಮೂಲಕ ಹೊರಟಿದ್ದ.

ಎಲ್ಲೊ ಯಾರೋ ಕಿರುಚಿದರು, ಅಯ್ಯೋ ಎಂಬ ಆರ್ತಸ್ವರ, ಹೆಂಗಸೊಬ್ಬಳು ವಾಲಾಡುತ್ತಾ ಬಂದಳು. ತಲೆ ಒಡೆದು ರಕ್ತ ಸೋರಿತ್ತು. ಅವಳನ್ನು ಜನಾರ್ಧನ ತಡೆದು ಹಿಡಿದುಕೊಂಡ, ಅಯ್ಯೋ ಆಸ್ಪತ್ರೆಗಾದರೂ ಸೇರಿಸಬೇಕು ಇದೆಲ್ಲಿಯ ವಿಪತ್ತು! ಊರಿಗೆ ಹೊರಡಬೇಕು, ಆಗಲೆ ರೈಲು ಬರುವ ಹೊತ್ತಾಯಿತು.

"ಅಲ್ಲಾಗೇ" ಎಂದು ನರಳಿದಳು ಆ ಹೆಂಗಸು; ಸುಂದರ ಮುಸ್ಲಿಂ ತರುಣಿ ಆಕೆ. ಈಗೇನು ಮಾಡುವುದು?

"ಏನಮ್ಮ ಆಯ್ತು...."

"ಉಸ್ ಮಾತು ಬೇಡ. ಜಲ್ದಿ ನೀವು ಈ ಮನೇಲಿ ಬಚ್ಚಿಟ್ಟುಕೊಳ್ಳಿ.... ಹರಾಂಕೋರ್ ಗೂಂಡಾಗಳು ಕೊಂದುಬಿಡ್ತಾರೆ"

ಎಂದು ಅವಳು ಅನ್ನುವುದರಲ್ಲೇ ಕೆಂಗಣ್ಣು ಬೀರುತ್ತಾ ಕೈಯಲ್ಲಿ ರಕ್ತಮಯವಾದ ಚೂರಿಯನ್ನು ಹಿಡಿದ ತಲೆಗೆದರಿ ರಾಕ್ಷಸನಂತಿದ್ದ ವ್ಯಕ್ತಿ ಹಾರಿ

ಬಂತು ಇವರೆಡೆಗೆ. "ಹರಾಂಕೋರ್ – ಹಮಾರೆ ಔರತ್‌ಕು ಖೂನ್ ಕರ್‍ದಿಯ...."

"ಅರೆ....ನಾನಲ್ಲ ಇದೇನು ಅನ್ಯಾಯ ಗಲಾಟೆ! ಇವಳನ್ನು ಆಸ್ಪತ್ರೆಗೆ ಸಾಗಿಸೋಣಾಂದ್ರೇ...."

"ಪಾಕಿಸ್ತಾನ್ ಜಿಂದಾಬಾದ್"

—ಎಂದದ್ದು ಮಾತ್ರ ಅವನ ಕಿವಿಗೆ ಬಿತ್ತು. "ಹಾ....ಅಯ್ಯೋ.... ಸುಶೀಲ....ರಾಮ ರಾಮ"

ಎಂದು ನರಳಿ ನೆಲದಲ್ಲಿ ಉರುಳಿದ–ಜನಾರ್ಧನನ ಎದೆಯಲ್ಲಿ ಚೂರಿ ನೆಟ್ಟುಕೊಂಡು ರಕ್ತ ಚಿಮ್ಮಿತ್ತು. ನಿರಪರಾಧಿಯನ್ನು ಗಲ್ಲಿಗೆ ಹಾಕಿದಂತಾಯ್ತು.

ತಪ್ಪೆ–ಸರಿಯೇ–ನಿಜವೇ–ಸುಳ್ಳೆ, ಒಂದೂ ನೋಡದ ವಿಷ ಸಮಯ. ರಾಕ್ಷಸೀ ಪ್ರವೃತ್ತಿ, ರಕ್ತ ಪಿಪಾಸೆ. ಅಸುರೀವೃತ್ತೀ ; ಈ ಗೊಂದಲವನ್ನು ಸದುಪಯೋಗಪಡಿಸಿಕೊಳ್ಳಲು, ಹೆಂಗಸರನ್ನು ಒಡವೆಯನ್ನು ಅಪಹರಿಸುವ ಡಕಾಯಿತರು ಎಲ್ಲರಿಗೂ ಸಮಯ.

ಊರು ಪೋಲೀಸರಿಂದ ಉಸ್ತುವಾರಿಗೆ ಅಣಿಯಾಯಿತು. ಗೊಂದಲ ವೆಂಪರೆ ಹೇಳತೀರದು. ಕರ್ಫ್ಯೂ ಆಜ್ಞೆ ಜಾರಿಗೆ ಬಂದಿತ್ತು. ಒಂದು ನರ ಪಿಳ್ಳೆ ಹೊರಕ್ಕೆ ಬರಕೂಡದು.

ಅದೇ ದುರ್ದಿನ ಭಾರತಾದ್ಯಂತ ಲಕ್ಷೋಪ ಲಕ್ಷ ಮಂದಿ ಮನೆ ಮಠ ಹಾಳುಮಾಡಿಕೊಂಡರು, ಹೆಂಡಿರು ಮಕ್ಕಳನ್ನು ಕಳೆದುಕೊಂಡರು. ಕೋಮು ವಾರು ಭೂತ ರಕ್ತದ ಮಡುವಿನಲ್ಲಿ ಮಿಂದು, ವಿಕಟಾಟ್ಟಹಾಸ ಮಾಡಿ ತೃಪ್ತಿ ಯಿಂದ ಕೇಕೆ ಹೊಡೆಯಿತು.

ಪಾಪ, ಈ ಕೆಟ್ಟ ಮುಹೂರ್ತದಲ್ಲಿ ಊರಿಗೆ ಹೊರಡಲು ಹೊರಟ ಜನಾರ್ಧನ ದುರ್ಘಟನೆಗೆ ಸಿಕ್ಕು ಪ್ರಾಣ ನೀಗಿದ. ತುಂಬಿ ಕೊಡಲಾಗದ ನಷ್ಟಕ್ಕೊಳಗಾದಳು ಸುಶೀಲೆ. ಎದೆಯಲ್ಲಿ ಚೂರಿನಾಟಿದ ಕೂಡಲೇ ಮೃತ ನಾಗಿದ್ದ ಜನಾರ್ಧನ. ರಕ್ತದ ಮಡುವಿನಲ್ಲಿ ಮಲಗಿದ ಅವನು ಪರದೇಶಿ ಹೆಣದಂತೆ ಆಗಿದ್ದ. ಪೋಲೀಸರು ಅಂದು ಸತ್ತ ನಾಲ್ಕಾರು ಹಿಂದೂ ಮುಸ್ಲಿಂ ಹೆಣಗಳ ಜೊತೆ ಈ ಹೆಣವನ್ನೂ ಆಸ್ಪತ್ರೆಗೆ ಸಾಗಿಸಿದ್ದರು. ಗಾಯಗೊಂಡವ ರನ್ನೂ ಸಾಗಿಸಿದ್ದರು.

ಇತ್ತ ಮನೆಯಲ್ಲಿ ಸುಶೀಲೆಗೆ-ರಂಗಮ್ಮನವರಿಗೆ ಜನಾರ್ಧನನು ಹೇಗೋ ಸ್ಟೇಷನ್ನು ಸೇರಿ ಊರಿಗೆ ಹೊರಟುಹೋಗಿರುವನೆಂದೇ ನಂಬಿಕೆ. ಆದರೂ ಊರಲ್ಲಿನ ಗಲಭೆ, ಗೊಂದಲ, ಕೊಲೆ ಇರಿತ ಸುದ್ದಿ ಅವರನ್ನು ಕಳವಳಕ್ಕೀಡು ಮಾಡಿತ್ತು. ಶ್ರೀಧರಮೂರ್ತಿ ಆ ದಿನ ರಾತ್ರಿ ಮನೆಗೇ ಬರಲಿಲ್ಲ. ಮರುದಿನ ಮುಂಜಾನೆ ಬಂದಾಗ ಗಾಬರಿಯಾಗಿದ್ದ ಸುಶೀಲೆ ರಂಗಮ್ಮ ಅಲ್ಲಿಯೇ ಇದ್ದರು.

ಜನಾರ್ಧನಯ್ಯ ಸ್ಟೇಷನ್ನು ತಲುಪಿ ಸುಖವಾಗಿ ಹೋಗಿರಬಹುದೆ? ಇಲ್ಲವೆ?

ಪೋಲೀಸಿನವನ ಜೊತೆಗೆ ವೆಂಕಟೇಶ ಓಡೋಡಿ ಬಂದ. ಪೋಲೀಸಿನವನು ಇದೇ ಮನೆಯೇ ಎಂದು ಕೇಳಿದ. ತಲೆ ಆಡಿಸಿ ಗರಬಡಿದವನಂತೆ ನಿಂತ ವೆಂಕಟೇಶನಿಗೆ ಏನು ಹೇಳಬೇಕು ಹೇಗೆ ಹೇಳಬೇಕು, ಯಾರಿಗೆ ಹೇಳಬೇಕೆಂದು ತೋಚಲಿಲ್ಲ.

ನೊಂದವರಿಗೆ ಸಹಾಯವೆಸಗುವುದು ವೆಂಕಟೇಶನ ಜಾಯಮಾನ. ತನ್ನ ಮಾಸ್ತರಗಿರಿಗೆ ಬೇಸತ್ತು ಹತ್ತೂ ಮಂದಿಗೆ ಸಹಾಯವಾಗಲಿ ಎಂದು ದೀನ ದಲಿತರ ಸೇವೆ, ಹರಿಜನೋದ್ಧಾರ, ಸ್ವಾತಂತ್ರ್ಯ ಚಳುವಳಿಗೆ ಸೇರಿದ್ದ. ಊರಲ್ಲಿನ ಗಲಭೆಗೊಂದಲ ಇರಿತ ಪ್ರಸಂಗಗಳಲ್ಲಿ ನೊಂದವರಿಗೆ ಸಹಾಯ ಮಾಡುವುದು ಸಹಾನುಭೂತಿ ತೋರಿಸುವುದು ತನ್ನ ಕರ್ತವ್ಯವೆಂದು ತಿಳಿದಿದ್ದ.

ಹಾಗೆಂದೇ ಹಿಂದಿನ ದಿನದ ಇರಿತ, ಕೊಲೆ, ಗಲಭೆಯಲ್ಲಿ ನೊಂದವರನ್ನು ವಿಚಾರಿಸಲು ಆಸ್ಪತ್ರೆಗೆ ಹೋಗಿದ್ದ. ಸತ್ತವರ ನೆಂಟರಿಷ್ಟರು ಬೊಬ್ಬೆಯಿಟ್ಟು ಗೋಳಾಡುತ್ತಿದ್ದರು. ಪರಿಚಿತರ್‍ಯ್ಯಾರಾದರೂ ಈ ದುರಂತಕ್ಕೆ ಈಡಾಗಿರುವರೇನೋ ಎಂದು ಹೆಣಗಳನ್ನೆಲ್ಲಾ ನೋಡಿದಾಗ ಜನಾರ್ಧನನನ್ನು ನೋಡಿ ಕಣ್ಣು ಕತ್ತಲುಗುಡಿಸಿದಂತಾಯಿತು.

"ಇವರು ಗೊತ್ತೆ ನಿಮಗೆ" ಎಂದು ಪೋಲೀಸಿನವ ಕೇಳಿದ್ದ.

"ಹೌದು...." ಎಂದು ಕಣ್ಣೊರಸಿಕೊಂಡಿದ್ದ. ಹಾಗೆಯೇ ಧಾವಿಸಿ ಸುದ್ದಿ ಮುಟ್ಟಿಸಲು ರಂಗಮ್ಮನವರ ಮನೆಗೆ ಬಂದಿದ್ದರು. ಅಲ್ಲಿನ ಬಾಗಿಲಿಗಿದ್ದ ಬೀಗ ನೋಡಿ ಶ್ರೀಧರಮೂರ್ತಿಯ ಮನೆಗೆ ಬಂದಿದ್ದರು.

"ಏನು ವಿಚಾರ ವೆಂಕಟೇಶ?" ಎಂದವನು ಶ್ರೀಧರ.

"ಇಲ್ಲಿ ಬನ್ನಿ ಕೊಂಚ ಈಕಡೆ"

"ಯಾಕೆ, ಏನು ಸಮಾಚಾರ ?"

ಹೊರಕ್ಕೆ ಕರೆದೊಯ್ದು ಸುಮ್ಮನೆ ತಲೆ ತಗ್ಗಿಸಿ ಕಣ್ಣಲ್ಲಿ ನೀರು ತಂದು ನಿಂತ ವೆಂಕಟೇಶ. ಹೇಗೆ ಹೇಳುವುದು ಎಂದು ಅವನಿಗೆ ತಿಳಿಯಲಿಲ್ಲ. ಕಡೆಗೂ ಅವನು ಹೇಳಲೇ ಇಲ್ಲ. ಜೊತೆಗೆ ಬಂದ ಪೋಲೀಸಿನವನು ಹೇಳಿದ...

"ಸ್ವಾಮಿ, ನಿಮ್ಮ ಪೈಕಿ ಯಾರಾದರೂ ನಾಪತ್ತೆ ಆಗಿದ್ದಾರೆಯೆ ?...."

"ಯಾರೂ ಇಲ್ಲವಲ್ಲ...."

"ಶ್ರೀಧರಾ–ಅನ್ಯಾಯ–ಜನಾರ್ಧನ–ಅಯ್ಯೋ ಹೇಗೆ ಹೇಳ್ಲಿ....ಅವನ್ನ ಇರಿದು ಕೊಂದರು....ನಿನ್ನೆ ಗಲಭೆಯಲ್ಲಿ"

"ಆಂ...." ಎಂದಿಷ್ಟೆ ಅವನ ಬಾಯಿಂದ ಬಂದ ಶಬ್ದ. ಗರಬಡಿದವ ನಂತೆ ಯಾಂತ್ರಿಕವಾಗಿ ಮನೆ ಒಳಕ್ಕೆ ಹೋದ. ಅಡಿಗೆ ಮನೆಯ ಬಳಿ ತ್ರಿಪುರಸುಂದರಿಯನ್ನು ಕರೆದು ಹೇಳಿದ.

"....ಗ್ರಹಚಾರ ಚೆನ್ನಿಲ್ಲ, ಜನಾರ್ಧನಯ್ಯ ಇಲ್ಲವಾದರು"

"ಏನು....ನಿಜವೆ ? ಅಯ್ಯೋ ಸುಶೀಲಾ...."

ಎಂದಾಗ ಸುಶೀಲೆ ಧಾವಿಸಿದಳು ತ್ರಿಪುರಸುಂದರಿ ಹತ್ತಿರ ; ರಂಗಮ್ಮನೂ ಬಂದಳು.

"ಸುಶೀಲಾ ಎಂಥಾ ಹೀನ ಅದೃಷ್ಟದವಳೆ ನೀನು !"

"ಯಾಕೆ ತ್ರಿಪುರಸುಂದರಮ್ಮ ?"

ಮಾತೇ ಆಡದೆ ತ್ರಿಪುರಸುಂದರಿ ಸುಮ್ಮನೇ ಅತ್ತಳು.

ಕಡೆಗೆ "ಅಯ್ಯೋ ರಂಗಮ್ಮ........ನಿಮ್ಮ ಅಳಿಯ ಜನಾರ್ಧನಯ್ಯ ಇನ್ನಿಲ್ಲ....ನಿನ್ನೆ ಗಲಭೇಲಿ ಘಾತುಕರು ಇರಿದರಂತೆ"

ಕುಸಿದು ಕುಳಿತಳು ಸುಶೀಲೆ. ಗುಡ್ಡವೇ ಕಳಚಿದಂತಾಯ್ತು. ರಂಗಮ್ಮ ಒಂದೇಸಮ ದೊಡ್ಡ ಸ್ವರದಲ್ಲಿ ಅಳು ಪ್ರಾರಂಭಿಸಿದಳು.

ಈ ಹೊತ್ತಿಗೆ ಪೋಲೀಸಿನವನು ಹೋಗಿ ಒಂದು ಗಾಡಿ ತಂದಿದ್ದ. ವೆಂಕ ಟೇಶ ಶ್ರೀಧರಮೂರ್ತಿ ನಡೆದೇ ಆಸ್ಪತ್ರೆಗೆ ಹೋದರು. ಗಾಡಿಯಲ್ಲಿ ತ್ರಿಪುರ ಸುಂದರಿ, ಸುಶೀಲೆ, ರಂಗಮ್ಮ ಇವರು ಹೊರಟರು. ಕಾಳ್ಗಿಚ್ಚಿನಂತೆ ಇಡೀ

ಕೇರಿಗೇ ಹರಡಿತು ಸುದ್ದಿ "ರಂಗಮ್ಮನ ಅಳಿಯ ನಿನ್ನೆ ಗಲಾಟೆಯಲ್ಲಿ ಸತ್ತ ನಂತೆ." ಅನೇಕ ಮಂದಿ ಆಸ್ಪತ್ರೆಯ ಕಡೆಗೂ ಧಾವಿಸಿದರು.

ಹೊಚ್ಚಿದ್ದ ಬಿಳಿಯ ಬಟ್ಟೆ ಕೆಂಪಾಗಿ ರಕ್ತಮಯವಾಗಿತ್ತು. ಆಸ್ಪತ್ರೆಯ ಜವಾನ ಮುಸುಕು ತೆಗೆದಾಗ "ಅಯ್ಯಯ್ಯೋ ನೋಡಲಾರೆನಮ್ಮಾ...." ಎಂದು ಚೀರಿದಳು ಸುಶೀಲೆ. ಬಿಟ್ಟಬಾಯಿ, ಬಿಟ್ಟಕಣ್ಣು–ರಕ್ತಮಯ ಮೈಯಿ, ನಿಶ್ಚಿಂತನಾಗಿ ಮಲಗಿದ್ದ ಜನಾರ್ಧನ. ಅಂತಿಮ ಯಾತ್ರೆ ಇಂಥಾ ದುರಂತ ವಾಗಿ ನಡೆದೀತೆಂದು ಅವನು ಮಾತ್ರ ನಿರೀಕ್ಷಿಸಿದ್ದನೆ! ವಿಧಿ ಎಳೆದೊಯ್ದಿತ್ತು. ಅನಂತಕಾಲ ಕಣ್ಣೀರಲ್ಲಿ ಕೈ ತೊಳೆಯುವಂತೆ ಸುಶೀಲೆಯ ಗತಿ ಮಾಡಿ ಅಂತಿಮ ಯಾತ್ರೆ ನಡೆಸಿದ್ದ ಜನಾರ್ಧನಯ್ಯ. ಇನ್ನೆಲ್ಲಿಯ ಜನಾರ್ಧನಯ್ಯ! 'ನೆಂಟ ನೀರ್ದಗಲಿದೊಡೆ ಒಣ ಹೆಂಟೆಯಲಿ ಮುಚ್ಚುವರು'....ಹನ್ನೆರಡು ತಾಸುಗಳ ಕೆಳಗೆ "ಹುಷಾರು ಹೋಗಿಬರ್‍ತೀನಿ....ಸುಶೀಲ, ರಾಜಮ್ಮನಿಗೆ ಏನು ಹೇಳಲಿ" ಎಂದು ಕೇಳಿ ಹೋದವರು ಹೆಣವಾಗಿ ರಕ್ತದ ಮಡುವಿನಲ್ಲಿ ಜೀವ ಬಿಡುವರೆಂದು ಯಾರು ಊಹಿಸಲು ಸಾಧ್ಯ?–ವೆಂಕಟೇಶ ಮುಂದಿನ ಕಾರ್ಯ ನಡೆಸಿದ್ದ. ಸ್ವಯಂಸೇವಕರಿಬ್ಬರ ಕೈಲಿ ಸೈಕಲ್ಲು ಕೊಟ್ಟು ಮುದ್ದಾಂ ಹೊನ್ನಾಳಿಗೆ, ಹೇಳಿ ಕಳಿಸಿದ. ಒಬ್ಬನನ್ನು ಜನಾರ್ಧನನ ತಂದೆ ಊರಿಗೂ ಕಳಿಸಿದ.

ಆ ದೃಶ್ಯ ನೋಡಲು ಯಾರಿಗೂ ಕರುಳು ಕತ್ತರಿಸಿದಂತಾಗುವ ಮಾತೇ.

ಅಯ್ಯೋ....ನಿನ್ನ ಮಾಂಗಲ್ಯ ಕಾಪಾಡ್ಕೊಳ್ಳೋಕೆ ಆಗಲಿಲ್ಲವೇನೆ ತಾಯೀ....ಅಯ್ಯೋ ದೇವರಿಗೆ ನಮಗಿನ್ನೆಷ್ಟು ಕಷ್ಟಕೊಟ್ಟರೆ ಸಮಾಧಾನವೋ, ಸುಖವಾಗಿ ಮೊಳಕಾಲ್ಮೂರಿನಲ್ಲಿದ್ದವರು ಇಲ್ಲಿಗೆ ಬಂದು ಹೀಗೆ ಮಾಡ್ಕೊಂಡ್ರಲ್ಲಾ"

ಎಂದು ಹೊರಳಾಡಿ ರಾಗವಾದ ಎತ್ತರದ ಧ್ವನಿಯಲ್ಲಿ ಅತ್ತಳು ರಂಗಮ್ಮ, ಸುಶೀಲೆಗೆ ಅತ್ತು ಅತ್ತು ನೀರೇ ಬತ್ತಿಹೋಗಿರಬೇಕು; ಕೆದರಿದ ಕೂದಲು, ಬಾತ ಕಣ್ಣು, ನೀರು ಹರಿದು ಒದ್ದೆಯಾದ ಕೆನ್ನೆ–ತಲೆಯ ಮೇಲೆ ಕೈಹೊತ್ತು ಹೆಣದ ಹಿಂಬದಿಗೆ ಕುಳಿತಿದ್ದಳು. ಪಕ್ಕದಲ್ಲೇ ಕುಳಿತ ನಂಜಿ ಅವಳ ತಲೆಯನ್ನು ನೇವರಿಸುತ್ತಿದ್ದಳು.

ಚಿಕ್ಕಪ್ಪ ರಂಗಣ್ಣ, ತಂದೆ ಖಂಡೆರಾಯರು, ತಿಪ್ಪಯ್ಯ ಎಲ್ಲರೂ ಬಂದಿದ್ದರು. ಯಾರು ಬಂದರೇನು, ಎಷ್ಟು ಅತ್ತರೇನು ಸುಶೀಲೆಗೆ ಆದ ನಷ್ಟ ತುಂಬಿ ಕೊಡುವುದು ಸಾಧ್ಯವಿತ್ತೆ? ಎಲ್ಲರೂ ಅವಳಿಗಾಗಿ ಮರುಗಿದರು, ಎಳೆಯರ ಸಂಸಾರ ಕಾಳ್ಗಿಚ್ಚಿಗೆ ಸಿಕ್ಕ ಗುಬ್ಬಚ್ಚಿ ಗೂಡಿನಂತಾದುದಕ್ಕೆ ಇಡೀ ದೊಡ್ಡ ಬ್ರಾಹ್ಮಣರ ಕೇರಿಯೇ ಕಣ್ಣೀರಿಟ್ಟಿತು.

ತಿಪ್ಪಯ್ಯ, ವೆಂಕಟೇಶ, ಶ್ರೀಧರಮೂರ್ತಿ ಮುಂದಿನ ಏರ್ಪಾಟು ಮಾಡಿದರು. ಭಾರವಾದ ಹೃದಯದಿಂದ ಕಣ್ಣೀರಿಡುತ್ತಾ ಹೇಳಿದ್ದ ತಿಪ್ಪಯ್ಯ "ಈ ಜನಾರ್ಧನನ ಋಣ ತೀರಿಹೋಯ್ತು. ಇವನ ಹೆಣವನ್ನು ಹೊರುವುದು ನನ್ನ ಪಾಲಿಗೆ ಬಂತೆ? ಕಿರಿಯ ಜೀವಿಗಳು ಬಾಳಿ ಬದುಕಬೇಕು. ವಯಸ್ಸಾದ ನಮ್ಮನ್ನು ಯಮ ಕರೆದೊಯ್ಯಬಾರದೆ?"–ಎಂದು.

ಸರ್ವಭಕ್ಷಕ ಅಗ್ನಿದೇವ, ಸುಶೀಲೆಯ ಕೈಹಿಡಿದ ಜನಾರ್ಧನನನ್ನು ತನ್ನ ಉರಿ ನಾಲಿಗೆಯಲ್ಲಿ ಚಪ್ಪರಿಸಿ ದಹಿಸಿದ.

ಹೆಣ ಸುಟ್ಟು ಮನೆಗೆ ಬಂದಾಗ ಸಂಜೆಯಾಗಿತ್ತು.

ಶ್ರೀಧರಮೂರ್ತಿ ಮರುದಿನವೇ ಸುಬ್ಬರಾಯನಿಗೆ ಈ ದುರಂತವನ್ನು ವಿವರವಾಗಿ ಸುಬ್ಬರಾಯನಿಗೆ ಬರೆದ.

* * * *

ಸುಬ್ಬರಾಯನಿಗೆ ಅರ್ಥವೇ ಆಗಲಿಲ್ಲ. ಜನಾರ್ಧನಯ್ಯ ಏಕೆ ಬರಲಿಲ್ಲ? ಊರು ಬಿಡುವಂತಿಲ್ಲ. ಅವನಿಂದ ಸುದ್ದಿಯಿಲ್ಲ. ದಿನಪತ್ರಿಕೆಯಲ್ಲಿ ಸುದ್ದಿ ಓದಿದ್ದ, ಶಿವಮೊಗ್ಗೆಯಲ್ಲಿ ಕೋಮುವಾರು ಕಲಹ, ಇರಿತದ ಪ್ರಸಂಗ–"ನಾಲ್ವರ ಮರಣ, ಅನೇಕ ಮಂದಿಗೆ ಭಯ" ಏನೋ ಕಸಿವಿಸಿ ಸಂಕಟ, ಅವರ್ಣನೀಯ ಅಲ್ಲೋಲ ಕಲ್ಲೋಲ ಮನಸ್ಸು.

"....ಜನಾರ್ಧನಯ್ಯ ಏಕೆ ಬರಲಿಲ್ಲ?"

"ಖಂಡಿತ ಬರ್ತಿನೀಂತ ಬರೆದಿದ್ದರು ಅಲ್ಲವೆ!"

"ಹೌದು ಕಣೆ–ಏಕೆ ಬರಲಿಲ್ಲ?....ಶಿವಮೊಗ್ಗೆಯಲ್ಲಿ ಗಲಾಟೆ ಎಂದು ಪೇಪರಲ್ಲಿ ಬಂದಿದೆ. ಅದಕ್ಕೆ ಹೊರಡಲು ಅಡಚಣೆಯಾಗಿರಬಹುದೆ?....ಊಹುಂ ಇರಲಾರದು. ಒಳ್ಳೆ ಯೋಚನೆಯಾಯಿತಲ್ಲಾ, ನಾವಾದರೂ ಹೊರಡೋಣ ವೆಂದರೆ ಅವನ ಕಾಗದ ಬಂದು ಹೊರಡದಂತೆ ಆಯ್ತು. ಏನು ಜನವೊ,

ಕಾಗದ ಪತ್ರ ಹಾಕಿದ ಮೇಲೆ ತಲೆ ಬಿದ್ದು ಹೋದರೂ ಬರಬೇಕು. ಒಂದು ಶಿಸ್ತು ಒಂದು ಸಂಪ್ರದಾಯ ಇಲ್ಲದವರ ಪಾಡೇ ಹೀಗೆ"

"ಅಲ್ಲೇನು ಅನಾನುಕೂಲವೋ, ಇಲ್ಲಿ ನೀವು ಹೀಗೆ ರೇಗಿದರೆ ಹೇಗೆ?" ಎಂದಳು ರಾಜೀವಿ.

"....ರೇಗೋೀ ಮಾತಿಗಲ್ಲ ಕಣೆ, ನನ್ನ ಸಧ್ಯದ ಮನಸ್ಸಿನ ಸ್ಥಿತಿ ಹಾಗನ್ನಿಸಿತು...."

ಸರಸ್ವತಿ ಕೈಯ್ಯಲ್ಲಿ ಕಾಗದ ಹಿಡಿದು ಓಡಿ ಬಂದು "ಅಪ್ಪಾ ಕಾಗದ ಬಂದಿದೆ" ಎಂದು ಅಮ್ಮನ ಕೈಲಿ ಕಾಗದ ಕೊಟ್ಟಳು. ರಾಜೀವಿಯಿಂದ ಆ ಕಾಗದಾ ತೆಗೆದುಕೊಂಡು "ಜನಾರ್ಧನಂದೇ ಇರಬೇಕು" ಎಂದೆನ್ನುತ್ತಾ ಲಕೋಟೆಯನ್ನು ಹರಿದ, ಅದು ಶ್ರೀಧರಮೂರ್ತಿಯ ಕಾಗದವಾಗಿತ್ತು. ಕಾಗದ ಓದ ತೊಡಗಿದ.

ಕಣ್ಣು ಕತ್ತಲೆ ಗುಡಿಸಿತು, ಕತ್ತು ಉಬ್ಬಿಬಂತು. ಏನೂ ತೋಚ ದಾಯಿತು. ಅತೀವ ಮನೋಯಾತನೆಯಾಯಿತು.

"ಅಯ್ಯಯ್ಯೋ....ಇದೇನೆ ಅನ್ಯಾಯ?"

"ಏನೂಂದ್ರೆ?....ಅದು"

"ಸುಶೀಲೆಯ ಗತಿಯೇನೆ?"

"ಏನಾಯ್ತು ಹೇಳಬಾರದೇಂದ್ರೆ ಕಣ್ಣಲ್ಲಿ ನೀರು ಅವರಮ್ಮನಿಗೇ ನಾದ್ರೂ...."

ಎಗಡು ನಿಮಿಷ ಸುಬ್ಬರಾಯ ಗಳಗಳನೆ ಅತ್ತುಬಿಟ್ಟ. ಅಳುತ್ತಲೇ ರಾಜೀವಿಗೆ ಹೇಳಿದ.

"ನಾನು ಅಂದುಕೊಂಡ ಹಾಗೇ ಆಯ್ತಲ್ಲೇ. ಜನಾರ್ಧನಯ್ಯ ಇಲ್ಲ ವಾದರು. ಕೋಮುವಾರು ಭೂತಕ್ಕೆ ಜನಾರ್ಧನನ ರಕ್ತತರ್ಪಣ. ಶಿವ ಮೊಗ್ಗೆಯಲ್ಲಿ ಅವರನ್ನು ಇರಿದು ಕೊಂದರಂತಲ್ಲೇ"

"ಅಂ........" ಎಂದಿಷ್ಟೆ ಅವಳ ಬಾಯಿಂದ ಹೊರಬಿದ್ದದ್ದು. ತಲೆ ತಿರುಗಿ ದಂತಾಗಿ ಕಣ್ಣಿಗೆ ಭೋಳಿ ಬಂದಂತಾಗಿಬಿಟ್ಟಿತು.

ಸುಬ್ಬರಾಯ ಅವಳ ಹಾಸಿಗೆ ಬಳಿ ಕುಳಿತು ಶ್ರೀಧರಮೂರ್ತಿಯ ಕಾಗದ ವನ್ನು ಹರಿವ ಕಣ್ಣೀರು ಒರೆಸುತ್ತಾ ಓದಿದ.

"............ಸುಬ್ಬು, ಸುಶೀಲೆಯನ್ನು ಹೇಗೆ ಸಮಾಧಾನ ಪಡಿಸುವುದೋ ತಿಳಿಯದು. ರಂಗಮ್ಮನವರು ಮಗಳನ್ನು ತಬ್ಬಿಕೊಂಡು ಅಳುತ್ತಿರುವುದು ನೋಡಿದರೆ ಕರುಳಲ್ಲಿ ಕತ್ತರಿ ಆಡಿಸಿದಂತಾಗುತ್ತದೆ. ಏನು ಮಾಡುವುದು, ಅವಳು ಪಡೆದುಕೊಂಡು ಬಂದದ್ದು. ವರ್ಗವಾಗಿದ್ದು ನಿಜ. ಮೊಳಕಾಲ್ಮೂರಿನಲ್ಲಿನ ತನ್ನ ಸಾಮಾನು ಕೊಂಡುಬರಲು ಮರಳಿದ ಜನಾರ್ಧನ ಆಸ್ಪತ್ರೆಯಲ್ಲಿ ನೆಟ್ಟ ಚೂರಿಯೊಡನೆ ಹೆಣವಾಗಿ ಬಿದ್ದಿದ್ದನೆಂದರೆ ಎಂತಹ ದುರಂತ! ಯಾರೂ ಏನೂ ಮಾಡುವಂತಿಲ್ಲ.

ಅಲ್ಲಿನ ಸಾಮಾನಿಗೆ ಏನು ಹೇಗೆ ಎಂದು ವಿಚಾರಿಸಿದೆ. ಸುಶೀಲೆ ಮಾತೇ ಆಡಲಿಲ್ಲ. ಅವಳಿಗೆ ಏನುಮಾಡಲೂ ತೋಚದು ಪಾಪ. "ನಾನಾದರೂ ಸಾಯಬಾರದಾಗಿತ್ತೆ, ಹೊಳೆಯಲ್ಲಿ ತೇಲಿಹೋದವಳನ್ನು ಏಕೆ ಸುಬ್ರಾಯರು ಉಳಿಸಿದರು? ಈ ಎಲ್ಲ ಕರ್ಮಾಂತರ ಅನುಭವಿಸಲಿಕ್ಕೇನು, ನನ್ನ ಉಳಿಸಿದ್ದು?" ಎಂದು ಹಾಡಾಡಿಕೊಂಡು ಅಳುವುದನ್ನು ನೋಡಲಾರೆ. ಹಣೆಯಲ್ಲಿ ಬರೆದದ್ದನ್ನು ಯಾರು ಬಿಡಿಸಲಿಕ್ಕೆ ಸಾಧ್ಯ. ಅವರವರ ಕರ್ಮ, ಅವರವರು ಪಡೆದುಕೊಂಡು ಬಂದದ್ದು. ಯಾರೇನೂ ಮಾಡುವಂತಿಲ್ಲ. ಲಕ್ಷ್ಮೀನಾರಾಯಣ ಸ್ವಾಮಿಯ ಆಟದ ಮುಂದೆ ನಮ್ಮದೇನು ನಡೆಯುತ್ತದೆ?

ನೀನು ಜನಾರ್ಧನಯ್ಯನ ಮನೆ (ಹುಂ–ಇನ್ನೆಲ್ಲಿ ಅವನ ಮನೆ!) ಬೀಗ ಒಡೆದು ಅವರ ಸಾಮಾನೆಲ್ಲಾ ಇಲ್ಲಿಗೆ ಸಾಗಿಸಿಕೊಂಡು ಬಂದುಬಿಡು. ಇನ್ನೇನು ಬರೆಯಲಿ ಎಲ್ಲಾ ಆಗಿಹೋಯಿತು. ಹೊನ್ನಾಳಿಯಿಂದ ಅವರ ಚಿಕ್ಕಪ್ಪ, ಚಿಕ್ಕಮ್ಮ, ಅಪ್ಪ, ನಂಜಮ್ಮ ಎಲ್ಲಾ ಬಂದಿದ್ದಾರೆ. ತಿಪ್ಪಯ್ಯನೂ ಬಂದಿದ್ದ. ಅಮ್ಮೀನಹಳ್ಳಿಯ ವಿಚಾರ ಬಹಳವಿದೆ. ನೀನು ಬೇಗ ಬಂದರೆ ಉತ್ತಮ. ಹುಡುಗರಿಗೆಲ್ಲಾ ಆಶೀರ್ವಾದಗಳು, ಇನ್ನೇನು ಬರಿಯಲಿ

ಇತಿ ನಿನ್ನ ಭಾವ,

ಶ್ರೀಧರಮೂರ್ತಿ.

"ನಾನೆಂಥಾ ಪಾಪೀಂದ್ರೆ. ನಾನೇ ಅವರ ಸಾವಿಗೆ ಕಾರಣ...."

"..............." ಸುಬ್ಬರಾಯ ನೀರುಗಣ್ಣಲ್ಲಿ ಹೆಂಡತಿಯನ್ನು ನೋಡಿದ.

"ಸುಶೀಲೆ-ನನ್ನ ಈ ಅನಾರೋಗ್ಯದ ಸ್ಥಿತಿಯಲ್ಲಿ ನನ್ನ ಮಕ್ಕಳನ್ನ ನೋಡಿಕೊಂಡದ್ದಕ್ಕೆ-ನೀವಿನ್ನು ನಮ್ಮ ಮನೆಗೆ ಬರಬೇಕಾದ್ದಿಲ್ಲ-ಎಂದೆನ್ನ ಬಾರದಾಗಿತ್ತು. ಅದೇ ಕಡೆಯ ಮಾತಾಯ್ತು. ಬೇಸತ್ತು ನನ್ನಂಥ ಸಣ್ಣ ಮನಸ್ಸಿನವಳೊಡನೆ ಇರಲಾರದೆ ಈ ಊರು ಬಿಟ್ಟರು. ನಾನು ಹಾಗನ್ನ ದಿದ್ದರೆ ಹೀಗಾಗುತ್ತಿತ್ತೆ?" ಎಂದು ಬಿಕ್ಕುತ್ತಾ ಹೇಳಿದಳು.

"ಹಾಗೆ ನೋಡ್ತಾ ಹೋದರೆ ಆಗುತ್ತೈ. ಈ ಸಾವಿಗೆ ಜಿನ್ನಾ ಸಾಹೇ ಬನೇ ಕಾರಣಾಂತ ಅನ್ನಬಹುದಲ್ಲಾ....ಯಾರೂ ಕಾರಣವಲ್ಲ; ಎಲ್ಲರೂ ಕಾರಣ ಎಂದೆನ್ನಬಹುದು. ಎಂತಹ ಅಪರಂಜಿಯಂಥಾ ಮನುಷ್ಯ ಜನಾ ರ್ಧನಯ್ಯ...."

ಸರಸ್ವತಿ, ಶಾಮಸುಂದರರು, ಜನಾರ್ಧನಯ್ಯನ ಸಾವಿಗೆ ಅವರ ತಂದೆ ತಾಯಿಯ ಜೊತೆ ಅತ್ತರು. ಬಹಳ ಹೊತ್ತು ಅತ್ತ ಮೇಲೆ ಮನಸ್ಸು ಸಮಾ ಧಾನವಾಯಿತು, ಹೃದಯದ ಭಾರ ಇಳಿಯಿತು.

ತಾಲ್ಲೂಕಾಫೀಸಿಗೆ ಹೋಗಿ ಎಲ್ಲ ಗುಮಾಸ್ತೆಗಳಿಗೂ ಸುದ್ದಿ ಮುಟ್ಟಿಸಿ ಬಂದ ಸುಬ್ಬರಾಯ. ಎಲ್ಲರೂ ಮರುಗಿದರು.

ಜನಾರ್ಧನಯ್ಯನ ಮನೆಗಿಕ್ಕಿದ ಬೀಗ ಮುರಿದು ಒಳಗಿನ ಸಾಮಾ ನೆಲ್ಲಾ ಚೀಲಕ್ಕೆ ಹಾಕಿ ಹೊಲೆದ ಸುಬ್ಬರಾಯ. ದೇವರ ಗೂಡಿನಲ್ಲಿ ಆರದ ಎರಡು ನೀಲಾಂಜನ ಹಾಗೇ ಇತ್ತು. ಸುಬ್ಬರಾಯ, ರಾಜೀವಿಯರು, ಸುಶೀಲೆ, ಜನಾರ್ಧನ ದಂಪತಿಗಳ ಅಭ್ಯುದಯಕ್ಕಾಗಿ ಕೊಟ್ಟ ಉಡುಗರೆ ಆ ನೀಲಾಂಜನ. ಅದನ್ನು ಎತ್ತಿ ಪೆಟ್ಟಿಗೆಗೆ ಹಾಕುವಾಗ ಹೃದಯಕ್ಕೆ ಮೊಳೆ ಹೊಡೆದ ಯಾತನೆ ಯಾಯಿತು.

ಸರಸ್ವತಿ, ಶಾಮಸುಂದರ, ರಾಜೀವಿ, ಸುಬ್ಬರಾಯ, ಸಾಮಾನು ಸಮೇತ ಶಿವಮೊಗ್ಗೆಗೆ ತೆರಳಿದರು. ಮೊಳಕಾಲ್ಮೂರಿನ ನೀರಿನ ಋಣ ತೀರಿ ಹೋಯಿತು. ಆ ಊರಿಗೆ ಬಂದಾಗ ಸುಬ್ಬರಾಯನನ್ನು ಸ್ವಾಗತಿಸಿದ್ದು ಬೊಗಸೆ ಕಂಗಳ ಚೆಲುವೆ ಸುಶೀಲೆ. ಈಗ ಹೊರಡುವಾಗ, ಅವಳ ಕುಂಕುಮ ವಿಲ್ಲದ ಮುಖ ನೋಡಲು!

## ೨೭

ಗುಡುಗು ಸಿಡಿಲಿನ ಭೋರ್ಗರೆವ ಮಳೆ ನಿಂತು ಆಕಾಶದಲ್ಲಿ ನೀಲಿ ಮೂಡಿತ್ತು. ಎಳೆ ಬಿಸಿಲು ಜುಳು ಜುಳು ಹರಿಯುತ್ತಿದ್ದ ವಾಹಿನಿಯ ಮೇಲೆ ಬಿದ್ದು ಬಂಗಾರದ ನೀರು ಹರಿದಂತೆ ಕಾಣಲು ಕಾರಣವಾಗಿತ್ತು. ತುಂಗಾ ನದಿಯಲ್ಲಿ ಯುವಕರಿಬ್ಬರು ಮಾರುಗೈ ಹಾಕುತ್ತಾ ಈಜುತ್ತಿದ್ದರು. ಆ ನಗು, ಅವರ ಕೇಚ್ಚು ಅವರ ಉತ್ಸಾಹ ಸಂತೋಷ ಯಾವುದೋ ಹಳೆಯ ನೆನಪನ್ನು ಮರುಕಳಿಸಿತ್ತು ಸುಶೀಲೆಯಲ್ಲಿ.

ಪಾವಟಿಗೆಯ ಮೇಲೆ ಕುಳಿತಿದ್ದಳು. ಮುಖದಲ್ಲಿ ಮಂದಹಾಸವಿಲ್ಲ, ಬೇಗೆಗೆ ಸಿಕ್ಕ ಸುಂದರ ಮಂದಾರ ಕುಸುಮದ ಪಾಡಾಗಿತ್ತು ಅವಳ ಮುದ್ದಾದ ಮುಖ.

ಅವಳೀಗ ಯಾರನ್ನೂ ಮಾತನಾಡಿಸುವುದಿಲ್ಲ. ಯಾರ ಮನೆಗೂ ಹೋಗುವುದಿಲ್ಲ. ತಾಯಿಯ ಹತ್ತಿರ ಕೂಡ ಒಂದೊಂದು ಮಾತಾಡಿದರೆ ಆಡಿದಳು ಇಲ್ಲದಿದ್ದರೆ ಇಲ್ಲ.

ಮುಂಜಾನೆ ಎರಡು ತಾಸು ತುಂಗಾ ನದಿಯ ದಡದ ಪಾವಟಿಗೆಯ ಮೇಲೆ ಕೂತು ಬಿಟ್ಟ ಕಣ್ಣಿಂದ ನೆಟ್ಟ ದೃಷ್ಟಿಯಿಂದ ಹರಿಯುವ ನೀರನ್ನು ನೋಡುವಳು. ನೋಡೇ ನೋಡುವಳು.

ತನ್ನ–ಜನಾರ್ಧನನ ಬಾಳದೋಣಿ ಸಾಗಿದಾಗ ಘೋರ ಬಿರುಗಾಳಿಗೆ ಸಿಕ್ಕು, ಊರುಗೋಲೆ ಕಳೆದು, ದೋಣಿ ಮಗುಚಿ ನಾವಿಕ ಇಲ್ಲವಾಗಿ, ಏಕಾಕಿಯಾಗಿ ಕಾನನದ ನಡುವೆ ನಿಂತಿದ್ದಳು ಸುಶೀಲೆ. ಊರ ಜನ ಅಯ್ಯೋ ಎಂದರು, ಬಂಧು ಬಳಗ ಕಣ್ಣೀರು ಹರಿಸಿ 'ಪಾಪ' ಎಂದರು, ಮಿತ್ರ ವೃಂದ 'ಅಯ್ಯೋ ಪಾಪ' ಎಂದಿತು.

ತನ್ನ ಗತಿ ಏನು ?........ಶೂನ್ಯ, ಕಗ್ಗತ್ತಲೆ, ದಿಕ್ಕಿಲ್ಲದ ತಾಯಿಗೆ ತೆಕ್ಕೆ ಬಿದ್ದ ಮಗು ; ಕಾಳ್ಗಿಚ್ಚು. ಮತ್ತೆ ಮತ್ತೆ ಅವಳಿಗೆ ನೆಮ್ಮದಿ ಕೊಡುತ್ತಿದ್ದು ದೆಂದರೆ ತುಂಗಾ ಪ್ರವಾಹ, ಹರಿವ ಜೀವನದಿ ಉರಿವ ಮನಸ್ಸಿಗೆ ತಣ್ಣನೆಯ

ಪ್ರಸನ್ನತೆ ಮೂಡಿಸುತ್ತಿತ್ತು. ಅವಳ, ಜನಾರ್ಧನನ ಬಾಳಬಂಧನ ಕತ್ತರಿಸಿ ಹೋಗಿತ್ತು.

ಸುಬ್ಬರಾಯ ಊರಿಗೆ ಬಂದಿದ್ದ, ರಾಜೀವಿ ಊರಿಗೆ ಬಂದಿದ್ದಳು. ಸರಸ್ವತಿ, ಶ್ಯಾಮಸುಂದರರು "ಸುಶೀಲತ್ತೇ" ಎಂದು ಕೂಗಿ ಕರೆದಿದ್ದರು. ಉಹೂಂ ಯಾರಿಗೂ ಮುಖ ಕೊಟ್ಟು ಮಾತಾಡಿರಲಿಲ್ಲ.

"ಸುಶೀಲವ್ವಾ ಬರಬಾರದ ಮನೀಕೆ, ನನ್ನ ಮಾತು ಕೇಳವ್ವ, ಸುಮ್ಕೆ ಚಿಂತೆ ಮಾಡಬ್ಯಾಡ"

ಎಂದು ದುಃಖ ತುಂಬಿದ ಧ್ವನಿಯಲ್ಲೇ ಹೇಳಿದಳು ಸಂಜಮ್ಮ. ನಂಜಿ ಜನಾರ್ಧನನ ಸಾವಿನ ಸುದ್ದಿ ಕೇಳಿ ಬಂದಾಗಿನಿಂದ ಅಲ್ಲೇ ಇದ್ದಳು. ಅವನ ಅಂತ್ಯ ಕರ್ಮ ಮಾಡಲಿಕ್ಕೆ ಹಣದ ಕೊರತೆಯನ್ನು ನಿವಾರಿಸಿದ್ದಳು. ರಂಗಣ್ಣನೇ ಅವನ ಅಂತ್ಯ ಕರ್ಮಗಳನ್ನು ಮಾಡಿದ್ದರು. ಗೌರಮ್ಮ ಪ್ರೀತಿಯಿಂದ ಸಾಕಿ ದೊಡ್ಡವನನ್ನಾಗಿ ಮಾಡಿ ಹೀಗೆ ಘೋರ ದುರಂತಕ್ಕೆ ಈಡಾದ ಜನಾರ್ಧನ ಇಲ್ಲವಾದದ್ದು ಅತೀವ ದುಃಖಕ್ಕೀಡು ಮಾಡಿತ್ತು. ಕಣ್ಣೀರಿಡುತಾ ಎಳ್ಳು ನೀರು ಬಿಟ್ಟಿದ್ದರು ಅವರು.

"ದೇವರ ಚಿತ್ತ ಹೀಗೇ ಇತ್ತೆ ? ಹೇಗೇ ಆಗಬೇಕಿತ್ತೆ ?" ಎಂದು ಎಷ್ಟು ಪರಿ ಅಂದರೂ ಮತ್ತೆ ಮತ್ತೆ ಎಂದೆಂದೂ ಹಿಂದಿರುಗಲಾರದ ಜನಾರ್ಧನನ ಬಗ್ಗೆ ಕಣ್ಣೀರು. ಅವನು ಬಿಟ್ಟುಹೋದ ಸುಶೀಲೆಯ ಬಗ್ಗೆ ಅನುತಾಪ ಸಂತಾಪ ವ್ಯಕ್ತಪಡಿಸುವುದು ಬಿಟ್ಟು ಯಾರೇನು ಮಾಡಲು ಸಾಧ್ಯ ?

ಭಾರವಾದ ಅರೆಮುಚ್ಚಿದ ತುಂಬು ರೆಪ್ಪೆ ಬಟ್ಟಲು ಗಣ್ಣಿಂದ ತಲೆ ಎತ್ತಿ ನೋಡಿದಳು ಸುಶೀಲ. ತಲೆ ನೇವರಿಸಿ ತೋಳು ಹಿಡಿದು ನಿಲ್ಲಿಸಿ ಕೈಹಿಡಿದು ಪಾವಟಿಗೆಗಳನ್ನು ಒಂದೊಂದಾಗಿ ಹತ್ತಿಸಿ ಮನೆಗೆ ಕರೆದೊಯ್ದಳು ನಂಜಮ್ಮ. ಅವಳ ಎದೆಯಲ್ಲಿ ಮುಖಮುಚ್ಚಿ ಮತ್ತೆ ಮತ್ತೆ ಅತ್ತಳು ಸುಶೀಲೆ. ತಾಯಿಗಿಂತ ನಂಜಿಯ ಬಳಿಯೇ ಅವಳಿಗೆ ಸಮಾಧಾನವಿರುತ್ತಿತ್ತು.

ಸುಶೀಲೆ ಮನೆ ಸೇರಿದಾಗ ಎಲೆ ಹಾಕಿತ್ತು, ಬೆಳಗಿನಿಂದ ಮಧ್ಯಾಹ್ನದವರೆಗೂ ತುಂಗಾ ತೀರದಲ್ಲೇ ಕುಳಿತಿದ್ದಳು. ಶ್ರೀಧರಮೂರ್ತಿ ಬಡಿಸುವ ಸನ್ನಾಹದಲ್ಲಿದ್ದ. ತಿಪ್ಪಯ್ಯ, ರಂಗಣ್ಣ, ವೆಂಕಟೇಶ ಖಂಡೇರಾಯರು ಎಲ್ಲರೂ ಕುಳಿತಿದ್ದರು. ರಂಗಮ್ಮ ಎಷ್ಟು ಕರೆದರೂ ಬಾರದ ಸುಶೀಲೆಯನ್ನು ಕರೆತರಲು

ನಂಜಮ್ಮನನ್ನು ಕಳಿಸಿದ್ದರು. ಅವತ್ತು ವೈಕುಂಠ ಸಮಾರಾಧನೆ. ದುರ್ಮ ರಣಕ್ಕೆ ಈಡಾದ ಜನಾರ್ಧನನ ಹೆಸರಿನಲ್ಲಿ ಅವನ ಆತ್ಮ ವೈಕುಂಠದಲ್ಲಿ ತೃಪ್ತಿ ಯಾಗಲೆಂದು ಆಪ್ತೇಷ್ಟರೆಲ್ಲಾ ಸೇರಿದ್ದರು.

ಸುಬ್ಬರಾಯ, ರಾಜೀವಿ ಮಕ್ಕಳು ಎಲ್ಲಾ ಬಂದಿದ್ದರು. ಜನಾರ್ಧನನ ಕಡೇ ಋಣ ವೈಕುಂಠ ಸಮಾರಾಧನೆ ನಡೆದಿತ್ತು. ಶ್ರೀಧರಮೂರ್ತಿಯ ಮನೆ ಯಲ್ಲಿಯೇ ಎಲೆ ಹಾಕಿದ್ದರು. ಅಲ್ಲಿ ರಂಗಮ್ಮನವರ ಮನೆ ತೀರ ಚಿಕ್ಕದೆಂದು ಈ ಏರ್ಪಾಟು ಮಾಡಿದ್ದರು.

ಊಟ ನಡೆಯುತ್ತಿದ್ದಾಗ ರಾಜೀವಿಗೆ ತೀರಾ ಸಂಕಟ ಪ್ರಾರಂಭ ವಾಯಿತು. ಇನ್ನೂ ದಿನ ತುಂಬಿರಲಿಲ್ಲ ಏಳನೇ ತಿಂಗಳು ನಡೆದಿತ್ತು. ತ್ರಿಪುರ ಸುಂದರಿ ಅರ್ಧ ಊಟಕ್ಕೇ ಎದ್ದು ರಾಜೀವಿಗೆ ಎಲ್ಲಾ ಸಾಮಾನು ಹಾಸಿಗೆ ಸುರುಳಿ ತುಂಬಿದ ಮುಂದಿನ ಕೊಠಡಿಯಲ್ಲಿಯೇ ಜಾಗಮಾಡಿ ಹಾಸಿಗೆ ಹಾಸಿ ಕೊಟ್ಟಳು.

"ತುಂಬಾ ಸುಸ್ತಾಗುತ್ತ್ಯೇನೆ ರಾಜಿ ? "

"ಒಂದು ತರಹಾ ಆಗ್ತಾ ಇದೆ...."

"ನೋವು ಕಾಣಿಸುತ್ತ್ಯ....ಹೇಳು. ಸುಬ್ರಾಯನಿಗೆ ಹೇಳಿ ಗಾಡಿ ತರಿ ಸ್ತಿನಿ, ಆಸ್ಪತ್ರೆಗೇ ಹೊರಟುಬಿಡೋಣ"

"ಅಂಥದೇನೂ ಇಲ್ಲ. ಒಂದು ತರಹ ಸಂಕಟ, ಹೊಟ್ಟೆಶೂಲೆ...."

ಬಿಸಿಬಿಸಿಯಾದ ಕಾಫಿ ಕುಡಿಸಿದಳು. ಹಾಗೇ ಕೊಂಚಹೊತ್ತು ಮಲ ಗಿದ್ದಳು ರಾಜೀವಿ. ಸ್ವಲ್ಪ ಸಮಯಾನಂತರ ಕೊಂಚ ಸಂಕಟ ಕಡಿಮೆ ಯಾಯಿತು. ಈ ಒಂದು ವಿಚಾರದಿಂದ ಎಲ್ಲರ ಊಟ ಅವಸರವಾಗೇ ಮುಗಿ ಯಿತು.

ಮೊಳಕಾಲ್ಮೂರಿನಿಂದ ಬಂದಾಗಲೇ ಸೂಕ್ಷ್ಮ ಪ್ರಕೃತಿಯವಳಾದ ರಾಜೀವಿ, ಶಿವಮೊಗ್ಗಿಗೆ ಬಂದು ಜನಾರ್ಧನನ ಉತ್ತರ ಕ್ರಿಯೆಯ ಗಲಾಟೆ ಯಲ್ಲಿ ಹೊತ್ತಿಲ್ಲದ ಹೊತ್ತಿನ ಊಟ, ಗಡಿಬಿಡಿಯ ಫಲವಾಗಿ ಅವಳಿಂದು ಸುಸ್ತಾಗಿ ಸಂಕಟ ಪಡುತ್ತಿದ್ದಳು. ಹೆಂಡತಿಯ ಸ್ಥಿತಿ ಕೇಳಿ ಅವಸರವಾಗಿ ಎದ್ದು ಕೈಗೆ ನೀರು ಹಾಕಿಕೊಳ್ಳಲು ಬಚ್ಚಲ ಮನೆಗೆ ಹೋದ. ಒಂದು ಕ್ಷಣ ಮೈಯ್ಯಲ್ಲಿ ಮಿಂಚು ಸುಳಿದಂತಾಯಿತು. ಸುಶೀಲೆ ತಲೆ ತಗ್ಗಿಸಿಕೊಂಡು

ಅಲ್ಲಿಯೇ ನಿಂತಿದ್ದಳು, ಸುಬ್ಬರಾಯನನ್ನು ಕಂಡು ಕತ್ತು ಸೆರೆ ಉಬ್ಬಿ ಬಂತು. ಕಣ್ಣಲ್ಲಿ ನೀರು ಹರಿಯಿತು. ಅವನು ಊರಿಗೆ ಬಂದಲಾಗಾಯಿತು ಅವನ ಮುಖ ನೋಡಿರಲಿಲ್ಲ. ಬೇಕಂತಲೇ ನೋಡಿರಲಿಲ್ಲ, ನೋಡಿರಲಿಲ್ಲ ಎನ್ನು ವುದಕ್ಕಿಂತ ಹೇಗೆ ಈ ಕುಂಕುಮವಿಲ್ಲದ ಮುಖ ತೋರಿಸುವುದೆಂಬುದೇ ಅವಳ ದುಃಖವಾಗಿತ್ತು. ಅವಳನ್ನು ಕಂಡ ಸುಬ್ಬರಾಯನಿಗೂ ದುಃಖವಾಯಿತು. ಕೈತೊಳೆದು ರಾಜೀವಿಯನ್ನು ವಿಚಾರಿಸಲು ಬಂದ.

ಮೊಳಕಾಲ್ಮೂರಿನಿಂದ ಬಂದವನೇ ಲೇಡಿ ಡಾಕ್ಟರಿಗೆ ತೋರಿಸಿದ್ದ ಅವ ಳನ್ನು. ನಿಶ್ಶಕ್ತಿ, ರಕ್ತಕಡಿಮೆ, ಹುಶಾರಾಗಿರಬೇಕೆಂದು ಎರಡು ಮೂರು ಇಂಜಕ್ಷನ್ ಮತ್ತು ಟಾನಿಕ್ಕು ಕೊಟ್ಟಿದ್ದರು. ಸುಬ್ಬರಾಯ ಹೆಂಡತಿಗೆ ಹಣ್ಣು ಹಾಲಿಗೆ ಏರ್ಪಾಟು ಮಾಡಿದ್ದ. ಬಲಿತ ಅನಿಮಿಯಾ ಒಂದೇ ಬಾರಿಗೆ ಹತೋಟಿಗೆ ಬರುವುದು ನಿಧಾನ, ಈ ಮಧ್ಯೆ ದಿನ ತುಂಬುತ್ತಾ ಬಂದಿತ್ತು. ಸಧ್ಯ ಸುಖವಾಗಿ ಮೈಕಳೆದರೆ ಸಾಕೆಂದೆನಿಸಿತ್ತು ಸುಬ್ಬರಾಯನಿಗೆ. ಹೀಗೇ ಅನ್ನಿಸಿತ್ತು ಮಿಕ್ಕವರಿಗೆಲ್ಲಾ.

"ತುಂಬಾ ಸುಸ್ತೆ ರಾಜೀವಿ....?"

"ಅಂಥಾದ್ದೇನೂ ಇಲ್ಲಾಂದ್ರೆ ಸುಮ್ಮನೆ ಗಾಬರಿಯಾಗಬೇಡಿ" ಎಂದು ನರಳುವ ಧ್ವನಿಯಲ್ಲೇ ಹೇಳಿದಳು.

"ಗಾಬರಿ ಮಾತಿಗಲ್ಲ – ಆಯಾಸ ಮಾಡ್ಕೋಬೇಡಾಂದ್ರೂ ನೀನು ಕೇಳ್ಳೋಲ್ಲ"

"ಆಯಾಸ ಮಾಡ್ಕೊಳ್ಳಿಕ್ಕೆ ಹೋಗಿದ್ನೆ ನಾನು!"

"ಸುಮ್ಮನಿರೋ ಚೇತನವೇ ನಿಂದೂ?"

"ಶಾಮಣ್ಣ-ಸರಸ್ವತಿ ಎಲ್ಲಿ?"

"ಒಳಗಡೆ ಇರಬೇಕು....ಕರೀಲೇನು?"

"ಬೇಡ....ಸುಮ್ಮನೆ ಕೇಳಿದೆ"

"ಸಂಕಟ ಹೆಚ್ತಾ ಇದೆ"

"ಗಾಡಿ ತಂದುಬಿಡ್ತೀನಿ ಇರು"

—ಎಂದು ಸರಸರನೆ ಅಂಗಿ ತಗುಲಿಸಿಕೊಂಡು ಓಡಿಹೋಗಿ ಬಂದು ಗಾಡಿ ಮಾಡಿಕೊಂಡು ಬಂದೇಬಿಟ್ಟೆ. ರಾಜೀವಿಯನ್ನ ಕೂಡಿಸಿಕೊಂಡು ಆಸ್ಪತ್ರೆ ಸೇರಿದಾಗ ಲೇಡಿ ಡಾಕ್ಟರು ಮನೆಗೆ ಹೊರಡುವುದರಲ್ಲಿದ್ದರು.

ರಾಜೀವಿಯನ್ನು ಪರೀಕ್ಷಿಸಿ–ನೋಡಿ ಭಯಕ್ಕೇನೂ ಕಾರಣವಿಲ್ಲವೆಂದು ಅಲ್ಲಿಯೇ ವಾರ್ಡಿನಲ್ಲಿರಲೆಂದು ಸಲಹೆ ಕೊಟ್ಟರು. ರಾಜೀವಿ ಅಲ್ಲಿಯೇ ಇರ ಬೇಕಾಯಿತು. ಅವಳಿಗಿದ್ದ ಚಿಂತೆ ಎಂದರೆ ಶಾಮಣ್ಣನದು. ಶಾಮಸುಂದರ ಒಂದು ನಿಮಿಷವೂ ತಾಯಿಯನ್ನು ಬಿಟ್ಟಿದ್ದವನಲ್ಲ. "ಮಗು ಹೇಗಿರುತ್ತೊ" ಎಂದು ಪರಿತಪಿಸಿದ್ದು ನೂರು ಬಾರಿ. ತ್ರಿಪುರಸುಂದರಿಯ ಹತ್ತಿರ ಅವನು ಇರುತ್ತಿರಲಿಲ್ಲ. ಮುದ್ದಿನಿಂದ ಸಾಕಿದ್ದರಿಂದ ಶಾಮಸುಂದರ ತುಂಬಾ ಹಟ ಮಾಡುತ್ತಿದ್ದ.

ಇತ್ತ ಸಮಾರಾಧನೆಯ ಕೆಲಸ ಕಾರ್ಯ ಮುಗಿಸಿ–ಅಡಿಗೆ ಮನೆ ಶುದ್ಧ ಮಾಡಿ ಮನೆ ಸರಿಪಡಿಸಬೇಕಾದರೆ ರಂಗಮ್ಮನಿಗೆ ಸಾಕಾಗಿ ಹೋಯ್ತು. ಈ ಮಧ್ಯೆ ಒಂದೇಸಮ ಕೆಟ್ಟ ಹಟ ಹಿಡಿದ ಶಾಮಣ್ಣ ಎಲ್ಲರ ತಲೆ ಚಿಟ್ಟೆನಿಸುವಂತೆ ಮಾಡಿದ್ದ. ನಂಜಿ ಗದರಿದಳು, ತಿಂಡಿ-ಆಟದ ಸಾಮಾನು, ಚಂಡು ಎಲ್ಲಾ ಆಯಿತು. ಒಂದೇ ರಾಗ "ಅಮ್ಮಾ" ಎಂದು ಹಿಡಿದುಬಿಟ್ಟಿದ್ದ.

ಕಡೆಗೆ ಸಮಾಧಾನವಾದದ್ದು ಸುಶೀಲೆ ತಕ್ಕೈಸಿದ ಮೇಲೆ. ಅವಳು ಅವನನ್ನು ತನ್ನ ಮನೆಗೆ ಕರೆದೊಯ್ದು ಹಾಸಿಗೆ ಹಾಸಿ ತಟ್ಟಿ ಮಲಗಿಸಿದ್ದಳು. ಸರಸ್ವತಿಯೂ ಅವನ ಬದಿಯೇ ಕುಳಿತಿದ್ದಳು. ಸುಶೀಲೆ ಸರಸ್ವತಿಯ ತಲೆ ನೇವರಿಸಿದಳು.

"ಅಮ್ಮಾ ಯಾವಾಗ ಬರ್ತ್ತಾಳೆ?" ಎಂದು ಶಾಮು ಅಂದಾಗ

"ಪುಟ್ಟ ಪಾಪನ್ನ ಕರಕೊಂಡು ಬರ್ತ್ತಾಳೆ" ಎಂದು ಸಮಾಧಾನಪಡಿಸಿದ್ದಳು ಸರಸ್ವತಿ.

ಸಂಜೆಯಲ್ಲಿ ಎಲ್ಲರೂ ಸೇರಿದ್ದರು. ಖಂಡೇರಾಯರು ನಂಜಿಗೆ ಬಾ ಎಂದಾಗ 'ನೀವು ಹೋಗಿರ್ರಿ ಆಮ್ಯಾಕೆ ಬರ್ತಿನಿ" ಎಂದು ಅವರನ್ನು ಕಳಿಸಿದ್ದಳು. ಗೌರಮ್ಮ–ರಂಗಣ್ಣ ಹೊನ್ನಾಳಿಗೆ ಹೊರಟುಹೋದರು. ಎಲ್ಲರೂ ಕುಳಿತಿದ್ದಾಗ ವೆಂಕಟೇಶ ಹೇಳಿದ.

"ಸುಶೀಲಮ್ಮ—ಮುಂದೇನು ಎಂಬ ಚಿಂತೆಮಾಡಿ ಕೊರಗಬೇಡಿ, ಅನಾಥ ಬಾಲಿಕಾಶ್ರಮಕ್ಕೆ ಕಾರ್ಯದರ್ಶಿನಿಯೊಬ್ಬರ ಅವಶ್ಯವಿದೆ. ದಿಕ್ಕಿಲ್ಲದ ಪರದೇಶಿಗಳ ಸೇವೆಯಲ್ಲಿ ತೊಡಗಿದರೆ ಮನಸ್ಸಿಗೆ ಶಾಂತಿ ದೊರಕತ್ತೆ, ಸ್ವದೇಶಿ ಚಳುವಳಿಗೆ ಸೇರಿ ಮಹಿಳಾ ಸ್ವಯಂಸೇವಕ ದಳಕ್ಕೆ ಸೇರಿ ದೇಶಸೇವೆ ಮಾಡಿದರೆ ಒಳ್ಳೆಯದು. ಈ ಚಿಂತೆ ಈ ವ್ಯಥೆಗಿಂತ ಹೆಚ್ಚಿನ ನೂರಾರು ಕಷ್ಟಗಳಿಗೊಳಗಾದ ಬಡವರ ಬಳಗಕ್ಕೆ ನಿಮ್ಮಂಥವರ ಸಹಾಯ ಅತ್ಯಗತ್ಯವಾಗಿದೆ"

—ಎಂದೆಲ್ಲಾ ಹೇಳಿದ. ಅನಾಥ ಬಾಲಿಕಾಶ್ರಮ....ದಿಕ್ಕಿಲ್ಲದ ಪರದೇಶಿಗಳ ಲಾಲನೆ ಪಾಲನೆ, ಸುಶೀಲೆಯ ಮನಸ್ಸಿಗೆ ಇದು ಹಿಡಿಯಿತು. ತನ್ನ ಬಾಳಂತೂ ಹೀಗಾಯಿತು. ಇನ್ನುಳಿದ ಆಯಸ್ಸನ್ನು ದೀನದಲಿತರ—ಅನಾಥ ಬಾಲಕರ ಸೇವೆಯಲ್ಲೇ ಕಳೆಯುವುದೆಂದು ಒಂದು ನಿರ್ಧಾರಕ್ಕೆ ಬಂದಿತ್ತು ಅವಳ ಮನಸ್ಸು.

ನಂಜಿಗೆ ಮಾತ್ರ ಈ ವೆಂಕಟೇಶನ ಮಾತು ಸರಿಬೀಳಲಿಲ್ಲ. ಇದೆಂತಹ ನ್ಯಾಯ—ಹರೆಯದ ಸುಶೀಲೆ ಇನ್ನುಳಿದ ದಿನಗಳನ್ನು ಏಕಾಕಿನಿಯಾಗಿ ಕಳೆಯಬೇಕೆ? ದಿನ ಕಳೆದಂತೆ ಹೀಗೇ ಇರುವಳೆಂದೇನು ನಂಬಿಕೆ? ಈ ಸೇವೆ ಅನಾಥಾಶ್ರಮದ ಹೆಸರು ಕೆಲಸ ತೋರಿಕೆಯ ಆಡಂಬರಕ್ಕೆ ಮಾತ್ರ, ಸೊಗಸಿನದೆಂದು ಅವಳಿಗನ್ನಿಸಿತ್ತು.

ಈ ಕೆಲಸದ ಭರದಲ್ಲಿ ಜೊತೆಗಿರುವ ಗಂಡಿನ ಬಯಕೆಯ ಬೆಂಕಿಗೆ ಈ ಬಾಲೆಯ ಮನಸ್ಸು ಕರಗಿ ಒಮ್ಮೆ ಜಾರಿದಳೆಂದರೆ ತೀರೇಹೋಯಿತಲ್ಲವೆ? ಇದೆಂತಹ ಬ್ರಾಹ್ಮಣ ಜಾತಿ, ವಿಧವೆಯರು ಮತ್ತೆ ಶಾಸ್ತ್ರೋಕ್ತ ಮದುವೆಯಾಗುವ ಅವಕಾಶವಿರಬಾರದಿತ್ತೆ? ಸುಶೀಲೆ ಇನ್ನೊಬ್ಬ ಹರಯದವನೊಡನೆ ಮತ್ತೆ ಬಾಳ್ವೆ ನಡಸಿದರೆ ಅವಳಿಗೆ ಸುಖವೆಂದು ನಂಜಿಯ ವಾದ.

ಇದು ಎಂತಹ ಅಸಂಭವನೀಯ ಯೋಚನೆ ಎಂದು ನಂಜಿಗೆನಿಸಲಿಲ್ಲ. ಸುಶೀಲೆ ಮಾತ್ರ ಅನಾಥ ಮಕ್ಕಳ ಪೋಷಣೆಯೇ ತನ್ನ ಇನ್ನುಳಿದ ಆಯುಸ್ಸಿನ ಕೆಲಸವೆಂದು ನಿರ್ಧರಿಸಿದ್ದಳು.

## ೨೮

ವೆಂಕಟೇಶನ ವಾದ ಸರಣಿಗೆ ಮನಸೋತಿದ್ದ ಸುಬ್ಬರಾಯ. ತಮ್ಮೆಲ್ಲ ಕಷ್ಟ–ಗುಮಾಸ್ತೆಯ ಗೋಳು ಉಳುವವನ ಉಪವಾಸ, ಕಾರ್ಮಿಕನ ಕಂಗಾಲು ಪರಿಸ್ಥಿತಿಗಳಿಗೆ ಬ್ರಿಟಿಷ್ ಬಂಡವಾಳ ಶಾಹಿಯೇ ಕಾರಣ, ಜನಾರ್ಧನನ ಸಾವಿಗೆ ಬ್ರಿಟಿಷರೇ ಕಾರಣ, ಮತ್ತೆ ತನ್ನ ಮಡದಿ ರಾಜೀವಿ ಇಂದು ಬದುಕು ಸಾವಿನ ನಡುವೆ ಜೋಕಾಲಿಯಾಡುತ್ತಿರುವ ಘೋರ ಸಂಕಷ್ಟಕ್ಕೆ ಕಾರಣ ನಮ್ಮ ಗುಲಾಮತನ ಎಂದು ಅವನಿಗೆ ಮನದಟ್ಟಾಗಿತ್ತು.

ವೆಂಕಟೇಶ ಅವನು ಇಬ್ಬರೂ ಆಸ್ಪತ್ರೆ ಸೇರಿದಾಗ ರಾತ್ರಿ ಒಂಭತ್ತು ಘಂಟೆ ಸಮಯ. ತ್ರಿಪುರಸುಂದರಿ ಅಲ್ಲೆ ಇದ್ದಳು. ಹೊರಗೆ ಜಗುಲಿಯ ಮೇಲೆ ಚಿಂತಾಮುದ್ರಿತಳಾಗಿ ಕುಳಿತ ಅವಳನ್ನು ನೋಡುತ್ತಲೇ ಇನ್ನೂ ಹೆರಿಗೆ ಆಗಿರಲಿಕ್ಕಿಲ್ಲ ಎಂದು ಊಹಿಸಿದ್ದರು. ಅವರ ಊಹೆ ಸರಿಯಾಗಿತ್ತು.

ರಾಜೀವಿ ಅವತ್ತು ವಾರ್ಡಿಗೆ ಸೇರಿದವಳು ಮತ್ತೆ ಮನೆಗೇ ಬಂದಿರಲಿಲ್ಲ. ರಿಂದಮ್ಮ, ನಾಗರಾಜಜೋಯಿಸರು ಬಂದು ಹೋಗಿದ್ದರು.

ಈಗ ಎರಡು ದಿನದಿಂದ ನೋವು ಅನುಭವಿಸಿದ್ದರೂ ಹೆರಿಗೆ ಆಗಿರಲಿಲ್ಲ. "ಅಯ್ಯಮ್ಮಾ–ಸಾಕು ಈ ಜನ್ಮಾ....ದೇವರೇ ನನ್ನ ಕರೆಸಿಕೊ" ಎಂದು ನೋವಿನಿಂದ ನರಳುವ ಅವಳ ಆರ್ತ ಧ್ವನಿ ಕೇಳಿದರೆ ಕರುಳು ಕಿತ್ತುಬರುತ್ತಿತ್ತು. ಅತೀವ ಯಾತನೆಯ ಲೇಪವಿರುತ್ತಿತ್ತು ಆ ನರಳುವಿಕೆಯಲ್ಲಿ.

"ತಿಪ್ಪಕ್ಕಾ ಹೇಗಿದ್ದಾಳೆ ಅವಳು" ಎಂದ ಸುಬ್ಬರಾಯ.

"ಈಗ–ಆಗ–ಅಂತ್ಲೆ ಇದ್ದಾರಪ್ಪಾ ಡಾಕ್ಟ್ರು...."

"ಡಾಕ್ಟ್ರು ಸರಿಯಾಗಿ ಮುತುವರ್ಜಿ ವಹಿಸ್ತಾ ಇದ್ದಾರೆಯೇ ಸುಬ್ಬರಾಯ ? " ಎಂದವನು ವೆಂಕಟೇಶ.

"ಅದೇನೋ ನನ್ನ ಅದೃಷ್ಟವಿರಬೇಕು, ಒಳ್ಳೇಡಾಕ್ಟ್ರು ಸಿಕ್ಕಿದ್ದಾರೆ. ಒಳ್ಳೆಯವರಪ್ಪ ಅವರು, ರಾಜೀವಿಯನ್ನ ಕಂಡರೆ ಅವರಿಗೆ ಸ್ವಂತಮಗಳು ಕಂಡಹಾಗಿದೆ ಎಂದು ನನ್ನ ಹತ್ತಿರ ಹೇಳಿದರು...."

"ಅವರಿಗೇನಾದ್ರು ಸ್ವಲ್ಪ ಕೊಟ್ಟೆಯಾ ಇಲ್ವೇ ಇಲ್ವೊ?"

"ಹೋದವಾರ ಅಮ್ಮೇನ ಹಳ್ಳಿಗೆ ಹೋದದ್ದು ಯಾತಕ್ಕೇಂತೀಯ–ಲಕ್ಷ್ಮಣನ ಹತ್ತಿರ ದುಡ್ಡು ತೊಗೊಂಡು ಬಂದು ಇಪ್ಪತ್ತೈದು ಕೊಟ್ಟೆ ಡಾಕ್ಟರಿಗೆ"

"ಸರಿಮತ್ತೆ, ಸರಿಯಾಗೇ ನೋಡ್ಕೋತಾರೆ...." ಎಂದು ಇಬ್ಬರೂ ಕಟ್ಟೆಯಮೇಲೆ ಕುಳಿತರು. ತ್ರಿಪುರಸುಂದರಿ ಮತ್ತೆ ಮತ್ತೆ ಹೆರಿಗೆ ವಾರ್ಡಿನ ಬಳಿ ಹೋಗಿ ಬರುತ್ತಿದ್ದಳು.

"ಶಾಮುಸುಂದರ ಸರಸ್ವತಿ, ಮಂಜುಳ–ರುಕ್ಮಿಣಿ ಮನೇಲಿ ಸುಮ್ಮನೆ ಮಲಗಿದ್ದರೇ....ಇವರು ಏನುಮಾಡುತ್ತಿದ್ದರು? ಅವರೇ ಹುಡುಗರಿಗೆ ಬಡಿಸಿದರೆ–ಹಾಲು ಮುಚ್ಚಿಟ್ಟರೋ ಇಲ್ಲವೊ, ಹೆಪ್ಪು ಹಾಕಿದರೆ?" ತ್ರಿಪುರಸುಂದರಿಯ ಯೋಚನೆ ತನ್ನ ಮನೆಯತ್ತ ಹರಿದಿತ್ತು.

ಅವಳ ಈ ಎಲ್ಲ ಯೋಚನೆಯನ್ನು ಒಂದೇಮಾತಿನಲ್ಲಿ ಬಗೆಹರಿಸಿದ್ದ ಸುಬ್ಬರಾಯ. "ಸುಶೀಲೆ ಮನೆಯಲ್ಲೇ ಇದ್ದಳು ಇನ್ನೇನು ಯೋಚನೆ?" ಎಂಬ ಆ ಮಾತು ಅವಳಲ್ಲಿ ಸಮಾಧಾನ ಮೂಡಿಸಿತ್ತು. ಸುಶೀಲೆ ಸುಬ್ಬರಾಯನ ಮಕ್ಕಳನ್ನು ಶ್ರೀಧರಮೂರ್ತಿಯ ಮಕ್ಕಳನ್ನೂ, ಜಡೆಹಾಕಿ ಊಟಕ್ಕೆ ಬಡಿಸಿ ನೋಡಿಕೊಳ್ಳುತ್ತಿದ್ದಳು.

ದೊಡ್ಡ ಡಾಕ್ಟರು ಬಂದರು. ರಾಜೀವಿಯ ಶೋಚನೀಯ ಅಪಾಯ ಪರಿಸ್ಥಿತಿಯಲ್ಲಿ ಸ್ವತಃ ಬಳಿಯಲ್ಲಿದ್ದು ವಿಶೇಷ ಚಿಕಿತ್ಸೆ ಅವಶ್ಯವಿದ್ದರೆ ನೀಡುವುದಕ್ಕಾಗಿಯೇ ಆ ರಾತ್ರಿಯಲ್ಲಿ ಅವರು ಬಂದಿದ್ದರು. ಟಪ್ ಟಪ್ ಎಂದು ಬೂಟ್ಸಿನ ಸದ್ದು ಪ್ರಸವ ಗೃಹದತ್ತ ನಡೆದುಹೋದಂತೆ ಕ್ರಮವಾಗಿ ಕಡಿಮೆಯಾಗಿ ಕಡೆಗೊಮ್ಮೆ ಕರಗಿಹೋಯಿತು. ಲೇಡಿ ಡಾಕ್ಟರು ಬರುತ್ತಿದ್ದಂತೆ ಅವರಿಗೆ 'ನಮಸ್ಕಾರ' ಎಂದಿದ್ದರು ವೆಂಕಟೇಶ–ಸುಬ್ಬರಾಯರು.

"ಈಗ ಲಕ್ಷ್ಮಣ ಹೇಗಿದ್ದಾನೆ–ಪಾಲಿನ ವಿಚಾರ ಏನುಮಾಡಿದೆ ಸುಬ್ಬೂ?" ಎಂದ.

"ಏನುಮಾಡೋದು ಹೇಳು, ನಾನೇ ಅಲ್ಲಿ ಒಂದು ಎಂಟುದಿನವಾದರೂ ಇರಬೇಕು, ನೀನೇ ನೋಡ್ತಾ ಇದ್ದೀಯಲ್ಲ–ತರೀಕೆರೆಯಿಂದ ಇಲ್ಲಿಗೆ ಇಲ್ಲಿಂದ ಅಮ್ಮೇನ ಹಳ್ಳಿಗೆ ಓಡಾಡುವುದೇ ಆಗಿಹೋಗಿದೆ. ಇವಳು ಸುಖವಾಗಿ ಹಡೆದು ಬಿಟ್ಟರೆ ಸಾಕು–ಸಧ್ಯ. ಇವಳ ದೇಹಪ್ರಕೃತಿಯ ದೆಸೆಯಿಂದ ಇದ್ದ ರಜ

ವೆಲ್ಲಾ ಮುಗಿದುಹೋಯಿತು, ಅಲ್ಲಿ ಸಾಹೇಬರ ಹತ್ತಿರ ದಾಕ್ಷಿಣ್ಯ. ಅವರೂ ಪಾಪ, ಧರ್ಮ ಕರ್ಮ ತಿಳಿದೋರು ಸುಮ್ಮನಿದ್ದಾರೆ....''

"ಯಾರಲ್ಲಿ ಶಿರಸ್ತೆದಾರ್ರು ?"

"ಕೆಂಚಪ್ಪನೋರೂಂತ-ಅವರಿಗೆ ನೋಡು ಬ್ರಾಹ್ಮಣ ಲಿಂಗಾಯಿತ ವಕ್ಕಲಿಗಾ ಅನ್ನೋ ಭೇದ, ಸಂಕುಚಿತ ಭಾವ-ಕುಹುಕು ಕೆಡುಕುತನವಿಲ್ಲ-ನನ್ನ ಹೆಂಡ್ತಿ ಬಾಯಿಲೆ ವಿಚಾರವೆಲ್ಲಾ ಹೆದರಿ ಹೆದರಿಯೇ ಹೇಳಿದೆ. ಏಕಂದರೆ ಈ ಇತರ ಜಾತಿಯವರು ನಮ್ಮನ್ನು ಕಂಡರೆ ಸಾಮಾನ್ಯವಾಗಿ ಗುರ್ರೆಂದಿರುತ್ತಾರೆ. ಬ್ರಾಹ್ಮಣರನ್ನ ತುಳಿದು, ತೊಂದರೆ ಮಾಡಿದರೆ ಅವರಿಗೇನೋ ಒಂದು ತರಹ ಆನಂದ. ನಮ್ಮ ಕೆಂಚಪ್ಪನವರು ದೇವರಂಥಾ ಮನುಷ್ಯ ಸಹಾನುಭೂತಿಯಿಂದ ನನಗೆ ಬೇಕಾದ ಅನುಕೂಲತೆ ಮಾಡಿಕೊಟ್ಟಿದ್ದಾರೆ...."

"ಈ ಬ್ರಿಟಿಷ್‌ನೋರೆ ಈ ಬ್ರಾಹ್ಮಣ ಅಬ್ರಾಹ್ಮಣ ಅನ್ನೊ ವಿಷಬೀಜ ಬಿತ್ತಿದ್ದು. ಅದೀಗ ಬ್ರಹ್ಮರಾಕ್ಷಸವಾಗಿ ಕೂತಿದೆ, ಸ್ವರಾಜ್ಯ ಬಂದು ನಮಗೆ ನಾವು ಆಳಿಕೊಂಡಾಗ ಈ ವಿಷವೃಕ್ಷ ಬುಡಸಮೇತ ಕಿತ್ತೊಗೆದುಬಿಡುತ್ತೇವೆ...."

ಎಂದು ಈ ಜಸ್ಟಿಸ್ ಪಾರ್ಟಿಯ ರಾಜಕೀಯದ ಕೀಲಿ ಕೈಯ್ಯಂತಿದ್ದ ಬ್ರಾಹ್ಮಣ ಅಬ್ರಾಹ್ಮಣ ಸಮಸ್ಯೆಯ ತಪ್ಪನ್ನೂ ಬ್ರಿಟಿಷರ ಮೇಲೆ ಹಾಕಿ ಕೈ ಕೊಡವಿಕೊಂಡ ವೆಂಕಟೇಶ. ಮತ್ತೆ ಸುಬ್ಬರಾಯನೇ ಮಾತಾಡಿದ

"ನಮ್ಮ ಲಕ್ಷ್ಮಣ ಹೇಗಿದ್ದಾನೆ ಅಂತ ಕೇಳಿದೆಯಲ್ಲವೆ-ಅತ್ತೆಮ್ಮನವರ ಕೈಗೊಂಬೆ. ನನಗೆ ಒಂದು ನೂರು ರೂಪಾಯಿ ಕೊಡಬೇಕಾದರೆ ಅದನ್ನು ಅವಳೇ ಸಿಡಿಮಿಡಿಯ ಮುಖ ಮಾಡಿ ದುಮು ದುಮು ಅನ್ನುತ್ತಾ ಕೊಟ್ಟಿದ್ದಳು. ಒಟ್ಟಿನಲ್ಲಿ ಅವನದೇನೂ ನಡೆಯೋಲ್ಲ. ಮುಂದೆ ಪಾಲು ಆಗಬೇಕಾದರೆ ಈ ಮುಹತಾಯಿ ಹತ್ತಿರ ಹಣಾ ಹಣಿ ಜಗಳವನ್ನು ಆಡಬೇಕಾಗುತ್ತೋ ಏನೊ...."

"ತಿಪ್ಪಯ್ಯ ಇದ್ದಾರಲ್ಲ, ಬಿಡು ನೋಡ್ಕೋತಾರೆ"

"ಅದು ನಿಜಾನ್ನು, ಅವರ ಹೆದರಿಕೆಯಿಂದಲೆ ಅವನೂ ಒಂದು ಹದದಲ್ಲೆ ಇದ್ದಾನೆ....ಅವರೂ ಇಲ್ದೆ ಇದ್ದಿದ್ರೆ ನನ್ನ ಯಾರು ಕೇಳಬೇಕಿತ್ತು ?...."

ಹಾಗೇ ಮಾತು ಅಲ್ಲಿಂದ ಇಲ್ಲಿಂದ ಹರಿದು, ಜನಾರ್ಧನನ ಸಾವು, ಸುಶೀಲೆಯ ಕಷ್ಟ ಪರಿಸ್ಥಿತಿಯಿಂದ ಮತ್ತೆ ಪ್ರಕೃತ ರಾಜೀವಿಯ ಪ್ರಸವ ವೇದನೆಯತ್ತ ಸರಿಯಿತು.

ಆಗಲೇ ರಾತ್ರಿ ಹನ್ನೆರಡಾಯಿತು. ಒಂದಾಯಿತು. ಇಬ್ಬರೂ ತಂದ ಮಗ್ಗಲ ಹಾಸಿಗೆ ಹೊದ್ದು ಅಲ್ಲೇ ಉರುಳಿಕೊಂಡರು. ಮೂಲೆಯಲ್ಲಿ ತ್ರಿಪುರ ಸುಂದರಿ ಮುದುಡಿಕೊಂಡಿದ್ದಳು........ಕಳೆಯಿತು ಮತ್ತೆರಡು ಘಂಟೆ.

ಒಮ್ಮೆಲೆ ಧಾವಿಸಿ ಬಂದಳು ನರ್ಸ್ ಒಬ್ಬಳು. "ಗಂಡು ಕೂಸು".... ಎಂದಳು. ಮೂವರಿಗೂ ಎಚ್ಚರವಾಯಿತು.

"ಬಾಣಂತಿ ಚೆನ್ನಾಗಿದ್ದಾಳೆಯೆ?" ಸುಬ್ಬರಾಯ.

"ಮಗು ಹೇಗಿದೆ?" ತ್ರಿಪುರಸುಂದರಿ.

"ಡಾಕ್ಟ್ರು ಇನ್ನೂ ಅಲ್ಲೆ ಇದ್ದಾರೆಯೆ?" ವೆಂಕಟೇಶ.

"ಹೂಂ ಡಾಕ್ಟರಿದ್ದಾರೆ. ತುಂಬಾ ಶ್ರಮವಾಯಿತು, ಮಗು ಬದುಕಿದೆ. ಬಾಣಂತಿಯ ಜೀವದೊಂದಿಗೆ ಹೋರಾಡುತ್ತಿದ್ದಾರೆ ಡಾಕ್ಟ್ರಮ್ಮಾ ಅವರು"

ಎಂದು ಆ ನರ್ಸ್ ಹೇಳಿದಾಗ ಸುಬ್ಬರಾಯನಿಗೆ ಸಿಡಿಲೆರಗಿದಂತಾಯ್ತು. "ರಾಮರಾಮ" ಎಂದು ರಾಮನಾಮ ಜಪಿಸಿದ. ತಳಮಳನೆ ಹೊಟ್ಟೆ ಕುದಿಯಿತು. ಕಾತುರತೆಯಿಂದ ಕಾದಿದ್ದ ಡಾಕ್ಟರ ಹೇಳಿಕೆಗೆ.

..........................ಕಡೆಗೊಮ್ಮೆ ನೋಡಿದರು ರಾಜೀವಿಯನ್ನು. ನಿಸ್ತೇಜಳಾಗಿ ಬಿಳಿಯ ಹತ್ತಿಯ ಬೊಂಬೆಯಂತೆ ಮಲಗಿದ್ದಳು ಮಂಚದ ಮೇಲೆ ರಾಜೀವಿ. ಸುತ್ತಲೂ ನಿಂತಿದ್ದರು ವೆಂಕಟೇಶ, ಸುಬ್ಬರಾಯ, ತ್ರಿಪುರ ಸುಂದರಿ. ಬದಿಯ ತೊಟ್ಟಿಲಲ್ಲಿ ಪುಟ್ಟ ಕೂಸು ಗೀರು ಗಣ್ಣು ಮುಚ್ಚಿ ಮುಷ್ಟಿ ಹಿಡಿದು ವರವರನೆ ಅಳುತ್ತಾ ಮಲಗಿತ್ತು.

ವರ್ಷಾನು ವರ್ಷ ಬಾಳ್ವೆ ನಡೆಸಿ, ಅವಳೊಡನೆ ನಡೆಸಿದ ಜೀವನ ಮರುಕಳಿಸಿದಂತೆ, ಅಪ್ಪಳಿಸಿತು ಸುಬ್ಬರಾಯನನ್ನು.

ಮಲಗಿದ್ದಳು ರಾಜೀವಿ, ಇನ್ನೆಂದೆಂದೂ ಮೇಲೆ ಏಳಲಾಗದೆ, ಇನ್ನೆಂದೆಂದೂ ಕಣ್ಣೆತ್ತಿ ನೋಡಲಾಗದೆ ತನ್ನ ಇಹದ ಅಂತಿಮ ಯಾತ್ರೆಗೆ ಸಿದ್ಧಳಾಗಿ

ಮಲಗಿದ್ದಳು. ಸುಬ್ಬರಾಯನ ಕರುಳು ಕತ್ತರಿಸಿದಂತಿತ್ತು. ಅರ್ಧಾಂಗಿಯ ಸಾವು ಅವನನ್ನು ಅಧೀರನನ್ನಾಗಿ ಮಾಡಿತ್ತು.

ಜನಾರ್ಧನನ್ನು ಮಸಣಕ್ಕೆ ಒಯ್ದು ಇನ್ನೂ ಅದರ ನೋವು ಮಾಯವಾಗದ ಸಮಯದಲ್ಲೆ ರಾಜೀವಿಯ ಸಾವು.

“ನಾನೂ ಅಮ್ಮನ ಜೊತೇಲೇ ಹೋಗ್ತೀನೀ” ಎಂದು ಹೆಣದ ಮೇಲೆ ಬಿದ್ದು ಅನಾಥನಂತೆ ಅತ್ತ ಶಾಮಸುಂದರ.

“ಅಮ್ಮನ್ನೆಲ್ಲಿಗೆ ಕರೆದೊಯ್ತಿರೋ” ಎಂದು ರೋದಿಸಿ ಹೊರಳಾಡಿದಳು ಸರಸ್ವತಿ.

“ಇಂಥಾ ಕಷ್ಟ ಯಾಕೆ ಕೊಟ್ಟು ಪರೀಕ್ಷೆ ಮಾಡ್ತಿಯೋ” ಎಂದು ಉರುಳುರುಳಿ ಹೊರಳಿ ಹೊಟ್ಟೆಯ ಸಂಕಟ ತೋಡಿಕೊಂಡಳು ತ್ರಿಪುರಸುಂದರಿ.

‘‘ಎಳೆಯರ ಸಂಸಾರ ಏಕೆ ಹೀಗೆ ಮೊಗ್ಗಲ್ಲೆ ಜಿಗುಟಿ ಹಾಕುತ್ತಾನೋ ಆ ಪರಮಾತ್ಮ’’ ಎಂದಿದ್ದ ಶ್ರೀಧರಮೂರ್ತಿ.

“ಅನೀಮಿಯ, ರಕ್ತವಿಲ್ಲದೆ ಮೈಸುಡುವ ರೋಗಕ್ಕೆ ಈ ಬ್ರಿಟಿಷರ ಆಡಳಿತವೇ ಕಾರಣ’’ ಎಂದು ಬೊಬ್ಬೆ ಇಟ್ಟಿದ್ದ ವೆಂಕಟೇಶ.

ಸುಶೀಲೆ ಮಾತ್ರ ಸುಬ್ಬರಾಯನ ಹೀನ ಅದೃಷ್ಟಕ್ಕೆ ತನ್ನ ನಿರ್ಭಾಗ್ಯ ಪರಿಸ್ಥಿತಿಗೆ ಕಣ್ಣೀರ ಕಡಲನ್ನು ಹರಿಯಿಸಿದ್ದಳು. ಏನೇನೋ ಯೋಚನೆ ಈ ಮೂರು ತಿಂಗಳಲ್ಲಿ ಅವಳ ಮನದಲ್ಲಿ ಮೂಡಿ ಮಾಯವಾಗಿತ್ತು. ಅನಾಥ ಬಾಲಿಕಾಶ್ರಮ, ಮಕ್ಕಳ ಸೇವೆ, ದೀನಜನ ಸೇವೆ ಎಂದೆಲ್ಲಾ ಕನಸು ಕಂಡಿದ್ದಳು. ರಾಜೀವಿಯ ಮರಣದಿಂದಾಗಿ ಹೊಸ ಹೊಂಗನಸು ಕಾಣುತ್ತಿತ್ತು ಅವಳ ಒಳ ಮನಸ್ಸಿನಲ್ಲಿ. ‘‘ಸುಶೀಲತ್ತೇ....” ಎಂದು ತನ್ನನ್ನು ತಬ್ಬಿಕೊಂಡು ಅತ್ತ ಶಾಮಸುಂದರ, ಸರಸ್ವತಿಯರನ್ನು ನೋಡಿ ಈ ಅನಾಥ ಮಕ್ಕಳ ಗತಿ ಏನು ಎಂದು ಚಿಂತಿಸಿದ್ದಳು.

ಯಾರು ಅತ್ತರೇನು, ಜವರಾಯ ತನ್ನ ಕೆಲಸ ಮಾಡಿದ್ದ. ಇನ್ನು ಇಲ್ಲಿದ್ದವರೂ ತಮ್ಮ ಕೆಲಸ ಮಾಡಿಬಿಟ್ಟರು. ನಾಲ್ಕು ಮಂದಿ ಹೊತ್ತುಕೊಂಡು ಹೋಗಿ ಮಸಣದಲ್ಲಿಟ್ಟು ಬೆಂಕಿ ಇಟ್ಟು ಸುಬ್ಬರಾಯನ ಹೆಂಡತಿ ರಾಜೀವಿಯನ್ನು ಸುಟ್ಟುಬಂದರು.

ಶೂನ್ಯ–ಕತ್ತಲೆ; ಕಗ್ಗತ್ತಲೆ ಕವಿದು ಕಾರ್ಮೋಡ ತುಂಬಿತ್ತು ಅವನ ಬಾಳ ಬಾನಿನಲ್ಲಿ. ಕೋಲ್ಮಿಂಚು ಸುಳಿದು ಅವನ ಭಾವಗರ್ಭಿತ ಮುಖದ ದುಃಖದ ಗೆರೆಗಳನ್ನು ಕಾಣಿಸುತ್ತಿತ್ತು.

ನಡೆಯಲೇಬೇಕಿತ್ತು ಮುಂದಿನ ಬಾಳ್ವೆ. ತರೀಕೆರೆಗೆ ಹೋಗಿ ಕೆಲಸಕ್ಕೆ ಸೇರಬೇಕಿತ್ತು ಸುಬ್ಬರಾಯ. ಸರಸ್ವತಿ, ಶಾಮಸುಂದರರ ಓದು, ರಾಜೀವಿ ಬಿಟ್ಟು ಹೋದ ಪುಟ್ಟ ಪಾಪ, ಎಲ್ಲಕ್ಕೂ ಏನು ಗತಿ?

ದಿನ ಕರ್ಮಗಳೆಲ್ಲ ಮುಗಿದು, ಊರಿಗೆ ಹೊರಟಿದ್ದ ಸುಬ್ಬರಾಯ. ತ್ರಿಪುರಸುಂದರಿಯೇ ತರೀಕೆರೆಗೆ ಬಂದು ಕೊಂಚದಿನ ಅಣ್ಣನ ಜೊತೆಗಿದ್ದರೆ ಈ ಎಲ್ಲ ದುಃಖದ ವಾತಾವರಣ ಮರೆಯುವುದೆಂದು ಅಂದುಕೊಂಡಿದ್ದಳು.

ರೈಲ್ವೆ ಸ್ಟೇಷನ್ನು ತಲುಪಿದಾಗ ಮುಂಜಾನೆ ಎಂಟು ಘಂಟೆಯ ಹೊತ್ತಾಗಿತ್ತು. ಸುಬ್ಬರಾಯ ಹೊರಡಲು ಗಾಡಿಗೆ ಸಾಮಾನು ತುಂಬಿದ. ತ್ರಿಪುರಸುಂದರಿಯ ಕೈಯ್ಯಲ್ಲಿದ್ದ ಕೂಸನ್ನು, ಸ್ಟೇಷನ್ನಿನತನಕ ಕಳಿಸಲು ಬಂದ ಸುಶೀಲೆ ಎತ್ತಿಕೊಂಡು ನಿಂತಿದ್ದಳು.

ಶ್ರೀಧರಮೂರ್ತಿ, ವೆಂಕಟೇಶ ಇವರುಗಳೂ ಸ್ಟೇಷನ್ನಿಗೆ ಬಂದಿದ್ದರು. ಯಾರೂ ಮಾತೇ ಆಡಿರಲಿಲ್ಲ. ಶಾಮಸುಂದರ ಸುಶೀಲೆಯ ನೆರಿಗೆ ಹಿಡಿದು "ನೀನೂ ಬಾ ಸುಶೀಲತ್ತೆ" ಎಂದು ಅತ್ತಿದ್ದ.

ಕಿಟಕಿಯ ಬಳಿ ಗಲ್ಲದ ಮೇಲೆ ಕೈ ಇಟ್ಟು ಭಾವಗರ್ಭಿತವಾಗಿ ಸುಶೀಲೆಯನ್ನು ನೋಡಿದ ಸುಬ್ಬರಾಯ.

ತುಂಬು ಮೀಸೆ ಚಲುವ ಸುಬ್ಬರಾಯ, ಕೈಯ್ಯಲ್ಲಿನ ಅನಾಥ ಕೂಸು, ನೆರಿಗೆ ಹಿಡಿದೆಳವ ಶಾಮಸುಂದರ, ಬದಿಯಲ್ಲೇ ನಿಂತ ಸುಂದರ ಸರಸ್ವತಿ. ಅವಳಲ್ಲಿನ ಯಾವುದೋ ಅವ್ಯಕ್ತ ಚೇತನ ಅವಳನ್ನು ಪುಳುಕಿತಳನ್ನಾಗಿ ಮಾಡಿತು. ಪುಟ್ಟ ಪಾಪನಿಗೆ ಮುತ್ತು ಕೊಟ್ಟಳು.

ಇನ್ನೇನು ರೈಲು ಹೊರಡುವ ಹೊತ್ತಾಯಿತು. ಸುಶೀಲೆ ತ್ರಿಪುರಸುಂದರಿಗೆ ಕೆಳಗಿಳಿಯುವಂತೆ ಹೇಳಿದಳು. ಅವಳು ಇಳಿದಳು.

"ಈ ಅನಾಥ ಮಕ್ಕಳನ್ನು ನೋಡಿಕೊಂಡು ಸುಬ್ಬರಾಯರ ಜೊತೆ ಇನ್ನು ಇರುವವಳು ನಾನು–ತ್ರಿಪುರಸುಂದರಮ್ಮ ನೀವಿನ್ನು ಅವರ ಚಿಂತೆ ಬಿಡಿ"

—ಎಂದಾಗ ಎಲ್ಲರೂ ಅಚ್ಚರಿಗೊಂಡರು. ವೆಂಕಟೇಶನ ಕಣ್ಣಲ್ಲಿ ನೀರು ಮೂಡಿತು. ಶ್ರೀಧರಮೂರ್ತಿ ತ್ರಿಪುರಸುಂದರಿಗೆ "ಮನೆಗೇ ಬಾ" ಎಂದು ಹೇಳಿಬಿಟ್ಟ.

ಗಾರ್ಡ್ ಸೀ ...ದಿದ. ಕೈಯ್ಯಲ್ಲಿನ ಕೂಸಿನೊಡಗೂಡಿ ಸುಶೀಲೆ ಸುಬ್ಬರಾಯನಿದ್ದ ಗ... ...ಳು. ಸುಬ್ಬರಾಯ ಅವಳನ್ನು ಸ್ವಾಗತಿಸಿದ.

ಕಪ್ಪಾದ ದಪ್ಪ ... ಗುಳುತ್ತಾ ತರೀಕೆರೆಗೆ ರೈಲು ಹೊರಟು ಹೋಯಿತು.

ದಿಟ್ಟತನದಿಂದ ಸುಬ್ಬರಾ... ...ನಲ್ಲಿ ಕುಳಿತಳು ಸುಶೀಲೆ. ಸುಬ್ಬರಾಯ ಕೃತಜ್ಞತೆಯಿಂದ ಅವಳತ್ತ ... ...ೋಡಿದ.

ರೈಲೂ ಸಾಗೇ ಸಾಗಿತ್ತು.

|| ಓಂ ಶಾಂತಿ ಶಾಂತಿ ಶಾಂತಿಃ ||